


ನೆಮ್ಮದಿಯ ನಾಳೆ ನಮ್ಮದು

# ಹೊಸತು

ಜುಲೈ ೨೦೦೭
ಬೆಲೆ : ರೂ. ೧೨





# ೧೮೫೭
# ಪ್ರತಿರೋಧ





ಕೊಂಚಾವರಂ ಲಂಬಾಣಿ ಮಹಿಳೆ



ಅಳಿದುಳಿದ ಗುಮ್ಮಟಗಳು, ಅಷ್ಟೂರ, ಬೀದರ ಜಿಲ್ಲೆ

# ಛಾಯಾಚಿತ್ರಕಾರ ಮಹ್ಮದ ಅಯ್ಯಾಜುದ್ದೀನ



ಛಾಯಾಚಿತ್ರಕಾರ ಮಹ್ಮದ ಅಯ್ಯಾಜುದ್ದೀನ ಗುಲಬರ್ಗಾ ಜಿಲ್ಲೆ ಚಿಂಚೋಳಿ ತಾಲೂಕು ಗಡಿಕೇಶ್ವರ ಗ್ರಾಮದವರಾಗಿದ್ದು ಬಾಲ್ಯದಿಂದಲೇ ಚಿತ್ರಕಲೆಯಲ್ಲಿ ಆಸಕ್ತಿಯುಳ್ಳವರಾಗಿದ್ದಾರೆ. ಗ್ರಾಫಿಕ್ ಡಿಸೈನರ್ ಮತ್ತು ಛಾಯಾಚಿತ್ರಕಾರರಾಗಿ ಅವರು ಸೇವೆ ಸಲ್ಲಿಸಿದ್ದಾರೆ.

ಐತಿಹಾಸಿಕ ಸ್ಮಾರಕ ಛಾಯಾಚಿತ್ರಗಳನ್ನು ವಿಶಿಷ್ಟ ಕೋನಗಳಿಂದ ಸೆರೆಹಿಡಿದಿದ್ದಾರೆ. ಅವರು ಅಯ್ಯಾಜ ಆರ್ಟ್ ಗ್ಯಾಲರಿ ಸ್ಥಾಪಿಸಿದ್ದಾರೆ. ಹಲವಾರು ಪ್ರಶಸ್ತಿಗಳನ್ನು ಪಡೆದಿದ್ದಾರೆ.

ಲೇಖಕ : ನಾರಾಯಣ ಎಂ ಜೋಶಿ, ಕಲಾವಿದರು ಮತ್ತು ಬರಹಗಾರರು, ಛಾಯಾಚಿತ್ರಕಾರರು,
ನಂ. ೨-೮೨೬, ಎಂ. ಆರ್. ಎಂ. ಸಿ. ಎದುರುಗಡೆ, ಸೇಡಂ ರಸ್ತೆ, ಗುಲಬರ್ಗಾ - ೫೮೫೧೦೫.



ಆಷ್ಟೂರ ಗುಮ್ಮಟ, ಬೀದರ ಜಿಲ್ಲೆ

ಮುಗ್ಧ ನಗೆ



ಗುಲಬರ್ಗಾ ಜಾಮಾಮಸೀದಿ ಕೋಟೆಯ ಒಳಗಿನ ದೃಶ್ಯ



# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




ಚಿತ್ರಗಳು : ಶ್ರೀಹರಿ, ಶ್ರೀಕೃಷ್ಣ ಕೆದಿಲಾಯ, ಮೋನಪ್ಪ, ಜಿ. ಎಂ. ಬೊಮ್ನಳ್ಳಿ, ಹರಿಣಿ, ಕೆ. ಕೆ. ಮಕಾಳಿ, ರಾಂಚಂದ್ರ ಕೊಪ್ಪಲು, ಎನ್. ಆರ್. ಬೊಮ್ನಳ್ಳಿ, ಗುಜ್ಜಾರ್
ಮುಖಚಿತ್ರ : ೧೮೫೭ರ ಪ್ರತಿರೋಧ (ಆಧಾರ : ವಿವಿಧ ಮೂಲಗಳಿಂದ)
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಚು**ನಾವಣೆಗಳ ಸಂದರ್ಭದಲ್ಲಿ ಕೆಲವು ರಾಜಕೀಯ ಪಕ್ಷಗಳು ಆಶ್ವಾಸನೆಗಳನ್ನು ಕೊಡುವುದು ಅಪರೂಪವಲ್ಲ. ಆದರೆ ಗೆದ್ದ ಅಥವಾ ಸೋತ ನಂತರ ಅವನ್ನೆಲ್ಲಾ ಮರೆತುಬಿಡುವುದು ಸಹಜವಾಗಬಾರದು. ಹೇಳಿದ್ದುದನ್ನು ಹೇಳಿಯೇ ಇರಲಿಲ್ಲವೆಂದು ಸಾಧಿಸುವುದು ಹೇಯವಾದ ಹಾದಿ. ಭಾರತೀಯ ಜನತಾ ಪಕ್ಷವು ರಾಜಸ್ತಾನದಲ್ಲಿ ಈಚೆಗೆ ಅಂತಹ ಹಾದಿಯನ್ನು ಹಿಡಿದದ್ದು ಆಶ್ವಾಸನೆಯೊಂದನ್ನು ಪೂರೈಸಲಾಗದಿದ್ದರಿಂದ ಮಾತ್ರವೇ ಅಲ್ಲ, ಆ ದಿಕ್ಕಿನಲ್ಲಿ ಕಿಂಚಿತ್ತು ಪ್ರಯತ್ನವನ್ನೂ ಮಾಡದಿದ್ದುದರಿಂದ. ಗುಜ್ಜರ್ ಎಂಬ ಒಂದು ಪಂಗಡದವರನ್ನು ಪರಿಶಿಷ್ಟ ಬುಡಕಟ್ಟುಗಳ ಪಟ್ಟಿಗೆ ಸೇರಿಸುವುದಾಗಿ ಚುನಾವಣಾ ಪ್ರಚಾರ ಭಾಷಣಗಳಲ್ಲಿ ಹೇಳಿದ್ದು, ಈಗ ಭಾಜಪ ಅಧ್ಯಕ್ಷ ರಾಜನಾಥ ಸಿಂಗರು ಚುನಾವಣಾ ಪ್ರಣಾಲಿಕೆಯಲ್ಲಿ ಅಂತಹ ಮಾತುಗಳಿಲ್ಲವೆಂದು ವಾದಿಸಿದ್ದು ವಾತಾವರಣವು ಬಿಗಡಾಯಿಸಲು ಕಾರಣವಾಯಿತು. ನ್ಯಾಯಾಲಯಕ್ಕೆ ಕೊಟ್ಟಿದ್ದ ಆಶ್ವಾಸನೆಯನ್ನು ಉಳಿಸಿಕೊಂಡಿರದ ಪಕ್ಷವು ಪ್ರಚಾರ ಭಾಷಣದ ಮಾತುಗಳನ್ನು ಉಳಿಸಿಕೊಳ್ಳಬೇಕೆ ? ಇದು ರಾಜನಾಥ ಸಿಂಗರ ತರ್ಕವಿದ್ದಂತೆ ಕಾಣುತ್ತದೆ. ಕೇಂದ್ರ ಸರ್ಕಾರಕ್ಕೆ ಗುಜ್ಜರರ ಬಗ್ಗೆ ಒಂದು ಪ್ರಸ್ತಾವವನ್ನು ಕಳಿಸಲಾಗದಂತಹ ಸನ್ನಿವೇಶ ರಾಜಸ್ತಾನದಲ್ಲಿದೆ. ಕೇಂದ್ರವು ಏನು ತೀರ್ಮಾನ ಕೈಗೊಳ್ಳಬಹುದೆಂಬುದು ಸದ್ಯದಲ್ಲಿ ತಿಳಿಯುವಂತಿಲ್ಲ. ಶಿಕ್ಷಣ ಮತ್ತು ಉದ್ಯೋಗ ಕ್ಷೇತ್ರಗಳಲ್ಲಿ ಮೀಸಲಾತಿಯು ದೊರೆಯುವುದು ಆಯಾ ಜಾತಿಗಳಲ್ಲಿ ಸ್ವಲ್ಪ ಮುಂದಕ್ಕೆ ಬಂದಿರುವವರಿಗೆ ಮಾತ್ರ. ಕಾಲೇಜು ಶಿಕ್ಷಣದ ಹಂತವನ್ನು ತಲುಪದಿರುವವರಿಗೆ ಮೀಸಲಾತಿಯ ಪ್ರಯೋಜನ ಇರುವುದಿಲ್ಲ. ಪ್ರಾಥಮಿಕ ಹಂತದ ಶಿಕ್ಷಣವನ್ನು ವ್ಯಾಪಕಗೊಳಿಸುವಂತೆ ಗುಜ್ಜರರೂ ಸೇರಿದಂತೆ ಎಲ್ಲರೂ ಆಗ್ರಹಪಡಿಸಬೇಕು. ಇಲ್ಲದಿದ್ದರೆ ಮೀಸಲಾತಿಗಾಗಿ ನಡೆಯುವ 'ಹೋರಾಟ'ಗಳು ಭಾವನಾತ್ಮಕವಾಗಿ ಆರಂಭವಾಗಿ ಹಾಗೆಯೇ ಮುಕ್ತಾಯವಾಗುತ್ತವೆ. ಗುಜ್ಜರ್-ಮೀನ ದ್ವಂದ್ವವು ಇಂತಹ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿದೆ. ಚುನಾವಣೆಯ ಸಂದರ್ಭದಲ್ಲಿ ಯಾವ ಪಕ್ಷವೂ ತನಗೆಟುಕದ ಭರವಸೆಗಳನ್ನು ನೀಡಬಾರದೆಂಬ ನೀತಿಪಾಠವನ್ನು ಕಲಿಸಬೇಕಾಗಿದೆ.

ಪಂಜಾಬಿನಲ್ಲಿ ಶಿರೋಮಣಿ ಅಕಾಲಿ ದಳವು ತನ್ನ ಧರ್ಮಶ್ರದ್ಧೆಗೆ ಧಕ್ಕೆಯುಂಟಾಯಿತೆಂದು ಗಲಭೆ ಎಬ್ಬಿಸಿದ್ದು ಇಂಥದೇ ಇನ್ನೊಂದು ಪ್ರಸಂಗ. ಎಂಥವೋ ರಾಜಕೀಯ ಆಕಾಂಕ್ಷೆಗಳ ಪೂರೈಕೆಗೆ ಧರ್ಮಶ್ರದ್ಧೆಯ ಹೆಸರಿನಲ್ಲಿ ನಾಟಕೀಯ ಘೋಷಣೆಗಳು ಈಚಿನ ಕೆಲವು ವರ್ಷಗಳಲ್ಲಿ ವಿಪರೀತ ಹೆಚ್ಚಿವೆ. (ನಮ್ಮಲ್ಲಿ 'ಆನು ದೇವಾ ಹೊರಗಣವನು' ಪುಸ್ತಕದ ಬಗ್ಗೆ ನಡೆಯುತ್ತಿರುವ ನಾಟಕವೂ ಅಂತಹದ್ದೇ. ಆ ನಾಟಕದಲ್ಲಿ ಶ್ರೀ ಭೀಮಣ್ಣ ಖಂಡ್ರೆಯವರು ಪಾತ್ರಧಾರಿಯಾದರೆ ವಿಶೇಷವಲ್ಲ; ಆದರೆ ನಾಡಿಗೆ ಓಜರಾದ ಮಾನ್ಯ ಪಾಟೀಲ ಪುಟ್ಟಪ್ಪನವರು ಪಾತ್ರಧಾರಿಗಳಾಗಿ ಕತ್ತಿ ಝಳಪಿಸುವುದು ಚಿಂತೆಗೀಡುಮಾಡುವಂಥದು). ಯಾರೋ 'ಗುರು'ವು ಗುರು ಗೋವಿಂದ ಸಿಂಗರಂತೆ ಉಡುಪು ಧರಿಸಿದರೆ ಉದ್ವೇಗವು ಈ ಮಟ್ಟಕ್ಕೆ ಹೋಗುತ್ತದೆಂದು ನಿರೀಕ್ಷಿಸಲಾಗದು. ಉದ್ವೇಗಕ್ಕೆ ಬೇರೆ ಅಘೋಷಿತ ಕಾರಣಗಳಿರುತ್ತವೆ. ಭಟಿಂಡಾ ಮತ್ತಿತರ ಜಿಲ್ಲೆಗಳಲ್ಲಿ ನೆಲೆಸಿರುವ ಸಿಖ್ಖರ ಪೈಕಿ ಹೆಚ್ಚು ಹಿಂದುಳಿದಿರುವವರು ಆ ಧರ್ಮದ ಜಾತಿಗಳ ಏಣಿಯಲ್ಲಿ ಕೆಳಹಂತಕ್ಕೆ ಸೇರಿದವರು. ಮೂಲತಃ ಇದು ಜಾತಿ ವೈಮನಸ್ಯದ ಹೊಡೆದಾಟವಾದರೂ ಅದರಲ್ಲಿ ರಾಜಕೀಯ ಮತ್ತು ಆರ್ಥಿಕ ವಿಷಯಗಳ ಹಿನ್ನೆಲೆ ಇದೆ. ತಮ್ಮ ತಮ್ಮ ಅನುಚಿತ ವರ್ತನೆಗಳನ್ನು ಸಮರ್ಥಿಸಿಕೊಳ್ಳಲು ಅಕಾಲಿ ದಳದಂತೆ ಭಟಿಂಡಾ 'ಗುರು'ಗಳೂ ಮುಂದಾಗಿದ್ದಾರೆ. ಕೆಳವರ್ಗಗಳನ್ನು ತನ್ನ ಹತೋಟಿಯಲ್ಲಿ ಸದಾ ಇಟ್ಟುಕೊಂಡಿರಬೇಕೆಂಬ ಅಕಾಲಿ ದಳದ ಆಶಯವು ಇನ್ನೆಷ್ಟು ಕಾಲ ಊರ್ಜಿತವಾಗುತ್ತದೆಂದು ಕಾದು ನೋಡಬೇಕು.

* * *

ರಾಷ್ಟ್ರಪತಿಗಳ ಚುನಾವಣೆಗೆ ಸಿದ್ಧತೆಗಳು ಭರದಿಂದ ನಡೆದಿವೆ. ಶ್ರೀಮತಿ ಪ್ರತಿಭಾ ಪಾಟೀಲ್ ಮತ್ತು ಶ್ರೀ ಶೇಖಾವತ್ ಕಣದಲ್ಲಿರುತ್ತಾರೆಂದು ಭಾವಿಸಲಾಗಿದೆ. ಬರುವ ದಿನಗಳಲ್ಲಿ ಏನಾದರೂ ಬದಲಾವಣೆಗಳುಂಟಾದರೆ ಆಶ್ಚರ್ಯವಿಲ್ಲ. ಉಪರಾಷ್ಟ್ರಪತಿಗಳನ್ನು ಚುನಾವಣೆಯ ಅನಿಶ್ಚಿತತೆಗಳಿಗೆ ಸಿಲುಕಿಸಲು ಶ್ರೀ ವಾಜಪೇಯಿಯವರು ಇಚ್ಛಿಸದಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಅವರೋ, ಅವರಲ್ಲದಿದ್ದರೆ ಬೇರೆಯವರೋ, ಭಾಜಪದ ಅಭ್ಯರ್ಥಿಯಾಗಿ ಪ್ರತಿಭಾ ಪಾಟೀಲರಿಗೆ ಸವಾಲನ್ನೊಡ್ಡಿದರೆ ಆಗ ಪ್ರತಿಭಾ ಅವರ ಪ್ರತಿಭೆಗೆ ಹೆಚ್ಚು ಮೆರುಗು ಬರಬಹುದು. ಶೇಖಾವತ್ ಅವರು ತಮ್ಮ ಪಕ್ಷದ ನಿಷ್ಠಾವಂತ ಕಾರ್ಯಕರ್ತರು, ಮುಖ್ಯಮಂತ್ರಿಗಳಾಗಿದ್ದವರು. ಅಂತಹ ಸ್ಥಾನಗಳಲ್ಲೇ ಮುಂದುವರಿಯುವುದು ಅವರ ಹಕ್ಕು; ಅವರ ಮನಸ್ಸು ರಾಷ್ಟ್ರಪತಿ ಸ್ಥಾನಕ್ಕೆ ಸೂಕ್ತವಾದುದಲ್ಲ. ಏಕೆಂದರೆ, ವಿವಿಧ ಕೋಮುಗಳ ಬಗ್ಗೆ ಅವರ ನಿಲುವು ದೇಶವನ್ನು ವಿಭಜಿಸುವಂಥದು. ಪ್ರತಿಭಾ ಅವರು ದೇಶದ ರಾಷ್ಟ್ರಪತಿಗಳ ಪೈಕಿ ಮೊಟ್ಟಮೊದಲ ಮಹಿಳೆ. (ಅವರೇ ಆಯ್ಕೆಯಾಗುತ್ತಾರೆಂಬ ಆಶಯವು ಪೂರೈಕೆಯಾದರೆ,

೧೪ನೇ ಪುಟಕ್ಕೆ




ಸಂಪುಟ-೮ ಸಂಚಿಕೆ-೧೨ ಜುಲೈ ೨೦೦೭

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@vsnl.com**
**website : www.navakarnatakabooks.com**


## ಉನ್ನತ ಶಿಕ್ಷಣದ ವಧೆ

**ಸಂಪಾದಕೀಯ**

**ನ**ಮ್ಮ ರಾಷ್ಟ್ರದಲ್ಲಿ ಉನ್ನತ ಶಿಕ್ಷಣವು ದಿಕ್ಕುತಪ್ಪಿ, ಉದ್ದೇಶಿತ ಫಲವನ್ನು ನೀಡುತ್ತಿಲ್ಲವೆಂದು ಪ್ರಧಾನ ಮಂತ್ರಿಗಳು ಉದ್ಗರಿಸಿದ್ದಾರೆ. ಅವರ ಸರ್ಕಾರ ಹಾಗೂ ಅವರ ಹಿಂದಿನ ಸರ್ಕಾರ ಇದಕ್ಕೆ ಹೊಣೆಗಾರರೆಂದು ಹೇಳಿಲ್ಲದಿರುವುದು ಜಾಣತನವಿರಬಹುದು, ಆದರೆ ಇಂದಿನ ನೀತಿಗಳ ವೈಫಲ್ಯಕ್ಕೆ ಕಾರಣಗಳು ಸರ್ಕಾರದ ಬಾಗಿಲಿಗೆ ನಮ್ಮನ್ನು ಕೊಂಡೊಯ್ಯುತ್ತವೆ. ಕರ್ನಾಟಕದ ಉನ್ನತ ಶಿಕ್ಷಣ ಕ್ಷೇತ್ರದ ಕಾರ್ಯವೈಖರಿಯನ್ನು ಪ್ರಧಾನಿ ನೋಡಿದ್ದರೆ ಇನ್ನೆಷ್ಟು ದೊಡ್ಡ ಉದ್ಗಾರ ಹೊರಡಿಸುತ್ತಿದ್ದರೆಂಬುದನ್ನು ಊಹಿಸಿಕೊಳ್ಳಬೇಕು. ಬೆಂಗಳೂರು ವಿಶ್ವವಿದ್ಯಾನಿಲಯವು ಅಕ್ಟೋಬರ್ ನಂತರ ಮೂರು ತಿಂಗಳ ರಜೆ ಘೋಷಿಸಿ ವಿದ್ಯಾರ್ಥಿಗಳನ್ನು ಕಂಗಾಲಾಗಿಸಿದೆ. ಅಂತಿಮ ಪದವಿ ಪರೀಕ್ಷೆಗಳ ಫಲಿತಾಂಶ ಹೊರಬೀಳುವ ವೇಳೆಗೆ ರಾಜ್ಯದ ಹೊರಗಿನ ಎಲ್ಲ ಸಂಸ್ಥೆಗಳಲ್ಲೂ ಪ್ರವೇಶ ಮುಗಿದಿರುತ್ತದೆ. ನಮ್ಮ ವಿದ್ಯಾರ್ಥಿಗಳು ಅವಕಾಶ ವಂಚಿತರಾಗುತ್ತಾರೆ. ಒಂದು ವರ್ಷದ ನಷ್ಟವನ್ನು ತುಂಬಿಕೊಡಲು ಯಾರಿಗೂ ಸಾಧ್ಯವಾಗುವುದಿಲ್ಲ. ಈ ವಿಶ್ವವಿದ್ಯಾಲಯದ ಆರನೆಯ ಸೆಮೆಸ್ಟರ್ ಪರೀಕ್ಷೆಗಳು ಮುಗಿದಿವೆ. ಆದರೆ, ಐದನೆಯ ಸೆಮೆಸ್ಟರಿನ ಅಂಕಪಟ್ಟಿಗಳನ್ನು ಇನ್ನೂ ನೀಡಲಾಗಿಲ್ಲ! ಬಿಜಾಪುರ ಮಹಿಳಾ ವಿಶ್ವ ವಿದ್ಯಾಲಯದ ಕತೆ ಇದಕ್ಕಿಂತಲೂ ದಾರುಣವಾಗಿದೆ. ವಿವಿಧ ವಿಭಾಗಗಳಿಗೆ ಅಧ್ಯಾಪಕರ ಆಯ್ಕೆ ನಡೆದು ಒಂದು ವರ್ಷವಾಗಿದೆ. ಆದರೆ, ನೇಮಕಾತಿ ಆಗಿಲ್ಲ. ಅಧ್ಯಾಪಕರಿಲ್ಲವೆಂದು ವಿಭಾಗಗಳನ್ನು ಮುಚ್ಚಬೇಕಾಗಿ ಬಂದಿದೆ, ವಿದ್ಯಾರ್ಥಿನಿಯರನ್ನು ಬೀದಿಗೆ ತಳ್ಳಲಾಗಿದೆ. ಅಲ್ಲಿಯ ಕುಲಪತಿಗಳು ಹಗರಣಗಳಲ್ಲಿ ಸಿಲುಕಿಕೊಂಡಿದ್ದಾರೆಂದು ಒಂದು ಅಧಿಕೃತ ವರದಿ ಹೇಳಿದೆ. ಆದರೆ, ಯಾವುದೇ ಕ್ರಮ ಕೈಗೊಳ್ಳಲಾಗಿಲ್ಲ. ಮೈಸೂರಿನ ಮುಕ್ತ ವಿಶ್ವವಿದ್ಯಾಲಯದಲ್ಲಿ ಮುಖ್ಯಮಂತ್ರಿಗಳು ಕಾನೂನುಬಾಹಿರ ಕ್ರಮವನ್ನು ಅನುಸರಿಸಬೇಕೆಂದು ಕೆಲವು ನೌಕರರಿಗೆ ಪ್ರಚೋದನೆ ನೀಡಿಬಂದರು. ಆದರೆ ಸಮಸ್ಯೆ ಪರಿಹಾರವಾಗಿಲ್ಲ. ಇಲ್ಲದ ಸ್ಥಾನಗಳಿಗೆ ಬೇಕಾಬಿಟ್ಟಿ ನೌಕರರನ್ನು ನೇಮಕ ಮಾಡಿದ್ದವರ ಬಗ್ಗೆ ಕ್ರಮ ತೆಗೆದುಕೊಳ್ಳದೆ ಹಾಲಿ ಅಧಿಕಾರಿಗಳನ್ನು ದೂಷಿಸುವ ಪ್ರಸಂಗ ಜರುಗಿದೆ. ಬೆಂಗಳೂರಿನ ಮುಕ್ತ ವಿಶ್ವವಿದ್ಯಾಲಯದ ಅಧಿಕಾರಿಗಳು ತಮ್ಮ ವ್ಯಾಪ್ತಿಯನ್ನು ಅಂತರರಾಷ್ಟ್ರೀಯ ಮಟ್ಟಕ್ಕೇರಿಸುವುದಾಗಿ ಘೋಷಿಸಿಕೊಂಡು ಪ್ರವಾಸಗಳನ್ನು ಕೈಗೊಂಡ ಘಟನೆ ನಡೆದಿದೆ. ವೈದ್ಯಕೀಯ ವಿಶ್ವವಿದ್ಯಾಲಯದಲ್ಲಿ ಉಪಕುಲಪತಿಗಳ ಚಾರಿತ್ರ್ಯವು ಪ್ರಶ್ನಾರ್ಹವಾಗಿದೆಯೆಂದು ತನಿಖಾ ವರದಿಯೊಂದು ತಿಳಿಸಿದೆ. ಇದೆಲ್ಲಾ ನಡೆಯುತ್ತಿರುವಾಗ ಅದಾವ ಉದ್ದೇಶದಿಂದಲೋ ಏನೋ ಉನ್ನತ ಶಿಕ್ಷಣ ಸಚಿವರು ಚೀಣಾಕ್ಕೆ ತೆರಳಿದ್ದಾರೆ. ಉನ್ನತ ಶಿಕ್ಷಣ ಕ್ಷೇತ್ರದ ನೀರೋಗಳು ಒಟ್ಟೊಟ್ಟಿಗೆ ಪಿಟೀಲುಗಳನ್ನು ನುಡಿಸುತ್ತಿದ್ದಾರೆ. 'ಬಾರಿಸುತ್ತಿದ್ದಾರೆ' ಎಂದರೆ ಅದು ಹೆಚ್ಚು ಸಮಂಜಸವಾದೀತು.

ಸರ್ಕಾರವು ಈ ವರ್ಷ ೧೨೪ ಪದವಿ ಕಾಲೇಜುಗಳನ್ನು ಹೊಸದಾಗಿ ತೆರೆಯುವುದಾಗಿ ಹೇಳಿಕೊಂಡಿದೆ. ಕಾನೂನುರೀತ್ಯಾ ಕಾಲೇಜು ಆರಂಭಿಸಲು ಮೊದಲು ಆಯಾ ವಿಶ್ವವಿದ್ಯಾಲಯಗಳಿಂದ ಮಾನ್ಯತೆ ಪಡೆಯಲು ಒಂದು ಕ್ರಮವಿದೆ. ಅದನ್ನು ಉಪೇಕ್ಷಿಸಿ ಶಂಕರಮೂರ್ತಿಯವರು ಶೈಕ್ಷಣಿಕ ಪಾಳೆಗಾರಿಕೆಯ ಪ್ರವೃತ್ತಿಯನ್ನು ಪ್ರದರ್ಶಿಸುತ್ತಿದ್ದಾರೆ ಮತ್ತು ರಾಜ್ಯದ ಉಪಕುಲಪತಿಗಳೆಲ್ಲಾ ಸದಸ್ಯರಾಗಿರುವ ಅಂತರ ವಿಶ್ವವಿದ್ಯಾಲಯ ಸಮಿತಿಯು ತನ್ನ ಘನತೆಯನ್ನು ಗಾಳಿಗೆ ತೂರಿ ಶಂಕರಮೂರ್ತಿಯವರ ತಾಳಕ್ಕೆ ಕುಣಿಯುತ್ತಿದೆ. ಮಾನ್ಯತೆಗೆ ಅರ್ಜಿ ಹಾಕದೆ ಕಾಲೇಜು ಹೇಗೆ ಆರಂಭಿಸುತ್ತೀರೆಂದು ಕೇಳುವ ಕರ್ತವ್ಯದಿಂದ ಉಪಕುಲಪತಿಗಳೆಲ್ಲಾ ವಿಮುಖರಾಗಿರುವುದು ಖಂಡನೀಯ. ಕಾಲೇಜುಗಳಿಗೆ ವಿದ್ಯಾರ್ಥಿಗಳು ಬರಲಿ ಬಿಡಲಿ, ಅಧ್ಯಾಪಕರಿರಲಿ ಬಿಡಲಿ, ೧೨೪ ಕಾಲೇಜುಗಳನ್ನು ಆರಂಭಿಸುವ ಶಾಸ್ತ್ರ ಮಾಡಿ, ಅವುಗಳ ಕಟ್ಟಡಗಳಿಗೆಂದು ಹಣವನ್ನು ಮೀಸಲಿಟ್ಟು, ಅದರಲ್ಲಿ ದೊಡ್ಡ ಪ್ರಮಾಣದ ಮೊತ್ತವನ್ನು ಯಾರ್‍ಯಾರು ಎಷ್ಟೆಷ್ಟು ಸಾಧ್ಯವೋ ಅಷ್ಟಷ್ಟನ್ನು ನುಂಗುವುದು ಮೂಲೋದ್ದೇಶವೆಂಬ ಅನುಮಾನ ಮೂಡುವಂತಾಗಿದೆ. ಪ್ರಾಥಮಿಕ ಶಾಲೆಗಳಿಗೆ ಕಟ್ಟಡಗಳಿಲ್ಲದಿದ್ದರೆ ಚಿಂತೆಯಿಲ್ಲ, ವಿದ್ಯಾರ್ಥಿಗಳೇ ಇಲ್ಲವಾಗುವಂತಹ ಕಾಲೇಜುಗಳನ್ನು ಕಾನೂನುಬಾಹಿರವಾಗಿ ಸ್ಥಾಪಿಸುವ ನಿರ್ಲಜ್ಜ ಪರಾಕ್ರಮ ನಮ್ಮದಾಗುತ್ತಿದೆ! ಎರಡನೆಯದಾಗಿ, ವಿಶ್ವವಿದ್ಯಾಲಯಗಳ ಸ್ವಾಯತ್ತತೆಯನ್ನು ಕಡೆಗಾಣಿಸಿ ಸ್ನಾತಕೋತ್ತರ ತರಗತಿಗಳಿಗೆ ಪ್ರವೇಶ ಬಯಸುವವರಿಗೆ ರಾಜ್ಯಮಟ್ಟದ ಅರ್ಹತಾ ಪರೀಕ್ಷೆಯನ್ನು ನಡೆಸುವುದಾಗಿ ಶಿಕ್ಷಣ ಸಚಿವರು ಹೇಳಿದರು, ಸಮಿತಿಯು 'ಒಪ್ಪಿತು' ಮತ್ತು ಈಗ ಅರ್ಜಿಗಳನ್ನು ಕರೆಯಲಾಗಿದೆ. ಒಂದೊಂದು ವಿಷಯದ ಪರೀಕ್ಷೆಗೂ ವಿದ್ಯಾರ್ಥಿಗಳು ೪೦೦ ರೂಪಾಯಿ ಶುಲ್ಕ ಕಟ್ಟಬೇಕು. 'ಹಳ್ಳಿಯ ಜನರ ಉದ್ಧಾರ' ತಮ್ಮ ಆಕಾಂಕ್ಷೆಯೆಂದು ಹೇಳಿಕೊಳ್ಳುವ ಮುಖ್ಯಮಂತ್ರಿಗಳು ಇದನ್ನು ಹೇಗೆ ಸಮರ್ಥಿಸಿಕೊಳ್ಳುತ್ತಾರೋ ತಿಳಿಯದು. ಆರ್ಥಿಕವಾಗಿ ಅಶಕ್ತರಾದವರಿಗೆ ನಮ್ಮ ರಾಜ್ಯದಲ್ಲಿ ಉನ್ನತ ಶಿಕ್ಷಣವೆಂಬುದು ಮರೀಚಿಕೆ. ತುಮಕೂರಿನ ಒಬ್ಬ ಬಸ್ ಕಂಡಕ್ಟರ್‌ನ ಮಗಳು ಅರ್ಹತಾ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ವ್ಯಾಸಂಗಕ್ಕಾಗಿ ಆಯ್ಕೆಯಾದರೆ ಆಕೆ ನಿಜಕ್ಕೂ ಅಲ್ಲಿಗೆ ಹೋಗಿ ವಿದ್ಯಾಭ್ಯಾಸ ಮುಂದುವರಿಸಲು ಸಾಧ್ಯವಾದೀತೆ? ಸ್ವ-ಸ್ಥಳದಲ್ಲೇ ಅಡ್ಡಿಗಳನ್ನೆದಿರಿಸುವವರು ಪರಸ್ಥಳಗಳಿಗೆ ಹೋಗಿ ವ್ಯಾಸಂಗ ಮಾಡಿಯಾರೆ? ಆರ್ಥಿಕ ಚೈತನ್ಯ ಮತ್ತು ಸಾಮಾಜಿಕ ಕಟ್ಟಳೆಗಳೆರಡೂ ಅವರ ವ್ಯಾಸಂಗವನ್ನು ನಿರ್ಬಂಧಿಸುತ್ತವೆ. ಒಟ್ಟಿನಲ್ಲಿ ಶ್ರೀಮಂತರಿಗೆ ಮಾತ್ರ ಸ್ನಾತಕೋತ್ತರ ಪದವಿ ವ್ಯಾಸಂಗ ಎಂದಾಯಿತು; ಹಿಂದುಳಿದವರು ವಿದ್ಯಾರ್ಹತೆ ಗಳಿಸುವುದು ಬೇಡ! ವಾಜಪೇಯಿ ಸರ್ಕಾರವು ಬಿರ್ಲಾ-ಅಂಬಾನಿ ವರದಿಯನ್ನು ಪಡೆದಿತ್ತು. ಶಿಕ್ಷಣ ಯಾರಿಗೆ ಮತ್ತು ಯಾವುದು ಶಿಕ್ಷಣ ಎಂಬುದನ್ನು ಈ ಇಬ್ಬರು 'ಮಹಾನ್ ಶಿಕ್ಷಣ ಪರಿಣತರು' ನೀಡಿದ್ದರು. ಅದನ್ನು ವಾಜಪೇಯಿ ಶಿಷ್ಯರಾದ ಮಾನ್ಯ ಶಂಕರಮೂರ್ತಿಯವರು ಅನುಷ್ಠಾನಕ್ಕೆ ತರುತ್ತಿದ್ದಾರೆ. ಹಿಂದುಳಿದವರೆಲ್ಲಾ ಇದನ್ನು ಖಂಡಿಸಬೇಕು, ಅದನ್ನು ರದ್ದುಗೊಳಿಸಲು ಆಗ್ರಹಿಸಬೇಕು. ವಿದ್ಯಾರ್ಥಿ ಮತ್ತು ಅಧ್ಯಾಪಕ ಸಂಘಟನೆಗಳು ಈ ಪ್ರವೇಶ ಪರೀಕ್ಷೆಗಳನ್ನು ಬಹಿಷ್ಕರಿಸುವಂತೆ ವಿದ್ಯಾರ್ಥಿಗಳ ಮನವೊಲಿಸಿ ಈ ಹಿಂದೆ ಚಾಲ್ತಿಯಲ್ಲಿದ್ದ ಕ್ರಮವನ್ನು ಮಾತ್ರವೇ ಜಾರಿಗೊಳಿಸಬೇಕೆಂದು ಪಟ್ಟುಹಿಡಿಯುವುದು ಸೂಕ್ತವಾಗಿರುತ್ತದೆ. ಹಿಂದುಳಿದವರ ಪರವೆಂದು ಹೇಳಿಕೊಳ್ಳುವ ರಾಜಕೀಯ ಪಕ್ಷಗಳು ಸಹ ವಿದ್ಯಾರ್ಥಿಗಳ ಪರವಾಗಿ ಮಧ್ಯಪ್ರವೇಶ ಮಾಡಬೇಕು. ಇಲ್ಲವಾದಲ್ಲಿ, ಉನ್ನತ ಶಿಕ್ಷಣವು ನಿಜಾರ್ಥದಲ್ಲಿ ಉಳ್ಳವರ ಸ್ವತ್ತಾಗಿಬಿಡುವ ಸಾಧ್ಯತೆ ನಮ್ಮ ರಾಜ್ಯದಲ್ಲಿ ದಟ್ಟವಾಗಿ ಹಬ್ಬಿಬಿಡುತ್ತದೆ.

## ಹೊರೆಯಾಗುತ್ತಿರುವ ಮನಮೋಹನ ಸಿಂಗ್

'**ಸಾ**ಕಿದ ನಾಯೂ ಕೈಕಚ್ಚತ್ತೆ' ಅಂತ ದೇವರಾಜ ಅರಸರು ಹೇಳಿದ್ದರು, ಗುಂಡೂರಾಯರು ಅವರಿಗೆ ಕೈ ಕೊಟ್ಟಾಗ. ಇವರಿಬ್ಬರೂ ನಮ್ಮ ಮಧ್ಯೆ ಈಗಿಲ್ಲ. ಅವರ ಆತ್ಮಕ್ಕೆ ಶಾಂತಿ ದೊರೆಯಲಿ! ಆದರೆ ಅದು ಜ್ಞಾಪಕಕ್ಕೆ ಬಂದದ್ದು ಹೀಗೆ : ತಾವು ನಿಷ್ಠೆಯಿಂದ ಸೇವೆ ಸಲ್ಲಿಸಿದ ಉದ್ಯಮಪತಿಗಳು ಮತ್ತು ಬಂಡವಳಿಗರೇ ಹೀಗೆ ಮಾಡಬಹುದೆಂದು ಅವರು ಎಣಿಸಿರಲಿಲ್ಲ. ನಿಮ್ಮ ಶ್ರೀಮಂತಿಕೆ ಕೇವಲ ನಿಮ್ಮ ಸಾಧನೆ ಅಲ್ಲ, ನಿಮಗೆ ಸರ್ಕಾರದ ನಿರಂತರ ನೆರವು ದೊರಕಿಸಿಕೊಟ್ಟಿದ್ದೇನೆ. (ಸತ್ಯವಂತರು ನಮ್ಮ ಸಜ್ಜನ ಪ್ರಧಾನಿ). ಬೆಲೆ ನಿಯಂತ್ರಣ ನಿಮ್ಮ ಕೈಯಲ್ಲಿದೆ, ನಿಮ್ಮ ನಿರ್ವಾಹಕರು ಅತೀ ಹೆಚ್ಚು ಸಂಬಳ ತೆಗೆದುಕೊಳ್ಳುವುದು, ಭೋಗ ವೈಭವ ಪ್ರದರ್ಶಿಸುವುದು, ಇಲ್ಲದವರ ಅಸೂಯೆಗೆ ಕಾರಣವಾಗುತ್ತೆ ಮುಂತಾಗಿ ಹತ್ತು ಸೂತ್ರಗಳ ಪ್ರವಚನ ನೀಡಿದರು. ಅವರೇನಾದರೂ ಗುರುಗಳಾಗಿ ಹೀಗೆ ಹೇಳಿದ್ದರೆ ಅವರಿಗೆ ಒಂದಿಷ್ಟು ದಕ್ಷಿಣೆ ಕೊಟ್ಟು ಸುಮ್ಮನೆ ಇರಬಹುದಿತ್ತು. ''ನಿಮಗೆ ಇಷ್ಟೆಲ್ಲಾ ಸಹಾಯ ಮಾಡಿದ್ದೀನಿ, ರಾಜಕೀಯವಾಗಿ ನಾನು ನಗಣ್ಯನಾಗಿ ಅಧಿಕಾರ ಕಳೆದುಕೊಳ್ಳುವುದು ನಿಮ್ಮ ಉದ್ದೇಶವಿರಲಿಕ್ಕಿಲ್ಲ'' ಮುಂತಾಗಿ ಸೂಚ್ಯವಾಗಿ ಅಂಗಲಾಚಿದ ಈ ಪ್ರಧಾನಿಯ ಆಕ್ರಂದನ, ಕೋಣನ ಮುಂದೆ ಕಿನ್ನರಿ ಬಾರಿಸಿದಂತೆ ಎಂದು ಜನ ಆಡಿಕೊಂಡರಂತೆ. ಉದ್ಯಮಪತಿಗಳ ಒಕ್ಕೂಟಕ್ಕೆ ಹೊಸದಾಗಿ ಅಧಿಕಾರಿಯಾಗಿ ಬಂದ ಮಹಾಶಯ, ''ನಮ್ಮ ಸಂಬಳ ಎಷ್ಟಿರಬೇಕೆಂದು ನಿರ್ಧರಿಸುವುದು ನಮ್ಮ ಆಂತರಿಕ ವಿಷಯ. (ನೆಹರೂ ಮಹಾಶಯನಿಗೆ ಇದು ಕೇಳಿಸದೇ ಇರಲಿ. ಕಾರಣ ಅಂದು ಆ ಹುಂಬ ಮನುಷ್ಯ ಅತಿ ಕಡಿಮೆ ಸಂಬಳ ಮತ್ತು ಹೆಚ್ಚು ಸಂಬಳದ ನಡುವೆ ೧-೧೦ ಅಥವಾ ೧-೧೬ರಷ್ಟು ಎಂದು ನಿಗದಿಮಾಡಿದ್ದ!) ಲಾಭ ಸಂಪಾದಿಸದೆ ಉದ್ಯಮ ಏಕೆ ಮಾಡಬೇಕು, ಸಾಮಾಜಿಕ ನ್ಯಾಯ, ಮೂಲಭೂತ ಸೌಕರ್ಯ ಸೃಷ್ಟಿ ನಮ್ಮ ಇಲಾಖೆಯದಲ್ಲ'' ಎಂದು ಖಂಡ-ತುಂಡವಾಗಿ ಹೇಳಿಬಿಟ್ಟರು. ''ಅಧಿಕಾರಕ್ಕೆ ಬಂದ'' ಉದ್ಯಮಪತಿ ಎಂದರೆ ಅತಿಶಯೋಕ್ತಿ ಏನೂ ಇಲ್ಲ. ಇಂದಿನ ಪ್ರಭುತ್ವದ ಕೇಂದ್ರವು ಶಾಸನಸಭೆಯೂ ಅಲ್ಲ, ಪ್ರಧಾನಿಯೂ ಅಲ್ಲ, ಅದು ದಿನೇ ದಿನೇ ಸಿಐಐ, ಕಾಮರ್ಸ್ ಛೇಂಬರುಗಳು ಎಂಬ ಅನಿಸಿಕೆ ಗಟ್ಟಿಯಾಗುತ್ತಿದೆ. ಚಿದಂಬರಂ, ಕಮಲನಾಥ್ ಮುಂತಾದವರೆಲ್ಲ ತಮ್ಮ ಬಹುಭಾಗದ ಸಮಯವನ್ನು ಅಲ್ಲೇ ಕಳೆದು, ಅಂತಹ ಮಂತ್ರಾಲಯವಾಗುತ್ತಿರುವುದು ಗುಟ್ಟೇನಲ್ಲ. ಇಂಥ ಬೆಳವಣಿಗೆಯ ಬಗ್ಗೆ ಪ್ರಧಾನಿಗಳಿಗೆ ಗೊಂದಲವಿದೆ ಎಂದರೆ ಅವರ ಅರ್ಥಶಾಸ್ತ್ರೀಯ ವಿದ್ವತ್ತಿಗೆ ಅಪಚಾರವಾಗುತ್ತದೆ. ಅವರಿಗೆ ಗೊತ್ತು – ಬಂಡವಾಳದ ಬೆಳವಣಿಗೆ ಎಂದರೆ ಲಾಭ, ಖಾಸಗೀ ಲಾಭ, ಮತ್ತಷ್ಟು ಲಾಭ, ಮಗದಷ್ಟು ಲಾಭ. ಅದರ ಸಂಪಾದನೆಗಾಗಿ ಅವರು ಏನು ಮಾಡಲೂ ಹೇಸುವುದಿಲ್ಲ. ಅಗತ್ಯಬಿದ್ದರೆ ಪ್ರಧಾನಿಯವರನ್ನೂ ಗಣನೆಗೆ ತೆಗೆದುಕೊಳ್ಳುವುದಿಲ್ಲ.

ನಿಷ್ಪಕ್ಷಪಾತ ರಾಜಕೀಯ ವೀಕ್ಷಕರಿಗೆ ಆತಂಕ ತರುತ್ತಿರುವ ವಿಷಯವೆಂದರೆ ನಮ್ಮ ರಾಷ್ಟ್ರದ ಪ್ರಧಾನಿ ಪದವಿ ಹಲವಾರು ಕಡೆ ಬೆಲೆ ಕಳೆದುಕೊಳ್ಳುತ್ತಿರುವುದು. ಜಿ-೮ ದೊರೆಗಳು ಈ ಬಾರಿ ನಮ್ಮ ಪ್ರಧಾನಿಯವರನ್ನೂ ಸೇರಿಸಿ, ಜಿ-೫ರ ನೇತಾರರನ್ನು ಸಭಾಭವನದ ಬಾಗಿಲಲ್ಲೇ ಕಾಯಿಸಿದರು. ನಂತರವೂ ಔಪಚಾರಿಕವಾಗಿ ಟೀ ಕೊಟ್ಟು, ಬೇರೇನೂ ಕೊಡದೆ, ಅವರನ್ನೇ ಏನೇನೋ ಕೇಳಿ ಕಳುಹಿಸಿದರು. ಭಾರತ ಸಂಜಾತೆ ಅಮೆರಿಕದ ಕಿಶೋರಿ ಕವಿತಾ ನರ್ರಾ ಅವರನ್ನು ದುಷ್ಟದ್ವಯರು ತಮ್ಮ ನಡುವೆ ಕುಳ್ಳಿರಿಸಿ ಕೊಂಡು ತೋರಿದ ಸೌಜನ್ಯವೂ ಇವರಿಗೆ ದಕ್ಕಲಿಲ್ಲ. ಸಂದೇಹಾಸ್ಪದ ಪ್ರಯೋಜನ ಮತ್ತು ಸಂದೇಹಾಸ್ಪದ ಒಡಂಬಡಿಕೆಯ ನ್ಯೂಕ್ಲಿಯರ್ ಇಂಧನದ ಕರಾರನ್ನು ನಮ್ಮ ಬಂಡವಳಿಗ ಭೂಪತಿಗಳ ಅಗತ್ಯದಿಂದ ಹೇಗಾದರೂ ಸಾಧಿಸಲು ಪಟ್ಟು ಹಿಡಿದಿರುವ ನಮ್ಮ ಪ್ರಧಾನಿ, ತಿಳಿದೋ ತಿಳಿಯದೆಯೋ ನಮ್ಮ ಸಾಂಪ್ರದಾಯಿಕ ಸ್ವತಂತ್ರ ವಿದೇಶಾಂಗ ನೀತಿಯನ್ನು ತಿರುಚಿ, ಭಾರತವನ್ನು ಅಮೆರಿಕಾದ ಬಾಲಂಗೋಚಿಯಾಗಿಸಲು ಹೊರಟಂತಿದೆ. ಚೀನಾದ ವಿರುದ್ಧ ಸತತ ಷಡ್ಯಂತ್ರ ರಚಿಸುತ್ತಿರುವ ದೊಡ್ಡಣ್ಣನ ಬುಟ್ಟಿಗೆ ನಮ್ಮ ಪ್ರಧಾನಿ ನಮ್ಮನ್ನು ತಳ್ಳುತ್ತಿರುವಂತೆಯೇ, ನಮ್ಮ ಬಾಂಧವ್ಯ ಕುದುರಿಸಲು ಸಿದ್ಧವಿದ್ದ, ನಮ್ಮ ನೆರೆಯ ಚೀನಾ ಈಗ ಗುರ್ರೆಂದು ಗುಟುರು ಹಾಕುವಂತಾಗಿದೆ. ಬಂಡವಳಿಗರ ದೈನಂದಿನ ಸಮಸ್ಯೆಗಳಿಗೆ ನಿರಂತರ ಪರಿಹಾರವನ್ನು ಒಂದಿಷ್ಟೂ ತಡ ಮಾಡದೆ ನೀಡಲು ಮುಂದಾಗುವ ಅರ್ಥಶಾಸ್ತ್ರಿ ಪ್ರಧಾನಿಗಳ ವಿದ್ವತ್ತು ಇದೇ ಬೆಳವಣಿಗೆಯ ಪ್ರಖರತೆಯನ್ನು ತಾಳಲಾರದೆ, ಅದರ ತಾಪದಲ್ಲಿ ಬೇಯುತ್ತಿರುವ ರೈತಾಪಿ ವರ್ಗದ ಸಮಸ್ಯೆಗೆ ಮೂರು ವರ್ಷವಾದರೂ ಪರಿಹಾರ ಕಾಣಿಸಲು ಅಸಮರ್ಥವಾದ ವಿದ್ವತ್ತು ಎನಿಸಿ ಕೊಂಡಿದೆ. ಅದು ಕಾರಣ ಅರ್ಥಶಾಸ್ತ್ರದ ನೊಬೆಲ್ ಪಾರಿತೋಷಕ ಅವರಿಗೆ ಪ್ರಧಾನಿ ಪದವಿ ಬಿಡುತ್ತಿದ್ದಂತೆಯೇ ದೊರೆಯ ಬಹುದು ಕೂಡ. ಆದರೆ ಕಾಂಗ್ರೆಸ್ ಪಕ್ಷಕ್ಕೂ, ದೇಶಕ್ಕೂ ದಿನೇ ದಿನೇ ಈ ಪ್ರಧಾನಿ ಹೊರೆಯಾಗುತ್ತಿಲ್ಲವೇ ಎಂಬ ಸಂದೇಹ ಚಿಂತನಶೀಲರನ್ನು ಕಾಡಹತ್ತಿದೆ. ಈ ದೇಶದ ಪ್ರಧಾನಿಗೆ ಸಮಾಜದ ಪ್ರಗತಿಶೀಲ ಪರಿವರ್ತನೆಯನ್ನು ಪ್ರಜಾಪ್ರಭುತ್ವಾತ್ಮಕ ಮಾರ್ಗದಲ್ಲೂ ಸಾಧಿಸಲು ರಾಜ್ಯಾಂಗವು ಅಪಾರ ಅಧಿಕಾರ ನೀಡಿದೆ. ಅದನ್ನು ಬಳಸಲು ಅರಿಯದ ಅಥವಾ ಒಲ್ಲದ ವ್ಯಕ್ತಿಗಳು ಆ ಪೀಠವನ್ನು ಅಲಂಕರಿಸುತ್ತಿರುವುದು ನಮ್ಮ ದುರಂತ.

## ಯೋಗದ ಮೇಲೆ ಹಕ್ಕುದಾರಿಕೆ

**ಬೇ**ವು ಮತ್ತು ಅರಿಶಿನದ ಮೇಲೆ ಹಕ್ಕು ಸ್ಥಾಪಿಸಿಕೊಳ್ಳಲು ಅಮೆರಿಕಾದ ಒಬ್ಬ ವ್ಯಕ್ತಿ ಪೇಟೆಂಟ್ ಪಡೆದಿದ್ದ. ಅದನ್ನು ಅನೂರ್ಜಿತ ಗೊಳಿಸಲು ಭಾರತ ಸರ್ಕಾರವು ಸಾಕಷ್ಟು ಶ್ರಮ ವಹಿಸಬೇಕಾಯಿತು. ಹಾಗೆ ಪೇಟೆಂಟ್ ಪಡೆದಿದ್ದವನು ಭಾರತ ಮೂಲದವನೇ ಆಗಿದ್ದನು. ಇನ್ನೂ ಏನೇನು ವಸ್ತುಗಳು, ಪ್ರಕ್ರಿಯೆಗಳು ಮತ್ತು ವಿಧಾನಗಳು ಪೇಟೆಂಟ್ ತಂತ್ರಕ್ಕೆ ಬಲಿಯಾಗಬಹುದೆಂಬುದು ಅನೂಹ್ಯ ವಾಗಿದೆ. ಎಂದು ನಮ್ಮ ೧೯೭೦ರ ಪೇಟೆಂಟ್ ಕಾಯಿದೆಯನ್ನು ಬಿಟ್ಟುಕೊಟ್ಟು ವಿಶ್ವ ವ್ಯಾಪಾರ ಸಂಸ್ಥೆಯ ಹುನ್ನಾರಗಳಿಗೆ ಅವಕಾಶ ಮಾಡಿಕೊಟ್ಟೆವೋ ಅಂದೇ ಇಂತಹ ತೊಂದರೆಗಳನ್ನು ನಮ್ಮ ಮೇಲೆ ನಾವು ಹೇರಿಕೊಂಡೆವು. ಇತ್ತೀಚೆಗೆ ಅಮೆರಿಕಾದ ಒಬ್ಬ 'ಸತ್ರಜಿ' ಭಾರತೀಯ ಮೂಲದ ಯೋಗಶಾಸ್ತ್ರವನ್ನು ತನ್ನದನ್ನಾಗಿ ಮಾಡಿಕೊಳ್ಳುವ ರೀತಿಯಲ್ಲಿ ಪೇಟೆಂಟ್ ಒಂದನ್ನು ಪಡೆದುಕೊಂಡಿದ್ದಾನೆ. ಅವನ ಹೆಸರು ವಿಕ್ರಮ ಚೌಧರಿ. ಅವನೂ ಭಾರತ ಮೂಲದವನೇ. ಇಡಿಯಾಗಿ ಯೋಗದ ಮೇಲೆ ಪೇಟೆಂಟ್ ಪಡೆದುಕೊಳ್ಳಲು ಸಾಧ್ಯವಿಲ್ಲದಿರಬಹುದು. ಅದನ್ನು ನೀಡುವ ಅಮೆರಿಕಾದ ಸರ್ಕಾರಿ ಯಂತ್ರಕ್ಕೆ ಯೋಗದ ಬಗ್ಗೆ ಎಷ್ಟು ತಿಳಿವಳಿಕೆ ಇರಬಹು ದೆಂಬುದು ನಿಗೂಢವೇನಲ್ಲ. ಸಾವಿರಾರು ವರ್ಷಗಳಿಂದ ನಮ್ಮ ದೇಶದಲ್ಲಿ ವಿಕಾಸವಾಗಿರುವ ಒಂದು ಶಾಸ್ತ್ರದ ಮೇಲೆ ಪೇಟೆಂಟ್

ಮುಂದಿನ ಪುಟಕ್ಕೆ






**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




**ಜೂನ್ ಸಂಚಿಕೆ**

ಭೈರಪ್ಪನವರ 'ಆವರಣ' ಕಾದಂಬರಿಯ ವಿಮರ್ಶೆಯನ್ನು ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯನವರು ವಸ್ತುನಿಷ್ಠವಾಗಿ ಮಾಡಿದ್ದಾರೆ. ಆದರೆ ವಿಮರ್ಶಾ ಲೇಖನದಲ್ಲಿ ಒಂದು ಕಣ್ತಪ್ಪು ಉಂಟಾಗಿದೆ : ''ನಾಗರಿಕ'' ನಾಟಕ ಬರೆದದ್ದು ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಯವರು; ವಿ. ಸೀತಾರಾಮಯ್ಯನವರಲ್ಲ. ಇದು ನಿಮ್ಮ ಅವಗಾಹನೆಗಾಗಿ.

ಬೆಂಗಳೂರು — ***ಗುಬ್ಬಿ ರೇವಣಾರಾಧ್ಯ***

(ಈ ಕಣ್ತಪ್ಪಿಗಾಗಿ ವಿಷಾದಿಸುತ್ತೇವೆ. – ಸಂ.)

ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯನವರು ಬರೆದ 'ಆವರಣ'ದ ದೀರ್ಘ ಅನಾವರಣ ಓದಿ ಸಂತೋಷವಾಗಿ, ಈ ಪತ್ರ ಬರೆಯುತ್ತಿದ್ದೇನೆ. ಆ ಗ್ರಂಥದ ಬೇರೆ ಎರಡು-ಮೂರು ವಿಮರ್ಶೆಗಳನ್ನೂ ಓದಿದೆ. 'ದಿ ಹಿಂದು' ಪತ್ರಿಕೆಯಲ್ಲಿ ಬಂದ ''ಕಾದಂಬರಿ ಎಲ್ಲಿ?'' ಚೆನ್ನಾಗಿದ್ದಿತು. ಡಾ॥ ಗೋಪಾಲಕೃಷ್ಣಯ್ಯನವರ ಅನಾವರಣ ಸಮಗ್ರವಾಗಿದೆ ಮತ್ತು ಶಿಷ್ಟ ಭಾಷೆಯಲ್ಲಿ ಪೆಟ್ಟುಕೊಡುವಂಥದು. ಇನ್ನೊಮ್ಮೆ ಓದಲು ಪ್ರಾರಂಭಿಸಿದ್ದೇನೆ. ಅವರಿಗೆ ನನ್ನ ಅಭಿನಂದನೆಗಳು.

ಮೈಸೂರು — ***ಜೆ. ಆರ್. ಲಕ್ಷ್ಮಣರಾವ್***

'ಈ ತಿಂಗಳು' ಅಂಕಣದಡಿ ಸಂಪಾದಕರು ನೇರ ನುಡಿಗಳಿಂದ ರಾಜ್ಯ ಸರ್ಕಾರವನ್ನು ತರಾಟೆಗೆ ತೆಗೆದುಕೊಂಡಿದ್ದಾರೆ. ಕಾವೇರಿ ನೀರು ಹಂಚಿಕೆ ವಿವಾದವನ್ನು ಕುರಿತಾಗಿ ನ್ಯಾಯಮಂಡಲಿಯ ತೀರ್ಪಿನ ವಿರುದ್ಧ ಕರ್ನಾಟಕ ಸರ್ಕಾರ ಸುಪ್ರೀಂ ಕೋರ್ಟಿಗೆ ದಾವೆ ಅರ್ಜಿ ಸಲ್ಲಿಸಿದ್ದರೂ, ಅದು ಯಾವ ರೀತಿ ನೀತಿಗಳನ್ನು ಕುರಿತಾಗಿ, ಮತ್ತು ಯಾವ ಯಾವ ಆಧಾರದ ಮೇರೆಗೆ ಅರ್ಜಿಯನ್ನು ಮಂಡಿಸಿದ್ದಾರೆ ಎನ್ನುವ ವಿಚಾರ ಶ್ರೀಸಾಮಾನ್ಯನಿಂದ ದೂರ ಎಂದು ಪ್ರಕಟಿಸಿರುವುದನ್ನು ಎಲ್ಲರೂ ಒಪ್ಪಲೇಬೇಕು. ಕನ್ನಂಬಾಡಿ ಕಟ್ಟೆ ನಿರ್ಮಾಣವಾದಾಗಿನ ಪರಿಸ್ಥಿತಿಗೂ, ಎಂಟು ದಶಕಗಳ ಈಗಿನ ವಸ್ತುಸ್ಥಿತಿಗೂ ಅಜಗಜಾಂತರ ವ್ಯತ್ಯಾಸವಿರುವ ಅಂಶಗಳು ನಮ್ಮ ಸರ್ಕಾರಗಳ ಗಮನಕ್ಕೆ ಬಾರದಿರುವುದು ನಿಜಕ್ಕೂ ಸೋಜಿಗವೇ ಸರಿ. ಆದರೆ ಕಾವೇರಿ ಕಣಿವೆಯಲ್ಲಿನ ಕೆರೆಗಳ ಹೂಳೆತ್ತುವ ಕಾರ್ಯಕ್ಕೆ ಕೈಹಾಕಿರುವ ವಿಷಯವನ್ನು ಮೆಚ್ಚಬೇಕು. ಕೃಷ್ಣರಾಜಸಾಗರದ ಎತ್ತರ ೧೨೪ ಅಡಿಗಳಷ್ಟು ಇದ್ದರೂ ಇತ್ತೀಚೆಗೆ ಬರಿದಾಗಿರುವ ಚಿತ್ರಗಳನ್ನು ಅವಲೋಕಿಸಿದಾಗ ಇಲ್ಲೂ ಕನಿಷ್ಠ ೧೦-೧೨ ಅಡಿಗಳಷ್ಟು ಮರಳು, ಹೂಳು ತುಂಬಿರುವ ವಿಷಯವಂತೂ ಸ್ಪಷ್ಟ. ಇದರ ಸ್ವಚ್ಛೀಕರಣದಿಂದಲೂ ರಾಜ್ಯಕ್ಕೆ ದೊರಕುವ ನೀರಿನ ಪ್ರಮಾಣ ಬಹಳ ಗಣನೀಯವಾಗಿ ಹೆಚ್ಚಿ ಪರಿಸ್ಥಿತಿ ಸುಧಾರಿಸುವುದರಲ್ಲಿ ಎರಡು ಮಾತಿಲ್ಲ.

ಈ ನಿಟ್ಟಿನಲ್ಲಿ ರಾಜ್ಯ ಸರ್ಕಾರ ತನ್ನ ಕಣ್ಣು ತೆರೆಯುವಂತಾಗಲಿ. ಕೇವಲ ವಾದ-ಪ್ರತಿವಾದಗಳಷ್ಟೇ ನಮ್ಮ ಪಾಲಿಗೆ ಎಂದು ಕಣ್ಮುಚ್ಚಿ ಕುಳಿತರೆ ಕನ್ನಡಿಗರಿಗೇ ನಷ್ಟ.

ಬೆಂಗಳೂರು — ***ನೆ. ಲ. ರಾಮಮೂರ್ತಿ***

ಮುಡಿಯೇರದೆ, ಗುಡಿಸೇರದೆ ಇರುವ ಆಕರ್ಷಕ ಕಳ್ಳಿಗಿಡದ ಚಿತ್ರ ಹೃದಯಸ್ಪರ್ಶಿಯಾಗಿತ್ತು. ಹೃನ್ಮನ ತಣಿಸಿತು. ಸಂಚಿಕೆಯು ನಿಜಕ್ಕೂ ಮಾಹಿತಿಗಳ ಗಣಿಯಾಗಿದೆ. ಸಂಪಾದಕೀಯ ಲೇಖನದಲ್ಲಿ ಉತ್ತರ ಪ್ರದೇಶದ ರಾಜಕೀಯ ಬೆಳವಣಿಗೆ ಮತ್ತು ಧರ್ಮಕಾರಣದ ರಾಜಕಾರಣದ ಬಗ್ಗೆ ಬಹಳ ಅರ್ಥವತ್ತಾಗಿ ಚಿಕ್ಕದಾಗಿ ಅನಾವರಣಗೊಳಿಸಿದ್ದೀರಿ. ಇನ್ನು 'ರೈಲಿನ ಅಂತರಂಗ- ಬಹಿರಂಗ' ಈ ಶೀರ್ಷಿಕೆಯಡಿಯಲ್ಲಿ ಡಾ॥ ಮೂಡ್ನಾಕೂಡು ಚಿನ್ನಸ್ವಾಮಿಯವರ ದೀರ್ಘವಾದ ಕವನ ತುಂಬಾ ಲವಲವಿಕೆಯಿಂದ ಓದಿಸಿಕೊಂಡು ಹೋಯಿತು. ಕವನದಲ್ಲಿ ಏನೋ ಒಂದು ರೀತಿಯ ಜೀವಂತ ಸ್ಪರ್ಶ ಇದೆ!

ಮೈಸೂರು — ***ಕಾಳೀಹುಂಡಿ ಕೆ. ವಿ. ಶಿವಕುಮಾರ್***

ಮಾನ್ಯ ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯನವರ 'ಆವರಣ' ಕುರಿತ ವಿಮರ್ಶೆ ಎಂಬುದು ಸಾಕಷ್ಟು ವಸ್ತುನಿಷ್ಠವಾದ ವಿಮರ್ಶೆಯಾಗಿದೆ ಎಂದೆನಿಸಿತು. ಭೈರಪ್ಪನವರನ್ನು ಮಹಾರಾಷ್ಟ್ರದಲ್ಲಿಯ ರಸಿಕರು ಪ್ರಶಂಸಿಸಿರುವ ಪರಿಯನ್ನು ಉಲ್ಲೇಖಿಸುತ್ತ, ''...ಕನ್ನಡಿಗರಿಗೂ ಮರಾಠಿಗರಿಗೂ ಹಿಂದೆ ನಡೆದ ಹಾಗೂ ಈಗಲೂ ನಡೆಯುತ್ತಿರುವ ಸಂಘರ್ಷಗಳ ಹಿನ್ನೆಲೆಯಲ್ಲಿ ಈ ಪ್ರಶಂಸೆಯು ಭೈರಪ್ಪನವರ ಕಟ್ಟಾ ಅಭಿಮಾನಿಗಳಿಗೆ ಕೂಡ ಸಾಕಷ್ಟು ಮುಜುಗರ ಉಂಟುಮಾಡುವುದು ಸಹಜ'' ಎಂದು ಆತಂಕ ವ್ಯಕ್ತಪಡಿಸಿದ್ದಾರೆ. ಇಂಥ ಆಗಂತುಕ ಅನಿಸಿಕೆಯಲ್ಲಿ ಪ್ರಚೋದನೆಯ ಹುನ್ನಾರ ಇರಲಿಕ್ಕಿಲ್ಲ. ಸ್ಪರ್ಧೆಯಲ್ಲಿ ಎದುರಾಳಿಯ ಮೆಚ್ಚುಗೆಗೆ ಪಾತ್ರನಾದ ಬಗ್ಗೆ ಈ ಕನ್ನಡ ಲೇಖಕರ ಸಾಧನೆಗೆ ಒಡಮೂಡುವ ಹೊಸ ಗರಿಯನ್ನು ನಿಗುರಿಸಿ ತೋರುವ ಗುರಿ ಇರಬೇಕೆಂದು ಭಾವಿಸಬಹುದಾಗಿದೆ. ಮರಾಠಿ ಜನರಷ್ಟೇ ಅಲ್ಲ, ಹಿಂದೀ ಭಾಷಿಕ ರಸಿಕರ ಪ್ರಶಂಸೆಗೂ ಈ ಕಾದಂಬರಿಕಾರರು ಪಾತ್ರರಾಗಿದ್ದಾರಲ್ಲ!

ಬೆಳಗಾವಿ — ***ಅನಂತ ಕಲ್ಲೋಳ***

**ಅಧಿಕಾರ ವಿಕೇಂದ್ರೀಕರಣ ಮತ್ತು ಲೋಹಿಯಾ**

ಬಂಡವಾಳಶಾಹಿ ವ್ಯವಸ್ಥೆ ಇರುವ ಪ್ರಭುತ್ವವು ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಪರಮಾಧಿಕಾರವನ್ನು ಏಕೀಭವಿಸಿಕೊಂಡು ಊಳಿಗಮಾನ್ಯ ಶಕ್ತಿಯಾಗಿ ಕಂಗೊಳಿಸುತ್ತದೆ. ಇದೊಂದು ಕೇಂದ್ರೀಕೃತ

*ಹಿಂದಿನ ಪುಟದಿಂದ*

ನೀಡುವುದೆಂದರೆ ಏನರ್ಥ? ಮೇರಿ ಕ್ಯೂರಿಯ ವರನ್ನು ತಮ್ಮ ಸಂಶೋಧನೆಯ ಫಲದ ಮೇಲೆ ಪೇಟೆಂಟ್ ಪಡೆಯಬೇಕೆಂದು ಅವರ ಕೆಲವರು ಸ್ನೇಹಿತರು ಸೂಚಿಸಿದಾಗ, ''ಅದು ಹೇಗೆ ಸಾಧ್ಯ? ಮಾನವ ಜನಾಂಗದ ಜ್ಞಾನದ ಮೇಲೆ ಯಾರೂ ಪೇಟೆಂಟ್ ಪಡೆಯುವಂತಿಲ್ಲ'' ಎಂದು ಅವರು ಹೇಳಿದ್ದರು. ಆ ದಿನದ ಆಕೆಯ ಉದಾತ್ತ ಪ್ರಜ್ಞೆಯಿಂದ ನಾವು ಬಹುದೂರ ಕ್ರಮಿಸಿದ್ದೇವೆ. ವಿಕ್ರಮ ಚೌಧರಿ ಪಡೆದಿರುವ ಪೇಟೆಂಟ್ ಸ್ವರೂಪವು ಅದನ್ನೇ ಸೂಚಿಸುತ್ತದೆ.

ವಿಕ್ರಮ್ ಎಂಬ 'ಯೋಗ ವಿಜ್ಞಾನಿ'ಯು ಅನೇಕ ಹಾಲಿವುಡ್ ತಾರೆಯರಿಗೆ ಯೋಗ ಹೇಳಿಕೊಡುತ್ತಾನಂತೆ. ಅವನು ಅನುಸರಿಸುವ ಅಭ್ಯಾಸ ಪದ್ಧತಿಯನ್ನು ಬೇರಾರೂ ಅನುಕರಿಸಕೂಡದೆಂದು ಅವನು ಪೇಟೆಂಟ್ ಪಡೆದಿದ್ದಾನೆ. ಆ ಪದ್ಧತಿಯಲ್ಲಿ ೨೬ ಆಸನಗಳು ಮತ್ತು ೨ ಉಸಿರಾಟದ ವ್ಯಾಯಾಮಗಳು ಸೇರಿವೆ. ಅವೆಲ್ಲವನ್ನೂ ಒಂದು ಕ್ರಮದಲ್ಲಿ ಮಾಡಿಸಲಾಗುತ್ತದೆ. ಜೊತೆಗೆ ಅವನ್ನೆಲ್ಲಾ ೧೦೫ ಡಿಗ್ರಿ ಸೆಲ್ಸಿಯಸ್ ತಾಪಮಾನವಿರುವಾಗ ಮಾಡಿಸಲಾಗುತ್ತದೆ. ಪೇಟೆಂಟ್ ಪ್ರಕಾರ ಇದನ್ನು ಬೇರೆ ಯಾರೂ ಯಾರಿಗೂ ಹೇಳಿಕೊಡುವಂತಿಲ್ಲ. ಕ್ರಮವನ್ನಾಗಲಿ ತಾಪಮಾನವನ್ನಾಗಲಿ ಬದಲಾಯಿಸಿ ಹೇಳಿಕೊಟ್ಟರೆ ವಿಕ್ರಮ್ ಕಾನೂನಿನಡಿ ಏನೂ ಮಾಡಬರುವುದಿಲ್ಲ. ಅವನು ಯಾವುದೋ ಒಂದು ಆಸನವನ್ನು ಒಂದು ನಿಮಿಷದ ಅವಧಿಗೆಂದು ನಿಗದಿಗೊಳಿಸಿದ್ದರೆ ಅದನ್ನೇ ಬೇರೆಯವರು ಒಂದೂವರೆ ನಿಮಿಷಕ್ಕೆ ವಿಸ್ತರಿಸಿದರೆ ಪೇಟೆಂಟ್ ಕಾಯಿದೆಯಡಿ ಕಾನೂನುಕ್ರಮ ಜರುಗಿಸಬಹುದೆ? ಕಾನೂನು ಪಂಡಿತರು ಅದಕ್ಕೆ ಉತ್ತರ ನೀಡಬಹುದು.

ಒಂದು ಸಂದರ್ಭವನ್ನು ಊಹಿಸಿಕೊಳ್ಳೋಣ. ಯಾವನೋ ಒಬ್ಬ ಪ್ರತಿನಿತ್ಯ ಬೆಳಿಗ್ಗೆ ವ್ಯಾಯಾಮ ಮಾಡುವ ಅಭ್ಯಾಸ ರೂಢಿಸಿಕೊಂಡಿದ್ದಾನೆ. ಇಂತಿಷ್ಟು ನಿಮಿಷ ಇಷ್ಟು ವೇಗದಲ್ಲಿ ನಡೆಯುವುದು, ಆಮೇಲೆ ಇಂತಿಷ್ಟು ಕಾಲ ಓಡುವುದು, ಮುಂದಕ್ಕೆ ಹಿಂದಕ್ಕೆ ಬಗ್ಗುವುದು, ಹೀಗೆ ಏನೇನೋ ಒಂದು ಗಂಟೆಯ ಕಾಲ ಮಾಡುತ್ತಾನೆ ಮತ್ತು ಅದನ್ನು ಬೇರೆಯವರಿಗೆ ಹೇಳಿಕೊಡುತ್ತಾನೆ. ನಾಳೆ ಅವನು ಅದರ ಪೇಟೆಂಟ್ ಪಡೆದರೆ ಹೇಗಿರುತ್ತದೆ?

ವ್ಯಾಪಾರೀ ಮನೋಭಾವವು ಜೀವನದ ಎಲ್ಲ ವಿಭಾಗಗಳನ್ನೂ ಆವರಿಸಿದಾಗ ಎಂತಹ ಮೂರ್ಖ ಪ್ರಸಂಗಗಳು, ಸನ್ನಿವೇಶಗಳು, ಉದ್ಭವಿಸಬಹುದೆಂಬುದು ಇದರಿಂದ ವ್ಯಕ್ತವಾಗುತ್ತದೆ. ಈ ಉದ್ಧಟತನದ ಪೇಟೆಂಟ್ ಪದ್ಧತಿಯನ್ನು ಮಾನ್ಯ ಮಾಡದಿರುವುದು ಅವಶ್ಯಕ. ಭಾರತದ ಸರ್ಕಾರವು ವಿಕ್ರಮ್ ಚೌಧರಿಯ ಪೇಟೆಂಟನ್ನು ವಿರೋಧಿಸಿ ಅದನ್ನು ಅನೂರ್ಜಿತಗೊಳಿಸಬೇಕೆ? ಬೆಂಗಳೂರಿನಲ್ಲಿ ಇತ್ತೀಚೆಗೆ ನಡೆದ ಒಂದು ಸಭೆಯಲ್ಲಿ ಇದನ್ನು ಗಂಭೀರವಾಗಿ ಚರ್ಚಿಸಲಾಯಿತು. ಅನೇಕ ಯೋಗ ವಿದ್ಯಾಸಂಸ್ಥೆಗಳ ಪರಿಣತರು ಇದರಲ್ಲಿ ಭಾಗವಹಿಸಿದ್ದರು. ಭಾರತದ ಜ್ಞಾನ ಭಂಡಾರದ ಒಂದು ಭಾಗವನ್ನು ಪೇಟೆಂಟ್ ಮಾಡಿಕೊಳ್ಳಲು ವಿಕ್ರಮ್ ಗಾಗಲಿ ಬೇರೆಯವರಿಗಾಗಲಿ ಹಕ್ಕಿಲ್ಲವೆಂದು ಒಮ್ಮತದ ತೀರ್ಮಾನಕ್ಕೆ ಬರಲಾಯಿತು ಎಂಬುದು ಸಮಾಧಾನದ ಸಂಗತಿ. ನಾಳೆ ಊಟ ಮಾಡುವ ಮತ್ತು ಮಲಗಿ ನಿದ್ರಿಸುವ ಒಂದು ವಿಧಾನವೂ ಪೇಟೆಂಟ್ ವ್ಯಾಪ್ತಿಗೆ ಬಂದರೆ ಹೇಗಿರುತ್ತದೆ? ಅಮೆರಿಕಾದ ಪೇಟೆಂಟ್ ಕಾನೂನಿಗೆ ನಮ್ಮ ದೇಶ ಕೊರಳೊಡ್ಡಕೂಡದೆಂಬುದು ಇದರಿಂದ ಸ್ವಯಂಸಿದ್ಧವಾಗಿದೆ.

[signature]

ಅವಲಂಬಸಾ ವ್ಯವಸ್ಥೆ. ಬೌದ್ಧಿಕ ಪ್ರಾಬಲ್ಯದ ತಾಂತ್ರಿಕ ಪ್ರಗತಿಯೇ ಇಲ್ಲಿ ಮುಖ್ಯ. ಆದರೆ ಸಾಮುದಾಯಿಕ ಪ್ರಜ್ಞೆಯುಳ್ಳ ಸಮಾಜವಾದಿ ಒಲವು ಬಹುಜನರ ಹಿತ ಕಾಯುವ ಆಶಯವುಳ್ಳದ್ದು. ವಿಕೇಂದ್ರೀಕೃತ ನಿಲುವಿನಿಂದ ಅಡಿಯಿಂದ ಮುಡಿಯವರೆಗೆ ಅಧಿಕಾರ ಹಂಚಿಕೆ ಹಾಗೂ ಸಂಪತ್ತಿನ ವಿಲೇವಾರಿ, ಇದರ ಪ್ರಮುಖ ನಿಲುವು. ಸ್ವಾಭಿಮಾನ ಮತ್ತು ಅದನ್ನು ರೂಪಿಸುವ ಸ್ವಾಯತ್ತತೆಯ ಕಡೆಗೆ ಅದರ ಒಲವು. ಸ್ವಾತಂತ್ರ್ಯೋತ್ತರ ಕಾಲ ಭಾರತದ ಮಟ್ಟಿಗೆ ಸಂಕೀರ್ಣಾವಸ್ಥೆಯ ಕಾಲ. ಅಭಿವೃದ್ಧಿಯ ಪಥದಲ್ಲಿ ಅವಕಾಶಗಳ ವರ್ಧನೆಯ ಮೂಲಕ ಸಮಸ್ಯೆಗಳ ಪರಿಹಾರಕ್ಕೆ ತೀವ್ರ ಯತ್ನ ನಡೆಯಿತಾದರೂ ಇಂತಹ ಸಂವರ್ಧನೆಯ ಹರವಿನ ಪ್ರಮುಖ ಫಲಾನುಭವಿಗಳೆಲ್ಲ ಕೇಂದ್ರ ಸ್ಥಾನದಲ್ಲಿದ್ದ ಉನ್ನತಸ್ತರೇ ಆಗಿದ್ದರು. ಹಾಗಾಗಿ ವಿಕೇಂದ್ರೀಕರಣದ ಚರ್ಚೆಯ ಸಂದರ್ಭದಲ್ಲಿ ಇದನ್ನು ಕೂಡ ನಿರ್ಲಕ್ಷಿಸುವಂತಿಲ್ಲ.

ಹಣ ಕೇಂದ್ರಿತ ಬಂಡವಾಳಶಾಹಿ ವ್ಯವಸ್ಥೆ ಅಂಚಿನ ಸಮುದಾಯಗಳ ಪ್ರಗತಿಯನ್ನು ನಿರ್ಲಕ್ಷಿಸಿ ಹಾಗೂ ಬಹುಸಂಖ್ಯಾತರ ರಾಜಕೀಯ ಆಶಯಗಳನ್ನು ಹತ್ತಿಕ್ಕಿ ಹಣವನ್ನು ಪ್ರಧಾನವಾಗಿಟ್ಟುಕೊಂಡ ವ್ಯವಸ್ಥೆಯಾಗಿದೆ. ಇಲ್ಲಿ ಕರುಣೆ, ಮಾನವತೆ ಹಾಗೂ ಸಾಮುದಾಯಿಕತೆ ಮುಖ್ಯವಲ್ಲ, ಬದಲಿಗೆ ಇಲ್ಲಿ ವ್ಯಕ್ತಿ ಪ್ರಧಾನ ಹಿತಾಸಕ್ತಿ, ಸಂಪತ್ತಿನ ಕ್ರೋಢೀಕರಣ ಹಾಗೂ ವಿಚಿತ್ರದಾಹ, ನಿರಂತರ ಹಸಿವು ಪ್ರಬಲ ಸ್ಥಾಯಿಯಾಗಿರುತ್ತವೆ.

ಭಾರತದಲ್ಲಿ ಪ್ರಾಚೀನ ರಾಜ ವ್ಯವಸ್ಥೆ ಗ್ರಾಮೀಣ ಮಟ್ಟದಲ್ಲಿ ಕುಂದುಕೊರತೆಗಳನ್ನು ನಿವಾರಿಸಲು ಅಧಿಕಾರಿ ರೂಪದ ಗೌಡ, ಪಟೇಲ, ಶಾನುಭೋಗರನ್ನು ನಿಯಮಿಸಿದರೂ ಕೂಡ ಅವರು ರಾಜ್ಯಶಾಹಿಯ ವರ್ತುಲದಲ್ಲಿ ವಿಹರಿಸುವ ಮಿನಿ ರಾಜಪ್ರಭುತ್ವವಾದಿಗಳಾಗಿ ಬದಲಾದರು. ಅನಂತರ ಬಂದ ವಸಾಹತುಶಾಹಿ ವ್ಯವಸ್ಥೆ ಕೆಳಮಟ್ಟದಲ್ಲಿ ಹಂಚಲ್ಪಟ್ಟ ಅಧಿಕಾರವನ್ನು ವಿರೋಧಿಸುತ್ತದೆ. ನಾಗರಿಕ ಜಗತ್ತಿನ ಆಡಳಿತ ವ್ಯವಸ್ಥೆಯನ್ನು ನಿಭಾಯಿಸಲು ಭಾರತದ ಜನರಿಗೆ ಸಾಧ್ಯವಿಲ್ಲವೆಂಬ ನಿಲುವಿಗೆ ಬ್ರಿಟಿಷರು ಬಂದಿದ್ದರು. ಮೂಢ ನಂಬಿಕೆ, ಅಂಧಶ್ರದ್ಧೆ ಹಾಗೂ ಅನ್ಯೈಕಮತ್ಯದಿಂದ ಬಾಳುವ ಈ ಜನರಿಗೆ ಆಡಳಿತಾತ್ಮಕ ಶಕ್ತಿಯನ್ನು ಒದಗಿಸಿಕೊಡಲು ಭಾರತಕ್ಕೆ ಬಂದಿರುವ ದೇವತಾಸ್ವರೂಪಿಯು ಬ್ರಿಟಿಷ್ ಆಡಳಿತ ಎಂಬ ಪೂರ್ವಗ್ರಹಕ್ಕೆ ಕೂಡ ಒಳಗಾಗಿದ್ದರು.

ಮೂಲದಲ್ಲಿ ವಸಾಹತುಶಾಹಿ ವ್ಯವಸ್ಥೆಯೆಂದರೆ ಆಡಳಿತ ಯಂತ್ರ ಮತ್ತು ಅಧಿಕಾರಶಾಹಿ. ಒಂದು ದೇಶವನ್ನು ಆಳುವುದೆಂದರೆ ಅಲ್ಲಿನ ಜನರ ಸಾಮಾಜಿಕ, ರಾಜಕೀಯ, ಆರ್ಥಿಕ ಬದುಕಿನ ಮೇಲೆ ನಿಯಂತ್ರಣ ಸಾಧಿಸುವುದೇ ಆಗಿದೆ. ಅಂದರೆ ಕೇಂದ್ರೀಕೃತ ಆಡಳಿತೀಕರಣ ಹಾಗೂ ಅಭಿವೃದ್ಧಿ ಅವರ ಉದ್ದೇಶವಾಗಿತ್ತು. ಜನರಿಗೆ ಹೆಚ್ಚೆಚ್ಚು ಅಭಿವೃದ್ಧಿಯನ್ನು ಹಾಗೂ ಆಡಳಿತಾತ್ಮಕ ಜವಾಬ್ದಾರಿ ನೀಡಿದರೆ ಅಸಮರ್ಪಕ ಆಡಳಿತದಿಂದಾಗಿ ಆಡಳಿತ ಯಂತ್ರ ಕುಸಿದುಬೀಳುತ್ತದೆ ಎಂದು ಬಿಂಬಿಸುವ ಪ್ರಯತ್ನ ಮಾಡಲಾಯ್ತು. ಈ ರೀತಿ ಪರಿಭಾವಿಸುವಂತೆ ಮಾಧ್ಯಮವನ್ನು ರೂಪಿಸಲಾಗಿತ್ತು. ವಾಸ್ತವದಲ್ಲಿ ಅಧಿಕಾರಶಾಹಿಯು ಆಡಳಿತದ ವಿಕೇಂದ್ರೀಕರಣಕ್ಕೆ ಬದ್ಧ ವಿರೋಧಿಯಾಗಿದೆ. ಅಭಿವೃದ್ಧಿಯ ಫಲಗಳನ್ನು, ಆಡಳಿತದ ಜವಾಬ್ದಾರಿಯನ್ನು ಹಂಚುವುದಕ್ಕೆ ಅಧಿಕಾರಶಾಹಿಪ್ರಭುತ್ವವು ವಿರೋಧಿಸುತ್ತದೆ. ರಾಜ್ಯ ಹಾಗೂ ಕೇಂದ್ರ ಮಟ್ಟದಲ್ಲಿ ಅಧಿಕಾರ ಕೇಂದ್ರಗಳ ಜೊತೆ ಶಾಮೀಲಾಗಿ ವಿಕೇಂದ್ರೀಕರಣವನ್ನು ವಿಫಲಗೊಳಿಸಲು ಸತತ ಸಂಚು ನಡೆಸುತ್ತಾರೆ. ಅಂತಿಮದಲ್ಲಿ ಹಂತ ಹಂತವಾಗಿ ಅಧಿಕಾರ ಕೇಂದ್ರೀಕೃತಗೊಳ್ಳುತ್ತಾ ಏಕಸ್ವಾಮ್ಯತ್ವದೆಡೆಗೆ ಸಾಗುತ್ತದೆ. ಇಂತಹ ಸಂದರ್ಭದಲ್ಲಿ ಲೋಹಿಯಾ ಚಿಂತನೆ ಸಾಮಾಜಿಕ ಆಲೋಚನೆಯೊಂದಿಗೆ ಅರಳುತ್ತದೆ.

ಅಧಿಕಾರ ವಿಕೇಂದ್ರೀಕರಣ ಹಾಗೂ ಆಡಳಿತದ ಹಂಚಿಕೆ, ಆ ಮೂಲಕ ಅಭಿವೃದ್ಧಿ ವಿಕೇಂದ್ರೀಕರಣ ಅವರ ಪ್ರತಿಪಾದನೆಯ ತಿರುಳಾಗಿತ್ತು. ಕೇಂದ್ರವು ರಾಜ್ಯಗಳ ಏಕತೆ ಹಾಗೂ ಭದ್ರತೆಯನ್ನು ನಿರ್ವಹಿಸಬೇಕು. ಉಳಿದದ್ದೆಲ್ಲ ಗ್ರಾಮಗಳದ್ದೇ ಸ್ವಯಂ ನಿರ್ಧಾರ ಎಂಬ ಗಾಢ ಆಲೋಚನೆ ಅವರದ್ದು. ''ಅಧಿಕಾರ ವಿಕೇಂದ್ರೀಕರಣದ ಬಗ್ಗೆ ಹೇಳುವುದಾದರೆ ದೇಶದ ಅಖಂಡತೆ-ಏಕತೆಗೆ ತೊಂದರೆಯಾಗದಂತೆ ಅಧಿಕಾರ ಹಂಚಿಕೆಯ ಕೊನೆಯ ಸಾಧ್ಯತೆಯವರೆಗೂ ಅಧಿಕಾರವನ್ನು ಹಂಚುವುದು. ಈ ತತ್ವವನ್ನು ಒಂದೇ ಸಾರಿ ವಿಸ್ತೃತವಾಗಿ ನಿರ್ಮಾಣ




ಮಾಡಲಾಗದು. ಮೊದಲನೇ ದರ್ಜೆಯ ಪ್ರಜಾಪ್ರಭುತ್ವದಲ್ಲಿ ಬದುಕುತ್ತಿರುವ ಒಬ್ಬ ಗ್ರಾಮಸ್ಥ ತನ್ನ ಭವಿಷ್ಯವನ್ನು ಕುರಿತಂತೆ ತಾನೇ ತೀರ್ಮಾನಿಸಿಕೊಳ್ಳುವಷ್ಟು ಅಧಿಕಾರ ಪಡೆದುಕೊಂಡಿದ್ದೇನೆಂದು ಭಾವಿಸುವಂತಾದರೆ ಈ ಕಾರ್ಯ ಸಾರ್ಥಕವಾಯಿತೆನಿಸುತ್ತದೆ.'' ಇಲ್ಲಿ ಅಧಿಕಾರ ಹಂಚಿಕೆಯೆಂದರೆ ಕಾರ್ಯವಿಭಜನೆಯ ಮೂಲಕ ಹಂತಹಂತವಾಗಿ ಜವಾಬ್ದಾರಿ ವಹಿಸುವಿಕೆ ಹಾಗೂ ಸ್ವಯಂ ಶಕ್ತಿಯನ್ನು, ಸ್ವಯಂ ನಿರ್ಧಾರವನ್ನು ಕೈಗೊಳ್ಳುವಂತೆ ಪ್ರಭಾವಿಸುವುದು. ಗಮನಾರ್ಹವೆಂದರೆ ಚುನಾವಣೆಯೆಂಬ ನಾಟಕದ ಮೂಲಕ ದಿಢೀರ್ ಅಧಿಕಾರವನ್ನು ಅನುಭವಿಗಳ ಹೆಗಲಿಗೆ ಹಾಕಿದಂತೆಲ್ಲ, ಅದಕ್ಕೆ ಬದಲಿಗೆ ಹಂತಹಂತವಾಗಿ ಜವಾಬ್ದಾರಿಯನ್ನು ವಹಿಸುವುದು ಹಾಗೂ ಕರ್ತವ್ಯಗಳನ್ನು ಪಾಲಿಸುವಂತೆ ಪ್ರೇರೇಪಿಸುವುದು. ಇದು ಒಂದು ಬಗೆಯ ಪೂರ್ವ ತರಬೇತಿ ಇದ್ದಂತೆ ಎಂಬುದೇ ಪ್ರಧಾನವಾದುದು. ಲೋಹಿಯಾ ಅವರು ಗ್ರಾಮೀಣ ಕೃಷಿ ಅಭಿವೃದ್ಧಿ, ನೀರಾವರಿ, ಕೃಷಿ ಬೀಜಗಳ ವಿತರಣೆ, ಕಂದಾಯ ಸಂಗ್ರಹಣೆ ಇವುಗಳನ್ನು ಗ್ರಾಮಾಡಳಿತಕ್ಕೆ ಒಪ್ಪಿಸಬೇಕು; ರಾಜ್ಯವು ಸಂಗ್ರಹಿಸಿದ ಕಂದಾಯದ ಒಟ್ಟು ಮೊತ್ತ ೧/೩ ಮತ್ತು ೧/೪ ಭಾಗ ಗ್ರಾಮ ಮತ್ತು ಜಿಲ್ಲೆಗೆ ಸೇರುವಂತಾಗಬೇಕು ಎಂದು ವಾದಿಸಿದ್ದರು.

ಒಂದು ದೇಶಕ್ಕೆ ಸ್ವಾತಂತ್ರ್ಯ ಬಂದಿದೆ ಎಂಬುದಾಗಿ ನಾವು ನಿರ್ಣಯಿಸುವ ಹಿಂದಿರುವ ಮಾನದಂಡವೇನು, ಎಂಬುದು ಈಗಲೂ ಪ್ರಶ್ನೆಯೇ. ವೈಯಕ್ತಿಕವಾಗಿ ಸ್ವಾತಂತ್ರ್ಯವೇ ಇಲ್ಲದೆ ಊಳಿಗಮಾನ್ಯ ಹಾಗೂ ಬಂಡವಾಳಶಾಹಿ ವ್ಯವಸ್ಥೆಯ ಜಮೀನ್ದಾರರ ಕಪಿಮುಷ್ಟಿಯಲ್ಲಿ ಸಿಲುಕಿಕೊಂಡ ಜನರು ಸಾಮುದಾಯಿಕ ಸಂದರ್ಭದಲ್ಲಿ ರಾಷ್ಟ್ರ ಸ್ವಾತಂತ್ರ್ಯಗೊಂಡಿದೆ ಎಂದು ಸಂಭಾಷಿಸುವುದೇ ಒಂದು ಅಸಂಗತ ಸಂಗತಿ. ಈ ದೇಶದ ಶೇಕಡ ೧೦ರಷ್ಟು ಜನ ೯೦ರಷ್ಟು ಜನರ ಬದುಕಿನ ಶ್ರಮಗಳ ಬಗ್ಗೆ ನಿರ್ಧಾರ ತೆಗೆದುಕೊಳ್ಳುವುದು ಮೂರ್ಖತನ. ಎಲ್ಲಿಯವರೆಗೆ ೯೦ರಷ್ಟು ಜನರಿಗೆ ಆಡಳಿತಾತ್ಮಕ ನೀತಿ-ನಿರ್ಧಾರಗಳಲ್ಲಿ ಪಾಲ್ಗೊಳ್ಳುವಿಕೆ ಇರುವುದಿಲ್ಲವೋ ಆವರೆಗೆ ಅದು ನೈಜ ಜನಾಡಳಿತ ಎನಿಸಲಾರದು.

ಶತಶತಮಾನಗಳ ಧಾರ್ಮಿಕ ಅವ್ಯವಸ್ಥೆಯಿಂದಾಗಿ ಸಾಮಾಜಿಕ ತುಳಿತಕ್ಕೊಳಗಾದ ಬಹುಸಂಖ್ಯಾತರು ಆಡಳಿತದಲ್ಲಿ ಪಾಲ್ಗೊಳ್ಳುವ ಅವಶ್ಯಕತೆ ಕುರಿತು ಲೋಹಿಯಾ ಮಾತಾಡುತ್ತಲೇ ಇದ್ದರು. ''ಶೂದ್ರರ, ಹರಿಜನರ, ಸ್ತ್ರೀಯರ ಚೇತನಗಳನ್ನು ಹುರುಪುಗೊಳಿಸುವ ಪ್ರಯತ್ನವನ್ನು ದಣಿವರಿಯದೆ ಉತ್ಸಾಹದಿಂದ ಮುಂದುವರಿಸಬೇಕು'' ಎಂದಿದ್ದರು. ದೇವರು ಧರ್ಮಗಳ ಹೆಸರಿನಲ್ಲಿ ಅಂಚಿನ ಸಮುದಾಯಗಳ ಆಲೋಚನಾ ವಿಧಾನಗಳನ್ನು ವ್ಯವಸ್ಥಿತವಾಗಿ ಉಡುಗಿಸಿ, ವಿವೇಚನೆಯ ಕ್ರಮಗಳನ್ನ ಹತ್ತಿಕ್ಕಿದ ಸಂಗತಿಗಳ ಬಗ್ಗೆ ಆಕ್ರೋಶಗೊಂಡಿದ್ದರು. ''ಜಾತಿ ಮತ್ತು ಹೆಣ್ಣು ಇವೆರಡರ ಸಂದರ್ಭದಲ್ಲಿ ಪ್ರಧಾನವಾಗಿ ಕಾಣುವ ಪ್ರತ್ಯೇಕವಾದಿ ಮನಃಸ್ಥಿತಿಯೇ ಭಾರತೀಯ ಚೇತನಗಳ ಅಧೋಗತಿಗೆ ಮೂಲಕಾರಣವಾಗಿದೆ. ಸಾಹಸಕ್ಕಿಳಿಯಬಲ್ಲ ಮನಸ್ಸು ಹಾಗೂ ಸಂತಸ ಚಿಮ್ಮಿಸಬಲ್ಲ ಶಕ್ತಿಗಳೆರಡನ್ನು ಕೊಂದು ಹಾಕುವ ಭಯಂಕರ ಶಕ್ತಿ ಈ ಪ್ರತ್ಯೇಕ ಮನೋಭಾವಕ್ಕಿದೆ'' ಎಂಬುದಾಗಿ ಲೋಹಿಯಾ ಹೇಳುತ್ತಾರೆ. ನಮ್ಮ ಪುರಾಣ ಮತ್ತು ಶಾಸ್ತ್ರಗಳು ಹೆಣ್ಣು ಮತ್ತು ಶೂದ್ರರನ್ನು ಧರ್ಮದ ಹೆಸರಿನಲ್ಲಿ ಕತ್ತಲಲ್ಲಿಟ್ಟಿದ್ದು ಘೋರ ದುರಂತ. ಇದರಿಂದ ವ್ಯಕ್ತಿಗತ ಚೈತನ್ಯಶೀಲ ಶಕ್ತಿಯನ್ನೇ ಹತ್ತಿಕ್ಕಿ, ಪರಂಪರಾನುಗತ ಗುಲಾಮರನ್ನಾಗಿ ರೂಪಿಸುವ ಸಂಚಾಗಿ ಕಾಣಿಸುತ್ತದೆ.

ಮೊದಲು ಜಾತಿ ಹಾಗೂ ಲಿಂಗ ಭೇದಗಳ ವಿರುದ್ಧ ಹೋರಾಟ ಮಾಡಿ ಅವರ ಕಣ್ಣುಗಳಲ್ಲಿ ಚೈತನ್ಯದ ಹೊಳಪು ತಂದರೆ ಬಡತನದ ವಿರುದ್ಧ ಹೋರಾಟ ಮಾಡುವುದೇ ಅನವಶ್ಯಕ. ಸಾಮಾಜಿಕ ತೊತ್ತಳ ತುಳಿತದ ಜನರಿಗೆ ವಿಶೇಷವಾಗಿ ಅವಕಾಶಗಳನ್ನು, ಅಗ್ರಪಂಕ್ತಿಯ ಮನ್ನಣೆಯನ್ನು ನೀಡಬೇಕಾದ ಅನಿವಾರ್ಯತೆಗಳನ್ನು ಮನಗಂಡಿದ್ದರು. ''ಶೂದ್ರರನ್ನು ಅಧಿಕಾರ ಹಾಗೂ ನಾಯಕತ್ವದ ಸ್ಥಾನಗಳಿಗೆ ಏರಿಸುವ ಹಾಗೂ ವಿಶಾಲ ಸಾಂಸ್ಕೃತಿಕ ದೃಷ್ಟಿಕೋನವನ್ನು ಬೆಳೆಸಿಕೊಳ್ಳಲು ಪ್ರೇರೇಪಿಸಬೇಕು. ಮೂಲದಲ್ಲಿಯೇ ಅಂತರ್ಗತಗೊಂಡ ಜಾತಿ ಸಂಬಂಧಿ, ಲಿಂಗ ಸಂಬಂಧಿ ಕೀಳರಿಮೆಯನ್ನು ಹೋಗಲಾಡಿಸಿ ಅವರ ಮನಸ್ಸಲ್ಲಿ ಸ್ಥೈರ್ಯ ತುಂಬುವ ಕೆಲಸ ಮಾಡಬೇಕಿದೆ'' ಎಂಬುದಾಗಿ ಹೇಳಿದರು. ಆರ್ಥಿಕ ಅಸಮಾನತೆ ಹಾಗೂ ಸಾಮಾಜಿಕ

ಅನ್ಯಾಯ ಇವುಗಳು ಲೋಹಿಯಾ ಮನಸ್ಸಿನಲ್ಲಿ ಸತತ ಕಾಡುತ್ತಿದ್ದ ಪ್ರಶ್ನೆಗಳಾಗಿದ್ದವು. ನಮ್ಮ ಸಮಾಜದ ರಚನಾ ಮೂಲದಲ್ಲಿಯೇ ಸರ್ವಾಂಗೀಣ ಕ್ರಾಂತಿಯನ್ನುಂಟುಮಾಡಬೇಕೆಂಬ ಉತ್ಕಟ ಹಂಬಲವನ್ನು ಅವರಲ್ಲಿ ಸೃಷ್ಟಿಸಿದ್ದವು.

ಗಾಂಧೀಜಿಯವರು ಚರಕದ ಪ್ರತಿಪಾದನೆ ಹಾಗೂ ಗ್ರಾಮರಾಜ್ಯದ ಆಶಯ ಹೊಂದಿದ್ದರೆ, ಲೋಹಿಯಾ ಪ್ರಕಾರ ಚರಕವು ಈ ಹೊತ್ತಿಗೆ ಮುಗಿದ ಅಧ್ಯಾಯವೆಂದೇ ತೀರ್ಮಾನಿಸಿದ್ದರು. ಚರಕವು ಬಹುಜನರ ಹಿತಾಸಕ್ತಿಗಳನ್ನು ಕಾಪಾಡಲು ಅಸಾಧ್ಯವೆಂದೇ ಇವರ ಕಲ್ಪನೆ. ಆಧುನಿಕ ಜಗತ್ತಿನಲ್ಲಿ ಪರಿಸರ ಮಾಲಿನ್ಯ ಹಾಗೂ ಅಗಾಧ ನಿರುದ್ಯೋಗ ಉಂಟುಮಾಡುವ ಸಣ್ಣ ಪ್ರಮಾಣದ ಯಂತ್ರಗಳ ಬಳಕೆ ಅನಿವಾರ್ಯ ಎಂದಿದ್ದರು. ಹೆಚ್ಚುತ್ತಿರುವ ಜನರ ಬಯಕೆಯನ್ನು ತೀರಿಸಲು ಚರಕ ಅಸಮರ್ಥವಾಗಿರುತ್ತದೆ. ಬಹು ದೊಡ್ಡ ಯಂತ್ರೋಪಕರಣಗಳು ಸಹ ಇಂದು ಸಾಮಾನ್ಯ ಜನರನ್ನು ದೂರ ಇಟ್ಟುದುದನ್ನು ಗಮನಿಸಬೇಕು. ಜೀವನಮಟ್ಟ ಹೆಚ್ಚಿಸುವ ಉತ್ಪಾದನೆಯನ್ನು ದ್ವಿಗುಣಗೊಳಿಸುವ ಯಂತ್ರಗಳು, ಕಾರ್ಖಾನೆಗಳು ಇಂದು ಪ್ರಜಾಪ್ರಭುತ್ವವನ್ನು ಆಕ್ರಮಿಸಿಕೊಂಡಿರುವುದರಿಂದ ಪ್ರಜಾಪ್ರಭುತ್ವವೆನ್ನುವುದು ನಾಮಕಾವಾಸ್ತೆಯಾಗಿದೆ. ಇದು ಒಂದು ದೇಶದ ನೈತಿಕ ಹಾಗೂ ಆರ್ಥಿಕ ವಿಕಾಸಶೀಲತೆಯನ್ನು ಕುಬ್ಜಿಸುತ್ತದೆ. ಈ ಸಂದರ್ಭದಲ್ಲಿ ಅಗಾಧ ಮೊತ್ತದ ಬಂಡವಾಳವನ್ನು ಅಪೇಕ್ಷಿಸದ, ಸಣ್ಣ ಪ್ರಮಾಣದ ಯಂತ್ರೋಪಕರಣಗಳ ರೂಪದಲ್ಲಿ ಇಂದು ಜನರ ಬಳಿಗೆ ಹೋಗಬೇಕಿದೆ ಎಂಬ ನಿಲುವನ್ನು ಲೋಹಿಯಾ ಹೊಂದಿದ್ದರು. 'ಗ್ರಾಮರಾಜ್ಯ' ಎಂಬ ಪದದ ಬದಲು ಸ್ವಯಂಪ್ರಭುತ್ವ ಎಂದು ಬದಲಿಸಿಕೊಳ್ಳಬೇಕು ಎಂದು ಲೋಹಿಯಾ ಸೂಚಿಸುತ್ತಾರೆ. ರಾಜ್ಯವೆಂದರೆ ಒಂದರ್ಥದಲ್ಲಿ ಕಟ್ಟುಪಾಡಿನ ಪ್ರತೀಕ. ಸ್ವಯಂ ಪ್ರಭುತ್ವವೆಂದರೆ ನಮಗೆ ನಾವೇ ಗೌರವಿಸುವ, ಆಲೋಚಿಸುವ ಹಾಗೂ ಚರ್ಚಿಸುವ, ಅನುಸರಿಸುವ ಪ್ರಭುತ್ವ. ಅಕ್ಕಪಕ್ಕದ ಹಳ್ಳಿಗಳೊಡನೆ ಇಟ್ಟುಕೊಂಡ ಸೌಹಾರ್ದವೆ ವಿಶ್ವದೆಡೆಗೆ ಕೈಚಾಚುತ್ತದೆ ಮತ್ತು ಗೌರವಿಸುವಂತೆ ಮಾಡುತ್ತದೆ. ರಾಜ್ಯಾಧಿಕಾರವನ್ನು ಪ್ರಜಾಧಿಕಾರದಿಂದ ನಿಯಂತ್ರಿಸದಿದ್ದಲ್ಲಿ, ನಿರ್ದೇಶಿಸದಿದ್ದಲ್ಲಿ ಹಾಗೂ ಕಟ್ಟೆಚ್ಚರದಿಂದ ಪಳಗಿಸದಿದ್ದಲ್ಲಿ ಮೂಲಭೂತ ಬದಲಾವಣೆಗಳು ಸಾಧ್ಯವಿಲ್ಲ ಎಂಬ ನಿರ್ಧಾರ ಕೂಡ ಲೋಹಿಯಾ ಅವರದು.

ಆಡಳಿತಶಾಹಿಯು ಸಂಪದಭಿವೃದ್ಧಿಗೆ ಮಹತ್ವ ಕೊಟ್ಟಂತೆ ನಟಿಸಿ ಬಹುಜನರ ಬದುಕಿನ ವಿಧಾನಗಳನ್ನು ಧ್ವಂಸಗೊಳಿಸುತ್ತದೆ. ವಿಕೇಂದ್ರೀಕರಣವು ಆಡಳಿತಶಾಹಿಯನ್ನು ಛಿದ್ರಗೊಳಿಸಿ ಅಧಿಕಾರ ಹಾಗೂ ಅಭಿವೃದ್ಧಿಯ ಫಲಾಫಲಗಳನ್ನು ಹಂಚುತ್ತದೆ. ಆಡಳಿತಶಾಹಿಗಳಿಗೆ ಇದು ಬೇಕಿಲ್ಲ. ಸದಾ ಏರುಮುಖಿಯಾದ ಐಹಿಕ ಜೀವನಮಟ್ಟ ಸ್ವಾರ್ಥಪರವಾದ ಆದರ್ಶಗಳೇ ತುಂಬಿರುತ್ತವೆಯೇ ಹೊರತು ಸಕಲ ಮನುಷ್ಯ ಕುಲಕ್ಕೆ ಸುಸಂಪನ್ನವಾದ ಜೀವನಮಟ್ಟ ಒದಗಿಸುವ ಪರಿಕಲ್ಪನೆ ಅವುಗಳಲ್ಲಿಲ್ಲ. ವಿಕೇಂದ್ರೀಕರಣಕ್ಕೆ ಸಂಪದಭಿವೃದ್ಧಿಗಿಂತ ಮಾನವ ಶ್ರೇಯೋಭಿವೃದ್ಧಿ ಅಗತ್ಯವೆಂದೇ ಲೋಹಿಯಾ ಭಾವನೆ. ಆದ್ದರಿಂದ ವಿಕೇಂದ್ರೀಕರಣ ಅವೆಲ್ಲಕ್ಕೂ ಉತ್ತರವಾಗಿ ಸಾಮುದಾಯಿಕ ಚೈತನ್ಯರೂಪಿ ಪ್ರಾಣದಾಯಿಯಂತೆ ಕೆಲಸ ಮಾಡುತ್ತದೆ ಎಂದೇ ಬಲವಾಗಿ ನಂಬಿದ್ದರು. ತತ್‌ಕ್ಷಣಕ್ಕೆ ಮೀಸಲಾತಿ ಜಾರಿಗೊಳಿಸಿ, ಆಡಳಿತದಲ್ಲಿ ಅವಕಾಶಗಳನ್ನು ಕಲ್ಪಿಸಿಕೊಟ್ಟು ಸಮಾನತೆ ನೀಡಿದ್ದೇವೆಂದು ಅಭಿವೃದ್ಧಿ ಹಾಗೂ ಆಡಳಿತ ದಕ್ಷತೆಯನ್ನು ನಿರೀಕ್ಷಿಸುವುದು ಖಂಡಿತಾ ಮೂರ್ಖತನ. ಅದಕ್ಕೆ ಬದಲಾಗಿ ದೀರ್ಘಕಾಲೀನ ರೂಪದ ಸವಲತ್ತುಗಳ ಹಾಗೂ ಪ್ರೋತ್ಸಾಹ ಮತ್ತು ಅಧಿಕಾರ ಹಂಚಿಕೆ ನಡೆಯುತ್ತಿದ್ದರೆ ಸಮುದಾಯಗಳಲ್ಲಿ ಅನುಭವ ದಕ್ಕುತ್ತದೆ ಹಾಗೂ ಪ್ರಗತಿಯ ಕನಸು ಕಾಣಬಹುದು. ''ಸಮಾಜವಾದದ ಅಂತಿಮ ಗುರಿಯೆಂದರೆ ಮನುಷ್ಯನ ಶೋಷಣೆಯನ್ನು ಕೊನೆಗಾಣಿಸುವುದು. ಪ್ರತಿಯೊಬ್ಬರೂ ಪ್ರಗತಿ ಹೊಂದಲು ಸಮಾನ ಅವಕಾಶ, ರಾಜಕೀಯ ಹಾಗೂ ಆರ್ಥಿಕ ಶಕ್ತಿ ಒಂದು ಗುಂಪಿನ ಕೈಲಿ ಕೇಂದ್ರೀಕೃತವಾಗದಂತೆ ನೋಡಿಕೊಳ್ಳುವುದು.''

ಅಧಿಕಾರ ವಿಕೇಂದ್ರೀಕರಣದ ಆಶಯ ಸರ್ವರಿಗೆ ಅಧಿಕಾರ, ಸರ್ವರಿಗೆ ಸಮಾನ ಅಭಿವೃದ್ಧಿ ಹಂಚುವಿಕೆ ಎಂಬುದೇ ಮೂಲವಾದವಾದರೂ, ಆ ಹಂಚಿಕೆಯೂ ಕೂಡ ಸಮಾನ ಸೌಹಾರ್ದ ನೆಲೆಯಲ್ಲಿ ರೂಪಗೊಳ್ಳಬೇಕು. ನೀಡುವಿಕೆ ಭಿಕ್ಷೆಯಾಗದೆ, ಹಕ್ಕಿನ ಸಮಾನ ಹಂಚಿಕೆಯಾಗಿ ಬದಲಾಗಬೇಕು. ಈ ಹೊತ್ತಿಗೆ ಸಮಾಜವಾದವೆಂದರೆ ಲೋಹಿಯಾವಾದ ಎಂಬಷ್ಟು ಪ್ರಖರ ಪಾಂಡಿತ್ಯದ ಬೆರಗಲ್ಲಿ ಸಿದ್ಧಾಂತ ರೂಪಿಸಿರುವ ಲೋಹಿಯಾ ಅವರಲ್ಲಿ ಭಾರತದ ಸಮಗ್ರ ಸಮಸ್ಯೆ ಹಾಗೂ ಪರಿಹಾರಗಳ ತೀವ್ರ ಕಾತುರತೆ ಇತ್ತು. ಹಾಗಾಗಿಯೇ ಲೋಹಿಯಾರನ್ನು ಅರ್ಥಮಾಡಿಕೊಳ್ಳುವುದೆಂದರೆ ಭಾರತದ ಗತ ಹಾಗೂ ಭವಿಷ್ಯ ಎರಡನ್ನೂ ಅರ್ಥೈಸಿಕೊಂಡಂತೆ.

*ಸಾಗರ, ಶಿವಮೊಗ್ಗ*

***ಡಾ|| ಹೆಚ್. ಎಸ್. ಮೋಹನ್ ಚಂದ್ರಗುತ್ತಿ***

## ಲೈಂಗಿಕ ಶಿಕ್ಷಣ... ಒಂದಷ್ಟು ಜಿಜ್ಞಾಸೆ

ಇಂದು ಶಾಲಾ ಪಠ್ಯದಲ್ಲಿ ಲೈಂಗಿಕ ಶಿಕ್ಷಣದ ಅವಶ್ಯಕತೆ ಕುರಿತು ಬೇಕು, ಬೇಡ ಎಂಬ ಸಾಕಷ್ಟು ವಾದ - ವಿವಾದಗಳು ನಡೆಯುತ್ತಿವೆ. ಇದರ ಪರವಾಗಿ ಮಾತನಾಡುವ ಲೈಂಗಿಕ ತಜ್ಞರು, ವಿಚಾರವಾದಿಗಳು ಹಾಗೂ ಬುದ್ಧಿಜೀವಿಗಳು ಕಡ್ಡಾಯವಾಗಿ ಕಲಿಸಬೇಕು, ಇಲ್ಲದಿದ್ದರೆ ಮುಂದೆ ಭಾರಿ ಅನಾಹುತಗಳು ಸಂಭವಿಸಲಿವೆ ಎಂದು ಸಮರ್ಥಿಸುತ್ತಾರೆ. ಇದನ್ನು ವಿರೋಧಿಸುವ ಕೆಲವು ಸಂಪ್ರದಾಯವಾದಿಗಳು ಇದರ ಬಗ್ಗೆ ಮಡಿವಂತಿಕೆ ತೋರಿಸುತ್ತಾ ಇದೊಂದು ಹಾದಿ ತಪ್ಪಿಸುವ ಕ್ರಮವಾಗಿದೆ ಎಂಬ ಆತಂಕ ವ್ಯಕ್ತಪಡಿಸುತ್ತಾ ಲೈಂಗಿಕ ಶಿಕ್ಷಣವನ್ನು ಪಠ್ಯವಾಗಿ ಕಲಿಸುವ ಅಗತ್ಯವಿಲ್ಲ ಎಂದು ಅಭಿಪ್ರಾಯಿಸುತ್ತಾರೆ. ಈ ರೀತಿ ವಿಷಯ ಗೊಂದಲದ ಗೂಡಾಗಿ ಒಂದು ಒಮ್ಮತ ಅಭಿಪ್ರಾಯಕ್ಕೆ ಬರಲು ಸಾಧ್ಯವಾಗುತ್ತಿಲ್ಲ.

ದಿನದಲ್ಲಿ ಎಷ್ಟು ನಿದ್ರೆ ಮಾಡಬೇಕು, ಯಾವಾಗ ಮಾಡಬೇಕು, ನಿದ್ರಾಹೀನತೆಯಿಂದಾಗುವ ಪರಿಣಾಮಗಳೇನು, ಆರೋಗ್ಯಕ್ಕೆ ಉತ್ತಮ ಆಹಾರಗಳು ಯಾವುವು, ಏನು ಕುಡಿಯಬೇಕು, ಏನು ಕುಡಿಯಬಾರದು ಎಂದೆಲ್ಲ ಚರ್ಚಿಸಿ ವಿಚಾರ ವಿನಿಮಯ ಮಾಡಿಕೊಳ್ಳುವ ನಾವು ಹಸಿವು, ನಿದ್ರೆ, ನೀರಡಿಕೆಗಳಷ್ಟೇ ಸಹಜವಾದ ಲೈಂಗಿಕತೆ ಬಗ್ಗೆ ಏನೂ ಮಾತಾಡಬಾರದು ಎಂಬ ಭಾವನೆ ಅಚ್ಚರಿ ಮೂಡಿಸುವಂಥದ್ದು. ಇದರ ಬಗ್ಗೆ ನಮ್ಮಲ್ಲಿ ವಿಪರೀತ ಮಡಿವಂತಿಕೆ ಮನೆಮಾಡಿಕೊಂಡಿದೆ. ಈ ಮಡಿವಂತಿಕೆ ಮೊದಲು ದೂರಾಗಬೇಕಿದೆ. ಮುಕ್ತವಾಗಿ ಮಾತನಾಡುವ ವಾತಾವರಣ ಮೂಡಬೇಕಿದೆ.

ಲೈಂಗಿಕತೆ ಕುರಿತು ದೃಷ್ಟಿಕೋನ ಬದಲಾಗುತ್ತಿರುವ ಪ್ರಸ್ತುತ ಸನ್ನಿವೇಶದಲ್ಲಿ ಮಕ್ಕಳಿಗೆ ಲೈಂಗಿಕ ಆರೋಗ್ಯ ಕುರಿತು ಅರಿವು ಮೂಡಿಸುವುದರ ಅಗತ್ಯವಿದೆ. ಇಷ್ಟು ದಿನ ಲೈಂಗಿಕ ಶಿಕ್ಷಣ ನೀಡದಿರುವುದರಿಂದ ಸರಿಯಾದ ತಿಳುವಳಿಕೆ ಇಲ್ಲದೆ ಕೆಲವರು ಜೀವನವನ್ನೇ ನರಕ ಮಾಡಿಕೊಂಡಿದ್ದಾರೆ. ಇದಕ್ಕಿರುವ ಏಕೈಕ ರಾಮಬಾಣವೆಂದರೆ ಲೈಂಗಿಕ ಶಿಕ್ಷಣ. ವ್ಯಕ್ತಿಯ ಆಮೂಲಾಗ್ರ ಬದಲಾವಣೆಯಲ್ಲಿ ಲೈಂಗಿಕ ಶಿಕ್ಷಣ ಪ್ರಮುಖ ಪಾತ್ರ ವಹಿಸುತ್ತದೆ.

ಭಾರತೀಯ ಆಧ್ಯಾತ್ಮಿಕ ಚರಿತ್ರೆಯಲ್ಲಿ ಕಾಮಕ್ಕೆ ವಿಶೇಷ ಮನ್ನಣೆ ಇದೆ. ನಮ್ಮ ಸಾಂಸ್ಕೃತಿಕ ಪರಂಪರೆಯಲ್ಲಿ ಕಾಮ ಒಂದು ಗುಣಾತ್ಮಕ ಸಂಗತಿಯಾಗಿದೆ. ದೇವಾಲಯ ಗೋಪುರಗಳ ಮೇಲೆ ನಿರ್ಭಿಡೆಯಿಂದ ಲೈಂಗಿಕ ಮಿಥುನ ಶಿಲ್ಪಗಳನ್ನು ನಿರ್ಮಿಸಿದರು. ಲೈಂಗಿಕ ಶಿಕ್ಷಣವನ್ನು ಇಂದು ಋಣಾತ್ಮಕ ದೃಷ್ಟಿಯಿಂದ ನೋಡಬೇಕಾದ ಪ್ರಮೇಯವೇ ಇಲ್ಲ.

ಮನೋಲೈಂಗಿಕ ಭಾವನೆಗಳನ್ನು ನಿಗ್ರಹಿಸುವುದು ಬಹಳ ಕಷ್ಟ. ಲೈಂಗಿಕ ಅಂಗಗಳ ರಚನೆಯ ಬಗ್ಗೆ ಹಾಗೂ ಶಿಕ್ಷಣದ ಬಗ್ಗೆ ಅರಿವಿದ್ದರೆ ಮಾತ್ರ ನಿಗ್ರಹಿಸಬಹುದು. ಈ ವಿಷಯವಾಗಿ ಶಿಕ್ಷಣ ನೀಡಿದರೆ ಅವರಿಗೆ ಜ್ಞಾನ ಹೆಚ್ಚಿ ತೊಂದರೆ ಮಾಡಿಕೊಳ್ಳುವುದು ಕಡಿಮೆಯಾಗುತ್ತದೆ. ಇದರ ಬಗ್ಗೆ ಮುಕ್ತವಾದ ವಾತಾವರಣ ನಿರ್ಮಿಸುವುದರಿಂದ ಮುಂದಾಗುವ ಅನಾಹುತ ಈಗಲೇ ತಪ್ಪಿಸಬಹುದು.

ಒಂದು ಕಾಲದಲ್ಲಿ ಹರೆಯದವರು ಇನ್ನೂ ಪ್ರೇಮದ ಮೊದಲ ಪಾಠ ಕಲಿಯುವುದರಲ್ಲಿ ಇರುತ್ತಿದ್ದರು. ಆದರೆ ಇಂದು ಹಾಗಲ್ಲ. ನಮ್ಮ ಸುತ್ತಮುತ್ತಲ ದೂರದರ್ಶನ, ಚಲನಚಿತ್ರ, ಪತ್ರಿಕೆ, ಹಾಡು, ವಿಡಿಯೊ ಆಲ್ಬಂ, ಇಂಟರ್‌ನೆಟ್‌ಗಳ ಹಾವಳಿಯಲ್ಲಿ ಬೇಕೋ ಬೇಡವೋ ಅಂತೂ ಸೆಕ್ಸ್ ಪಾಠ ಎಳೆಯರನ್ನು ಆಕರ್ಷಿಸುತ್ತಿದೆ. ಈ ಎಲ್ಲದರಲ್ಲೂ ಪ್ರಧಾನವಾಗಿರುವ ಅಂಶ ಕಾಮುಕತೆ ಎಂಬುದು ಪ್ರತಿಫಲಿಸುತ್ತದೆ.

ನಮ್ಮ ಎಷ್ಟೋ ಹುಡುಗ-ಹುಡುಗಿಯರ ಪ್ರಣಯ ಸಂಬಂಧ ಮುರಿದುಬೀಳಲು ಲೈಂಗಿಕತೆಯೇ ಕಾರಣ. ಅದಕ್ಕಾಗಿ ಹಲವರು ತಮ್ಮ ಸಂಬಂಧ ಕಳೆದುಕೊಳ್ಳಲು ಇಷ್ಟಪಡದೆ ಒತ್ತಾಯಕ್ಕೆ ಮಣಿಯುತ್ತಾರೆ. ಈ ರೀತಿ ಹರೆಯದವರಲ್ಲಿ ಮದುವೆಯ ಮುಂಚಿನ ದೈಹಿಕ ಸಂಬಂಧ ಹೆಚ್ಚಾಗುತ್ತಿದೆ. ಅವರನ್ನು ಯಾವ ಪಾಪಪ್ರಜ್ಞೆಯೂ ಕಾಡುತ್ತಿಲ್ಲ. ಅದನ್ನು ಅವರು ತಮ್ಮ ಬದುಕಿನ ಅಂಗವಾಗಿ ಪರಿಗಣಿಸುತ್ತಿದ್ದಾರೆ. ಈ ರೀತಿ ಯುವ ಜನಾಂಗ ಒಂದೆಡೆ ಮನೆಯೊಳಗೆ ಲಕ್ಷಣವಾಗಿ ಎಲ್ಲ ಸಂಪ್ರದಾಯಗಳಲ್ಲಿ ಭಾಗಿಯಾಗುತ್ತಲೇ ಹೊರಗೆ ಆಧುನಿಕ ಜಗತ್ತಿಗೆ ಸರಿಸಮಾನವಾಗಿ ಹೆಜ್ಜೆಹಾಕುತ್ತಾ ದ್ವಂದ್ವದಲ್ಲಿ ಸಿಕ್ಕಿ ತೊಳಲಾಡುತ್ತಿದ್ದಾರೆ.

ಯೌವನಾವಸ್ಥೆಗೆ ಬರುವ ಸಂದರ್ಭದಲ್ಲಿ ಹೆಣ್ಣು ಗಂಡುಗಳಲ್ಲಿ ದೈಹಿಕವಾಗಿ ಮತ್ತು ಮಾನಸಿಕವಾಗಿ ಸಾಕಷ್ಟು ಬದಲಾವಣೆಗಳಾಗುತ್ತವೆ. ಈ ಹಂತದಲ್ಲಿ ಹದಿಹರೆಯದವರಿಗೆ ದೇಹ ರಚನೆ ಬಗ್ಗೆ ಹಾಗೂ ಅವುಗಳ ಕಾರ್ಯವಿಧಾನಗಳ ಬಗ್ಗೆ ತಿಳುವಳಿಕೆ ಮೂಡಿಸಬೇಕು. ವ್ಯಕ್ತಿ ಬೆಳವಣಿಗೆಯು ವ್ಯಕ್ತಿಯ ದೈಹಿಕ-ಮಾನಸಿಕ ಸ್ತರಗಳ ಜ್ಞಾನವನ್ನು ಆಧರಿಸಿದೆ. ಈ ಸಂದರ್ಭಗಳಲ್ಲಿ ಪೋಷಕರು, ಶಿಕ್ಷಕರು ಲೈಂಗಿಕತೆ ಮತ್ತು ಪರಸ್ಪರ ಸಂಬಂಧಗಳ ಬಗ್ಗೆ ಮಾಹಿತಿ ಒದಗಿಸಬೇಕು.

ಯುವ ಜನತೆಗೆ ಲೈಂಗಿಕತೆ ಬಗ್ಗೆ ಇರುವ ಪ್ರಶ್ನೆಗಳು, ಸಂಶಯಗಳು ಇನ್ನೂ ಹಾಗೇ ಉಳಿದಿವೆ. ಇದರಿಂದ ಲೈಂಗಿಕ ಅಜ್ಞಾನ, ಕೀಳರಿಮೆ, ಲೈಂಗಿಕತೆಯ ಬಗ್ಗೆ ಅಪರಾಧಿ

ಭಾವನೆ ಇಂದಿನ ಯುವ ಜನಾಂಗವನ್ನು ಕಾಡುತ್ತಿವೆ. ಇನ್ನು ಹೆಣ್ಣುಮಕ್ಕಳನ್ನಂತೂ ಕತ್ತಲೆ ಕೋಣೆಯಲ್ಲಿ ಬಂಧಿಸಿಟ್ಟಿದ್ದೇವೆ. ಹಿಂದಿನಿಂದಲೂ ನಾವು ನಮ್ಮ ಹೆಣ್ಣುಮಕ್ಕಳಿಗೆ ಶರೀರದ ಬಗ್ಗೆ, ಶೀಲದ ಬಗ್ಗೆ ಹೇಳುತ್ತಲೇ ಶೀಲ, ಮರ್ಯಾದೆ, ಕಳಂಕ ಎಂಬ ಮೌಲ್ಯಗಳನ್ನು ತಲೆಯಲ್ಲಿ ತುಂಬಿದ್ದೇವೆ. ಈಗಲಾದರೂ ಅವರು ತಮ್ಮ ದೇಹದ ಬಗ್ಗೆ, ಬದುಕಿನ ಬಗ್ಗೆ ತಾವೇ ನಿರ್ಣಾಯ ಕೈಗೊಳ್ಳುವ ಅವಕಾಶ, ಸ್ವಾತಂತ್ರ್ಯ ಒದಗಿಸುವ ಅಗತ್ಯವಿದೆ.

ಯಾಂತ್ರಿಕ ಜೀವನದ ಗೊಂದಲದಲ್ಲಿ ಮುಳುಗಿರುವ ಮತ್ತು ವಿಭಕ್ತ ಕುಟುಂಬಗಳೇ ಹೆಚ್ಚಿರುವ ಇಂದಿನ ಸಂದರ್ಭದಲ್ಲಿ ತಂದೆ-ತಾಯಿಯರಿಗೆ ಮಕ್ಕಳೊಡನೆ ಬೆರೆತು ಮಾತನಾಡುವ ವ್ಯವಧಾನ, ತಾಳ್ಮೆ, ಸಮಯವಿಲ್ಲದಂತಾಗಿದೆ. ಮಕ್ಕಳಿಗೆ ಹೇಳಬೇಕೆಂದಿರುವುದನ್ನು ಹೇಳಲು ಆಗದೆ ಅವರು ಪರಿತಪಿಸುತ್ತಿದ್ದಾರೆ. ಮಕ್ಕಳು ಸರಿಯಾದ ಮಾಹಿತಿಯಿಂದ ವಂಚಿತರಾಗಿ ಕದ್ದು ಮುಚ್ಚಿ ಅನೈತಿಕ ಲೈಂಗಿಕ ಶಿಕ್ಷಣ ಪಡೆದು ಸಿಫಿಲಿಸ್, ಗೊನೊರಿಯ, ಏಡ್ಸ್‌ನಂತಹ ಭಯಾನಕ ರೋಗಗಳಿಗೆ ಬಲಿಯಾಗುತ್ತಿದ್ದಾರೆ.

ಲೈಂಗಿಕ ರೋಗಗಳನ್ನು ತಡೆಗಟ್ಟಬೇಕಾದರೆ ಮೊದಲು ವಿದ್ಯಾರ್ಥಿಗಳು ಹಾಗೂ ಯುವ ಜನಾಂಗದಲ್ಲಿ ಲೈಂಗಿಕ ಪ್ರಜ್ಞೆ ಬೆಳೆಸಬೇಕಿದೆ. ಆದ್ದರಿಂದ ಹದಿಹರೆಯದಲ್ಲಿ, ವೃದ್ಧಾಪ್ಯದಲ್ಲಿ ಲೈಂಗಿಕ ಆರೋಗ್ಯ, ಮುಕ್ತ ಹಾಗೂ ಸುರಕ್ಷಿತ ಲೈಂಗಿಕತೆ, ಅಸುರಕ್ಷಿತ ಲೈಂಗಿಕ ಸಂಪರ್ಕದಿಂದ ಬರುವ ರೋಗಗಳು, ಹೆಚ್.ಐ.ವಿ. ಸಲಹೆ-ಸಮಾಲೋಚನೆ, ಪರ್ಯಾಯ ಲೈಂಗಿಕತೆ ಮೊದಲಾದ ವಿಷಯಗಳ ಬಗ್ಗೆ ಇಂದಿನ ಪಠ್ಯಕ್ರಮದಲ್ಲಿ ಅಳವಡಿಸುವುದು ಅತ್ಯಗತ್ಯವಾಗಿದೆ.

ಈ ಎಲ್ಲಾ ಅಂಶಗಳಿಗೆ ವ್ಯತಿರಿಕ್ತವಾಗಿ ಹೇಳುವ ಸನಾತನವಾದಿಗಳು ''ನಮ್ಮ ದೇವಾಲಯಗಳ ಲೈಂಗಿಕ ಶಿಲ್ಪಗಳೇ ಶಿಕ್ಷಣ ನೀಡುತ್ತವೆ. ಲೈಂಗಿಕತೆ ಎಂಬುದು ಕತ್ತಲೆ ಕೋಣೆಗೆ ಸೀಮಿತವಾದದ್ದು. ಬಹಿರಂಗವಾಗಿ ಚರ್ಚಿಸುವ ವಿಷಯವೇ ಅಲ್ಲ. ಹೀಗೆ ಚರ್ಚಿಸುವುದು ಅಸಹ್ಯ. ಲೈಂಗಿಕ ಶಿಕ್ಷಣ ಕೊಡುವುದು ಮಂಗನ ಕೈಗೆ ಮಾಣಿಕ್ಯ ಕೊಟ್ಟಂತಾಗುತ್ತದೆ. ಹದಿಹರೆಯಕ್ಕೆ ಬರುವ ವೇಳೆಗೆ ಹೆಚ್ಚಿನವರಿಗೆ ಅರಿವಿನಿಂದ ಅಥವಾ ಅರಿವಿಲ್ಲದೆ ಇದರ ಬಗ್ಗೆ ಅಗತ್ಯ ಜ್ಞಾನ ಉಂಟಾಗಿರುತ್ತದೆ. ಮನೆಯಲ್ಲಿ ಹಿರಿಯರು ಇದನ್ನು ಪರೋಕ್ಷವಾಗಿ ಕಿರಿಯರಿಗೆ ಕಲಿಸುತ್ತಾರೆ. ಇಂದಿನ ಮಾಧ್ಯಮಗಳಂತೂ ಅಗತ್ಯಕ್ಕಿಂತ ಹೆಚ್ಚಿನ ಮಾಹಿತಿಯನ್ನು ಈಗಾಗಲೇ ನೀಡುತ್ತಿವೆ. ನಮ್ಮಲ್ಲಿ ಲೈಂಗಿಕ ಮಡಿವಂತಿಕೆ ಎಲ್ಲಿದೆ ? ದೇಶದ ಜನಸಂಖ್ಯೆಯಿಂದಲೇ ಇದಕ್ಕೆ ಉತ್ತರ ಸಿಗುತ್ತದೆ. ಇದೆಲ್ಲ ಲೈಂಗಿಕ ಶಿಕ್ಷಣದಿಂದಲೇ ಬಂದಿದ್ದೆ? ಹಾಗಾಗಿ ಇದನ್ನು ಪಠ್ಯವಾಗಿ ಅಳವಡಿಸುವುದು ಸಲ್ಲ'' ಎಂದೆಲ್ಲಾ ವಾದಿಸುತ್ತಾರೆ.

ಇಂತಹ ವಿರೋಧಗಳೇನೇ ಇದ್ದರೂ ಇಡೀ ಮನುಕುಲದ ಅಸ್ತಿತ್ವವೇ ಲೈಂಗಿಕ ಚಟುವಟಿಕೆ ಮೇಲೆ ನಿಂತಿರುವಾಗ ಲೈಂಗಿಕತೆಯ ಬಗ್ಗೆ ಆರೋಗ್ಯಪೂರ್ಣ ಅರಿವು ಅಗತ್ಯ. ಹೀಗಿರುವಾಗ ನಾವು ಇನ್ನು ಲೈಂಗಿಕ ಶಿಕ್ಷಣ ನೀಡಬೇಕೆ ? ಬೇಡವೇ ? ಎಂಬ ಪ್ರಶ್ನೆಯನ್ನು ಕೇಳುತ್ತಾ ಕುಳಿತಿರುವುದು ವಿಪರ್ಯಾಸ.

ಲೈಂಗಿಕತೆ ಕುರಿತು ಮಾಹಿತಿ ನೀಡುವುದು ಉತ್ತಮ ಎಂದಾದರೆ ತಕ್ಷಣ ನಮ್ಮಲ್ಲಿ ಅನೇಕ ಪ್ರಶ್ನೆಗಳು ಉದ್ಭವಿಸುತ್ತವೆ. ಲೈಂಗಿಕತೆ ಎಂದರೇನು ? ಅಶ್ಲೀಲತೆ ಎಂದರೇನು ? ಸುರಕ್ಷಿತ ಲೈಂಗಿಕತೆ ಎಂದರೇನು ? ಲೈಂಗಿಕ ಶಿಕ್ಷಣ ಎಂದರೇನು ? ಎಷ್ಟನೇ ತರಗತಿಯಿಂದ ಎಷ್ಟು ಸಮಯ ಈ ಶಿಕ್ಷಣ ನೀಡಬೇಕು ? ಮುಕ್ತ ಲೈಂಗಿಕತೆ ಎಂದರೆ ಪಾಶ್ಚಾತ್ಯ ಲೈಂಗಿಕ ಶಿಕ್ಷಣ ನಮಗೆ ಮಾದರಿಯೇ? ಈ ತರಹದ ಹಲವಾರು ಪ್ರಶ್ನೆಗಳು ಮನದಲ್ಲಿ ಮೂಡುತ್ತವೆ. ಮೊದಲು ಇವಕ್ಕೆ ನಿರ್ದಿಷ್ಟ ಉತ್ತರಗಳನ್ನು ಕಂಡುಕೊಳ್ಳಬೇಕಿದೆ.

*ಹಗರಿಬೊಮ್ಮನಹಳ್ಳಿ* *ಪರಮೇಶ್ವರಯ್ಯ ಸೊಪ್ಪಿಮಠ*

## ದುಡಿಯುವವರ ಜವಾಬ್ದಾರಿ

ಕಾರ್ಖಾನೆಗಳನ್ನು ನಡೆಸಲು ಬಂಡವಾಳ, ಬುದ್ಧಿಶಕ್ತಿ ಮತ್ತು ಶ್ರಮಶಕ್ತಿ ಮೂರೂ ಅಗತ್ಯ. ಈಗ ಭಾರತದಲ್ಲೇ ಏನು, ಪ್ರಪಂಚದ ಎಲ್ಲೆಡೆ ಕಾರ್ಖಾನೆಗಳನ್ನು ನಡೆಸುವವರು ಬಂಡವಾಳಶಾಹಿಗಳು ಮತ್ತು ಅವರ ಹಣ. ಬಂಡವಾಳ ಇಂದು ಬುದ್ಧಿಶಕ್ತಿಯನ್ನೂ ಕೊಳ್ಳುತ್ತದೆ, ಶ್ರಮಶಕ್ತಿಯನ್ನೂ ಕೊಳ್ಳುತ್ತದೆ. ಹೀಗಾಗಿ ಬುದ್ಧಿವಂತರು ಮತ್ತು ಶ್ರಮಿಕರು, ಬಂಡವಾಳಶಾಹಿಯ ಅಧೀನದಲ್ಲಿ ಕೆಲಸಮಾಡುವ ಅನಿವಾರ್ಯತೆ ಉಂಟಾಗುತ್ತದೆ. ಬುದ್ಧಿವಂತರಿಗಾದರೋ ಕಾರ್ಖಾನೆ ನಡೆಸುವ ಬಂಡವಳಿಗ ಸ್ವಲ್ಪವಾದರೂ ಗೌರವ ತೋರುತ್ತಾನೆ. ಆದರೆ ಶ್ರಮಿಕನನ್ನು ತನ್ನ ಗುಲಾಮನಂತೆ ನೋಡುತ್ತಾನೆ. ಶ್ರಮಿಕನೂ ಅಷ್ಟೆ. ಈ ಗುಲಾಮಗಿರಿಗೆ ಒಗ್ಗಿಕೊಂಡುಬಿಟ್ಟಿದ್ದಾನೆ. ಹಾಗಾಗಿ ಸಮಾಜದಲ್ಲಿಯೂ ಶ್ರಮಿಕ ನಗಣ್ಯನಾಗಿದ್ದಾನೆ.

ಹಾಗೆ ನೋಡಹೋದರೆ ಶ್ರಮಿಕನಿಲ್ಲದೆ ಯಾವ ಉತ್ಪಾದನೆಯೂ ಸಾಧ್ಯವಿಲ್ಲ. ಹಣ ಒಂದನ್ನಿಟ್ಟುಕೊಂಡು ಯಾವ ಉತ್ಪಾದನೆಯನ್ನೂ ಮಾಡಲು ಸಾಧ್ಯವಿಲ್ಲ. ಹಣ ಮತ್ತು ಬುದ್ಧಿಶಾಲಿಗಳು ಕೂಡಿಕೊಂಡರೂ, ಉತ್ಪಾದಕ ಶ್ರಮಿಕನ ಸಹಕಾರವಿಲ್ಲದೆ ಯಾವುದನ್ನೂ ಉತ್ಪಾದನೆ ಮಾಡಲು ಸಾಧ್ಯವಾಗುವುದಿಲ್ಲ. ನ್ಯಾಯವಾಗಿ ಸಮಾಜದಲ್ಲಿ ಉತ್ಪಾದಕನಿಗೆ, ಅಂದರೆ ಶ್ರಮಿಕನಿಗೆ ಅಗ್ರಸ್ಥಾನ ಇರಬೇಕಾಗಿತ್ತು. ಕೊನೆಯಪಕ್ಷ ಬಂಡವಾಳಶಾಹಿಯಡಿ ಬುದ್ಧಿಶಾಲಿ ಮತ್ತು ಶ್ರಮಿಕನಿಗೆ ಸಮಾನ ಸ್ಥಾನಮಾನ, ಸಮಾನ ಗೌರವ, ಸಮಾನ ಸಂಭಾವನೆ ದೊರೆಯಬೇಕಾಗಿತ್ತು. ಆದರೆ, ಬಂಡವಳಿಗನು ಎಲ್ಲವನ್ನೂ ತನ್ನ ಅಧೀನದಲ್ಲಿಟ್ಟುಕೊಂಡಿದ್ದಾನೆ. ಗಳಿಕೆಯ ಸಿಂಹಪಾಲು ಅವನದಾಗುತ್ತದೆ. ಬುದ್ಧಿವಂತಿಕೆಗೆ ಶ್ರಮಿಕನಿಗಿಂತ ಹೆಚ್ಚಿನ ಮರ್ಯಾದೆ, ಹೆಚ್ಚಿನ ವೇತನ, ನೀಡುತ್ತಾನೆ. ಉಳಿದ ಹಣವನ್ನು ಶ್ರಮಿಕರಿಗೆ ಭಿಕ್ಷುಕರಿಗೆ ನೀಡಿದಂತೆ ಹಂಚುತ್ತಾನೆ. ನಮ್ಮ ಇಂದಿನ ಆಧುನಿಕ, ಸುಧಾರಿಸಿದ ಸಮಾಜ ಇದನ್ನೇ ಸಾಮಾಜಿಕನ್ಯಾಯ, ಆರ್ಥಿಕನ್ಯಾಯ ಎಂದು ಒಪ್ಪಿಕೊಂಡುಬಿಟ್ಟಿದೆ.

ಈ ಹಿನ್ನೆಲೆಯಲ್ಲಿ ಇಂದು ಶ್ರಮಿಕನು ಸಮಾಜದಲ್ಲಿ ಕೊನೆಯ ಹಂತದಲ್ಲಿದ್ದಾನೆ. ಉಪೇಕ್ಷಿತ ವರ್ಗದವನಾಗಿದ್ದಾನೆ. ಶ್ರಮಜೀವಿಯನ್ನು, ಬೆವರು ಸುರಿಸಿ ಜೀವನ ನಡೆಸುವವನನ್ನು ಸಮಾಜ ಉಪೇಕ್ಷೆ ಮಾಡುತ್ತದೆ, ಪಾಪಿ ಎಂದು ಪರಿಗಣಿಸುತ್ತದೆ. ಶ್ರಮ ಮಾಡುವುದು ಮಹಾಪಾಪದ ಕೆಲಸ; ಶ್ರಮ ಮಾಡುವವನು ಪೂರ್ವಜನ್ಮದಲ್ಲಿ ಮಾಡಿದ ಪಾಪಕ್ಕೆ ಈಗ ಶಿಕ್ಷೆ ಅನುಭವಿಸುತ್ತಿದ್ದಾನೆ ಎಂಬ ಮಾತನ್ನು ಜನ ಆಡಿಕೊಳ್ಳುವುದನ್ನು ನಾವು ಆಗಾಗ ಕೇಳುತ್ತಿರುತ್ತೇವೆ.

ಸಮಾಜದಲ್ಲಿ ದುಡಿಯುವವನ ಬಗೆಗೆ ಈ ಬಗೆಯ ವಿಚಾರ ಬೆಳೆದಿದೆಯಲ್ಲದೆ, ವಿದ್ಯಾವಂತರಲ್ಲಿ ದುಡಿಮೆ ಇಲ್ಲದೆ ಸಂಪತ್ತು ಗಳಿಸುವುದು ಹೇಗೆ ಎಂಬ ಬಗೆಗೆ ಚಿಂತನೆ ನಡೆದಿದೆ. ಬೌದ್ಧಿಕ ದುಡಿಮೆಗೆ ವಿದ್ಯಾವಂತರು ಹೊಂದಿಕೊಳ್ಳುವುದು ಅನಿವಾರ್ಯವಾಗಿದೆ. ದೈಹಿಕ ದುಡಿಮೆ ಇಲ್ಲದೆ ಯಾವುದೇ ವಸ್ತುವನ್ನು ತಯಾರಿಸಲು ಸಾಧ್ಯವಿಲ್ಲ ಎಂಬುದನ್ನೂ ವಿದ್ಯಾವಂತರು ತಿಳಿದಿದ್ದಾರೆ. ಆದರೂ ಶ್ರಮದ ಬಗೆಗೆ, ಶ್ರಮಿಕನ ಬಗೆಗೆ ಅವರಿಗೂ ತಾತ್ಸಾರ ಭಾವನೆ ಇದೆ. ಈ ತಾತ್ಸಾರ ಭಾವನೆ ಈಗ ಇಡೀ ಸಮಾಜವನ್ನು ವ್ಯಾಪಿಸಿದೆ.

ಶ್ರಮಿಕನೂ ತನ್ನ ಈ ದುರವಸ್ಥೆಗೆ ಸ್ವಲ್ಪ ಮಟ್ಟಿಗೆ ಕಾರಣನಾಗಿದ್ದಾನೆ. ತನ್ನನ್ನು ಸಮಾಜ ಕಡೆಗಣಿಸಿ ನೋಡುತ್ತಿದೆ; ಬಂಡವಾಳಶಾಹಿ ತನ್ನನ್ನು ಬಳಸಿಕೊಂಡು ಶ್ರೀಮಂತಿಕೆ ಪಡೆದೂ ತಿರಸ್ಕಾರಬುದ್ಧಿಯಿಂದ ನೋಡುತ್ತಿದೆ; ಇದಕ್ಕೆ ಕಾರಣವೇನು ? ಎಂದು ಅವನು ಯೋಚಿಸುತ್ತಿಲ್ಲ. ತಾನು ಸಮಾಜದಲ್ಲಿ ಗಣ್ಯಸ್ಥಾನ ಪಡೆಯಬೇಕೆಂಬ ಹಂಬಲವೂ ಅವನಲ್ಲಿಲ್ಲ. ಸಮಾಜ ಮತ್ತು ಬಂಡವಾಳಶಾಹಿ ಕೂಡ ತನ್ನನ್ನು ಕಡೆಗಣಿಸಿ ನೋಡುವುದನ್ನು ಸರಿ ಎಂದು ಭಾವಿಸಿರುವಂತೆ ನಡೆದುಕೊಳ್ಳುತ್ತಿದ್ದಾನೆ. ಆತ್ಮಗೌರವವನ್ನು ಬೆಳೆಸಿಕೊಳ್ಳುವ ಯತ್ನ ಮಾಡುತ್ತಿಲ್ಲ. ದುರ್ವ್ಯಸನಗಳಿಗೆ ದಾಸನಾಗಿ ತನ್ನತನವನ್ನು ಇನ್ನಷ್ಟು ಕಳೆದುಕೊಂಡಿದ್ದಾನೆ. ಸಮಾಜದ ಅವಕೃಪೆಗೆ ತುತ್ತಾಗಿದ್ದಾನೆ. ಅಕ್ಷರಜ್ಞಾನ ಪಡೆಯಲು, ಬುದ್ಧಿಶಕ್ತಿ ಬೆಳೆಸಿಕೊಳ್ಳಲು, ಪರಿಶುದ್ಧ ಜೀವನ ನಡೆಸಲು, ಸಮಾಜದಲ್ಲಿ ಗೌರವದಿಂದ ಬಾಳಲು ಪ್ರಯತ್ನಿಸುತ್ತಿಲ್ಲ. ಕಾರ್ಮಿಕ ಸಂಘಟನೆಗಳೂ, ಕಾರ್ಮಿಕನಿಗೆ, ದುಡಿಯುವವನಿಗೆ, ಉತ್ಪಾದಕನಿಗೆ ಸಿಗಬೇಕಾದ ಗೌರವವನ್ನು ಸಮಾಜದಲ್ಲಿ ಸಂಪಾದಿಸಿಕೊಡಲು ಯೋಜನೆಗಳನ್ನು ಹೊಂದಿಲ್ಲ. ಹೀಗಾಗಿ ಸಮಾಜದಲ್ಲಿ ಅಧೋಗತಿಯಲ್ಲಿದ್ದಾನೆ ಕಾರ್ಮಿಕ, ಶ್ರಮಿಕ.

ಹಿಂದೆ ಒಂದು ಸಾರಿ ಕರ್ನಾಟಕ ಸರ್ಕಾರದ ಸಾರಿಗೆ ಸಂಸ್ಥೆಯನ್ನು ಕಾರ್ಮಿಕರೇ ನಡೆಸಲಿ ಎಂದು ಗೆಳೆಯ ಅನಂತಸುಬ್ಬರಾಯರಿಗೆ ಸಲಹೆ ಮಾಡಿದೆ. ಕಾರ್ಮಿಕ ನಾಯಕರು ಕಾರ್ಮಿಕರ ಪರವಾಗಿ ಹೋರಾಟ ನಡೆಸಿ, ಅವರ ವೇತನ ಮುಂತಾದವನ್ನು ಏರಿಸುವುದರಲ್ಲಿ ಆಸಕ್ತರಾಗಿದ್ದಾರೆಯೇ ವಿನಾ ಇಂತಹ ಗುರುತರ ಜವಾಬ್ದಾರಿ ವಹಿಸಿಕೊಂಡು, ಸಮಾಜದಲ್ಲಿ ಕಾರ್ಮಿಕರ ಗಣ್ಯತೆಯನ್ನು ಬೆಳೆಸುವ ಬಗೆಗೆ ಆಸಕ್ತಿ ತೋರುತ್ತಿಲ್ಲ.

ಇಂಗ್ಲೆಂಡಿನಲ್ಲಿ ಕಾರ್ಮಿಕರ ಘನತೆ ಬೆಳೆಸಲು ಯತ್ನಿಸಿದ ಒಬ್ಬರ ವಿಷಯವನ್ನು ಪ್ರಸ್ತಾಪಿಸಲು ಇಚ್ಛಿಸುತ್ತೇನೆ. ಒಬ್ಬ ಸಾಮಾನ್ಯ ವ್ಯಕ್ತಿ ಇದ್ದ. ಅವನು ಅಲೆಮಾರಿ ಪ್ರವೃತ್ತಿಯವನು. ಆದರೆ ಅವನು ದೊಡ್ಡ ದೊಡ್ಡವರ ಸಂಪರ್ಕದಲ್ಲಿ ಇದ್ದ. ಒಬ್ಬ ಶ್ರೀಮಂತ ವಿಧವೆ ಒಂದು ಬಟ್ಟೆ ಗಿರಣಿ ನಡೆಸುತ್ತಿದ್ದರು. ಆಕೆಗೆ ಈ ಅಲೆಮಾರಿಯ ಸ್ನೇಹ ಇತ್ತು. ಆಕೆ ಇವನನ್ನು ಮದುವೆಯಾಗಲು ಬಯಸಿದಳು. ಈ ಅಲೆಮಾರಿ ಒಂದು ಷರತ್ತು ಹಾಕಿದ. ''ನನ್ನ ಇಚ್ಛಾನುಸಾರ ನೀನು ಈ ಗಿರಣಿ ನಡೆಯಲು ಅವಕಾಶ ಮಾಡಿಕೊಟ್ಟರೆ ನಾನು ನಿನ್ನ ಜೀವನಸಂಗಾತಿ ಆಗಲು ಅಡ್ಡಿ ಇಲ್ಲ'' ಎಂದು. ಆ ಮಾಲೀಕಳೂ ಈ ಷರತ್ತಿಗೆ ಒಪ್ಪಿಗೆ ಸೂಚಿಸಿದಳು. ಮದುವೆ ಆಯಿತು.

ಕಾರ್ಖಾನೆ ನಿರ್ವಹಣೆಗೆ ಕೈಹಾಕಿದ. ೧೦೦೦ ಜನ ಕಾರ್ಮಿಕರು ಕೆಲಸಮಾಡುತ್ತಿದ್ದ ಕಾರ್ಖಾನೆ ಅದು. ಕಾರ್ಮಿಕರ ಸಭೆ ಕರೆದ. ಈ ಗಿರಣಿ ಇನ್ನು ಮುಂದೆ ನನ್ನ ನಿಮ್ಮ ಜಂಟಿ ಜವಾಬ್ದಾರಿಯಲ್ಲಿ ನಡೆಯತಕ್ಕದ್ದು. ಗಿರಣಿ ಲಾಭ ಸಂಪಾದಿಸಿದರೆ ಲಾಭ ಹಂಚಿಕೊಳ್ಳೋಣ. ನಷ್ಟವಾದರೆ ನಾವೆಲ್ಲ ಆ ನಷ್ಟವನ್ನೂ ಹಂಚಿಕೊಳ್ಳೋಣ ಎಂದ. ಅದಕ್ಕೆ

ಕಾರ್ಮಿಕರು ಒಪ್ಪಿದರು. ಆ ಆಡಳಿತ ಮಂಡಳಿಯನ್ನು ಪುನರ್ರಚಿಸಿದ. ಗಿರಣಿಯ ಒಂದೊಂದು ವಿಭಾಗದಿಂದ ಒಬ್ಬಿಬ್ಬರನ್ನು ಆಡಳಿತ ಮಂಡಳಿಗೆ ಆಯ್ಕೆಮಾಡಿಕೊಂಡ. ತಾನೂ ತನ್ನ ಮಡದಿಯೂ ಆಡಳಿತಮಂಡಳಿಯಲ್ಲಿರುತ್ತೇವೆಂದು ಹೇಳಿದ.

ಎಲ್ಲ ವಿಭಾಗದಲ್ಲಿ ಕೆಲಸ ಮಾಡುವವರಿಗೂ ಸಮಾನ ವೇತನ. ವರ್ಷದ ಕೊನೆಯಲ್ಲಿ ಘೋಷಿಸಲಾಗುವ ಒಟ್ಟು ಲಾಭಾಂಶದಲ್ಲಿ ಶೇ. ೧೫ರಷ್ಟು ಬಂಡವಾಳ ಹೂಡಿರುವ ತನ್ನ ಹೆಂಡತಿಗೆ; ಲಾಭಾಂಶದಲ್ಲಿ ಶೇ. ೨೫ರಷ್ಟನ್ನು ಆಪತ್ತು ನಿಧಿಯಾಗಿ (ಭವಿಷ್ಯನಿಧಿಯಾಗಿ) ತೆಗೆದಿಡುವುದು, ಉಳಿದ ಹಣವನ್ನು ಕಾರ್ಮಿಕರು, ಮಾಲೀಕರು ಹಂಚಿಕೊಳ್ಳುವುದು ಎಂಬ ತೀರ್ಮಾನಕ್ಕೆ ಬರಲಾಯಿತು.

ಕಾರ್ಮಿಕರಿಗೆ ಮನೆಗಳನ್ನು ಕಟ್ಟಿಕೊಡಲಾಯಿತು. ಕಾರ್ಮಿಕರು ದುರ್ವ್ಯಸನಗಳಲ್ಲಿ ತೊಡಗಬಾರದು. ಮನೆಯಲ್ಲಾಗಲಿ, ಲೇಬರ್ ಕಾಲೋನಿಯಲ್ಲಾಗಲಿ ಯಾವುದೇ ಜಗಳ ಮಾಡಬಾರದು, ಅವಾಚ್ಯ ಶಬ್ದಗಳನ್ನು ಬಳಸಬಾರದು, ಅನ್ಯೋನ್ಯತೆಯಿಂದ ಬಾಳಬೇಕು ಮುಂತಾದ ನಿಯಮಗಳನ್ನು ಜಾರಿಗೆ ತರಲಾಯ್ತು. ಕಾರ್ಮಿಕರ ಸಹಯೋಗದಲ್ಲಿ ಕಾರ್ಖಾನೆ ನಡೆಯಿತು. ಹೆಚ್ಚಿನ ಲಾಭ ಬರಲಾರಂಭಿಸಿತು.

ಈಗ ಗಾಜಿನಿಂದ ಬಟ್ಟೆ ತಯಾರಿಸುವ ಜವಳಿ ಉದ್ಯಮದಲ್ಲಿ ಈ ಸಂಸ್ಥೆ ತೊಡಗಿದೆ. ಇಂಗ್ಲೆಂಡಿನಲ್ಲಿ ಒಂದು ಪ್ರಮುಖ ಸಂಸ್ಥೆಯಾಗಿ ರೂಪುಗೊಂಡಿದೆ.

ಇಂಥದೇ ಪ್ರಯೋಗ ಇತ್ತೀಚೆಗೆ ಪೂನಾದಲ್ಲಿ ನಡೆದಿದೆ. ಕಮಾನಿ ಇಂಡಸ್ಟ್ರೀಸ್ ಎಂಬ ಪ್ರಮುಖ ಹೆಸರುವಾಸಿ ಕಾರ್ಖಾನೆ ಇತ್ತು. ಅದರ ಮಾಲಿಕರು ಅದನ್ನು ಜಂಕ್ ಮಾಡಿ ಹಾಕಿದರು. ಲಾಭ ದೋಚಿಕೊಂಡು, ರೋಗಪೀಡಿತ ಸಂಸ್ಥೆಯನ್ನಾಗಿ ಮಾಡಿ ಬಿಟ್ಟು ಹೋದರು. ಕಾರ್ಮಿಕರು ಬೀದಿಪಾಲಾಗುವ ಸ್ಥಿತಿಬಂತು. ಆ ಸಮಯದಲ್ಲಿ ಕೇಂದ್ರ ಸರ್ಕಾರ ರೋಗಗ್ರಸ್ತ ಸಂಸ್ಥೆಗಳನ್ನು ಕಾರ್ಮಿಕರು ವಹಿಸಿಕೊಳ್ಳುವುದಾದರೆ ಅವರ ವಶಕ್ಕೆ ನೀಡಲಾಗುವುದು ಎಂದು ಪೊಳ್ಳು ಆಶ್ವಾಸನೆಯನ್ನು ಘೋಷಿಸಿತ್ತು. ಆದರೆ ಯಾವ ಕಾರ್ಮಿಕ ಸಂಘಟನೆಯೂ ಈ ಜವಾಬ್ದಾರಿ ಹೊರಲು ಮುಂದಾಗಲಿಲ್ಲ.

ಕಮಾನಿ ಇಂಡಸ್ಟ್ರೀಸ್ ಕಾರ್ಮಿಕ ಸಂಘ, ಕಾರ್ಮಿಕರು ಈ ಕಾರ್ಖಾನೆಯನ್ನು ನಡೆಸಲು ಅನುಮತಿ ನೀಡಬೇಕೆಂದು ಸರ್ಕಾರಕ್ಕೆ ಮನವಿ ಮಾಡಿತು. ಕೇಂದ್ರ ಸರ್ಕಾರದಿಂದ ಯಾವುದೇ ಉತ್ತೇಜನಕಾರಕ ಉತ್ತರ ಬರಲಿಲ್ಲ. ಕಾರ್ಮಿಕರ ಸಂಘ ನ್ಯಾಯಾಲಯದ ಮೊರೆಹೊಕ್ಕಿತು. ಕೇಂದ್ರ ಸರ್ಕಾರದ ಧೋರಣೆಗನುಸಾರ ಕಮಾನಿ ಇಂಡಸ್ಟ್ರೀಸ್‌ಅನ್ನು ಅಲ್ಲಿಯ ಕಾರ್ಮಿಕ ಸಂಘಕ್ಕೆ ನೀಡಬೇಕೆಂದು ನ್ಯಾಯಾಲಯ ತೀರ್ಪಿತ್ತಿತು.

ಕಾರ್ಮಿಕರ ಸಂಘ ಕಾರ್ಖಾನೆ ನಡೆಸುವ ಜವಾಬ್ದಾರಿ ತೆಗೆದುಕೊಂಡಿತು. ಹಿಂದೆ ಕಾರ್ಖಾನೆಯಲ್ಲಿ ಕೆಲಸಮಾಡಿದ ಅನುಭವವಿದ್ದ ಪ್ರಾಮಾಣಿಕ ದಕ್ಷ ಅಧಿಕಾರಿಗಳನ್ನು ಆಡಳಿತ ಮಂಡಳಿಗೆ ಆಯ್ಕೆ ಮಾಡಿಕೊಂಡಿತು. ಕಾರ್ಮಿಕ ವರ್ಗದಿಂದಲೂ ಕೆಲ ದಕ್ಷ ಕೆಲಸಗಾರರನ್ನೂ ಆಯ್ಕೆ ಮಾಡಿತು. ಕಾರ್ಖಾನೆಯ ಕೆಲಸ ಆರಂಭವಾಯಿತು. ಕಮಾನಿ ಇಂಡಸ್ಟ್ರೀಸ್ ತಯಾರಿಸುತ್ತಿದ್ದ ಒಂದು ಐಟಂಗೆ ದೇಶದಾದ್ಯಂತ ತುಂಬ ಬೇಡಿಕೆ ಇತ್ತು. ಅದರಿಂದಾಗಿ ಕಾರ್ಮಿಕರು ನಡೆಸಲು ತೆಗೆದುಕೊಂಡ ಈ ಉದ್ಯಮ ಒಂದೆರಡು ವರ್ಷಗಳಲ್ಲೇ ಲಾಭದಾಯಕ ಸಂಸ್ಥೆಯಾಗಿ ಪರಿವರ್ತನೆಗೊಂಡಿತು. ಈಗ ಕಮಾನಿ ಇಂಡಸ್ಟ್ರೀಸ್ ಸುಸ್ಥಿತಿಯಲ್ಲಿದ್ದು ಮತ್ತೆ ಹೆಸರುಮಾಡಿದೆ.

ರೈತರು ಕಾರ್ಮಿಕರು ರಾಜ್ಯ ಸ್ಥಾಪನೆಗೆ ಈ ಬಗೆಯ ಪ್ರಯೋಗ ಒಂದು ದಾರಿದೀಪ ವಾಗಬಹುದು. ರೈತ, ಕಾರ್ಮಿಕ ಮುಂತಾದವರ ಶ್ರಮಿಕರ ರಾಜ್ಯ ಸ್ಥಾಪನೆ ನಮ್ಮ ಗುರಿಯಾದರೆ ರೈತರು ಕಾರ್ಮಿಕರುಗಳು ನಾಯಕತ್ವ ಬೆಳೆಸಿಕೊಳ್ಳಬೇಕು. ಕೀಳರಿಮೆ ಕೈಬಿಡಬೇಕು. ಹೊಣೆಗಾರಿಕೆ ಹೊರುವ ಸಾಮರ್ಥ್ಯ ಬೆಳೆಸಿಕೊಳ್ಳಬೇಕು. ಇದೆಲ್ಲಕ್ಕಿಂತ ಹೆಚ್ಚಾಗಿ ಅವರ ಚಾರಿತ್ರ್ಯ ವೃದ್ಧಿಯಾಗಬೇಕು. ಈ ಬಗೆಗೆ ರೋಗಗ್ರಸ್ತ ಕಾರ್ಖಾನೆಗಳ ಕಾರ್ಮಿಕ ಸಂಘಗಳು ಗಮನ ನೀಡಿಯಾವೇ ?

ಬೆಂಗಳೂರು

**ಎಚ್. ಎಸ್. ದೊರೆಸ್ವಾಮಿ**

**ಬಸವಣ್ಣನಿಗೆ ಅವಮಾನ ? !**

ಇತ್ತೀಚೆಗೆ ಮಾಧ್ಯಮಗಳಲ್ಲಿ ಬಸವಣ್ಣನವರಿಗೆ ಅವಮಾನವಾಗಿದೆ ಮತ್ತು ಬಸವಾನು ಯಾಯಿಗಳಿಗೆ ಮಾನಸಿಕ ಆಘಾತವಾಗಿದೆ ಎಂದು ಕೆಲವರು ಬೊಬ್ಬೆ ಇಡುತ್ತಿದ್ದಾರೆ, ಅದಕ್ಕೆ ಕಾರಣವಾದ ಡಾ|| ಬಂಜಗೆರೆ ಜಯಪ್ರಕಾಶರ, 'ಆನು ದೇವಾ ಹೊರಗಣವನು...' ಎಂಬ ಬಸವಣ್ಣನ ಜಾತಿ ಮೂಲದ ವಿಶ್ಲೇಷಣೆಯನ್ನು ಕುರಿತ ಕೃತಿಯನ್ನು ಸರ್ಕಾರ ಬಹಿಷ್ಕರಿಸಬೇಕು ಎಂದು ಕೋಲಾಹಲವನ್ನುಂಟುಮಾಡುತ್ತಿದ್ದಾರೆ. ಕಾನೂನು ಮತ್ತು ಗೃಹಮಂತ್ರಿಗಳಾದ ಎಂ. ಪಿ. ಪ್ರಕಾಶ್ ಅವರು ಅದೊಂದು ಸಂಶೋಧನ ಕೃತಿ, ಅದರಲ್ಲಿ ಪ್ರತಿಪಾದಿಸಲಾದ ವಾದಗಳನ್ನು ಒಪ್ಪದವರು ಅದನ್ನು ಖಂಡಿಸಿ ತಮ್ಮ ವಾದಗಳನ್ನು ಬರಹ ರೂಪದಲ್ಲಿ ಪ್ರಕಟಿಸಬಹುದು, ಹೀಗೆ ವಾದ ಮತ್ತು ಪ್ರತಿವಾದಗಳನ್ನು ಸಾರ್ವಜನಿಕವಾಗಿ ವಿನಿಮಯ ಮಾಡಿಕೊಳ್ಳುವ ಅಭಿವ್ಯಕ್ತಿ ಸ್ವಾತಂತ್ರ್ಯ ಲೇಖಕರಿಗೆ ಇದೆ, ಅದನ್ನು ಸರ್ಕಾರ ಮೊಟಕು ಮಾಡುವುದಿಲ್ಲ ಎಂದು ಬಳ್ಳಾರಿಯ ಒಂದು ಸಭೆಯಲ್ಲಿ ಹೇಳಿದರು. ಅದಕ್ಕೆ ಪ್ರತಿಯಾಗಿ ವಿಶ್ವ ಬಸವಧರ್ಮ ಮಹಾಸಭಾ, ಬಳ್ಳಾರಿ ಮತ್ತು ಬಸವ ಸಮಿತಿ, ಬೆಂಗಳೂರು, ಇವರು ಪ್ರಕಾಶ್ ವಿರುದ್ಧ ತಿರುಗಿಬಿದ್ದು ಅವರನ್ನು ಮಂತ್ರಿಪದವಿಯಿಂದ ಕಿತ್ತುಹಾಕಬೇಕು ಎಂದು ಮುಖ್ಯಮಂತ್ರಿ ಗಳಿಗೆ ತಾಕೀತು ಮಾಡಿದ್ದಾರೆ! ಅಷ್ಟೇ ಅಲ್ಲ ಬಳ್ಳಾರಿ ಬಂದ್, ಕರ್ನಾಟಕ ಬಂದ್, ಪ್ರಕಾಶ್ ಮತ್ತು ಕುಮಾರಸ್ವಾಮಿಗಳ ನಿವಾಸಗಳ ಮುಂದೆ ಧರಣಿ ಎಂಬ ಬೆದರಿಕಾ ಗಂಟೆಗಳನ್ನು ಬಾರಿಸುತ್ತಿದ್ದಾರೆ.

ಈ ಎಲ್ಲ ರಂಪಾಟವನ್ನು ದೂರದಿಂದ ನೋಡುವ ನನ್ನಂಥವರಿಗೆ ಇದೊಂದು ರೋಚಕ ಪತ್ತೇದಾರಿ ಪ್ರಹಸನದಂತೆ ಕಾಣುತ್ತಿದೆ. 'ಋಷಿಮೂಲ, ನದಿಮೂಲ ಕೇಳಬಾರದು' ಎಂಬುದು ಒಂದು ನಾಣ್ಣುಡಿ. ಆದರೆ ನಮ್ಮ ಸಂಶೋಧಕರು, ವಿದ್ವಾಂಸರು ಎನಿಸಿಕೊಂಡವರು ಅತ್ಯಂತ ಕಾಳಜಿಯಿಂದ ಆ ಕೆಲಸವನ್ನು ಮಾಡುತ್ತಲೇ ಇದ್ದಾರೆ. ಡಾ|| ಎಂ. ಚಿದಾನಂದಮೂರ್ತಿ, ಡಾ|| ಎಂ. ಎಂ. ಕಲಬುರ್ಗಿ ಮುಂತಾದವರು ಈ ಕ್ಷೇತ್ರದಲ್ಲಿ ಹೊಸ ಹೊಸ ಅನ್ವೇಷಣೆಗಳನ್ನು ಬಯಲು ಮಾಡಿದಾಗ ಅವರ ವಿರುದ್ಧ ವಾಗ್ದಾಳಿಗಳೇ ಆದವು. ವಾದ, ವಿವಾದಗಳ ನಂತರ ಈಗ ಅವು ತಣ್ಣಗಾಗಿವೆ.

ಅಮೆರಿಕಾದಲ್ಲಿ ಕೆಲವು ವರ್ಷಗಳ ಹಿಂದೆ ಇಂತಹುದೇ ಒಂದು ಪ್ರಹಸನ ನಡೆದುದನ್ನು ನಾನು ಕಣ್ಣಾರೆ ಕಂಡಿದ್ದೆ. ನ್ಯೂಯಾರ್ಕಿನ ಒಂದು ಕಲಾ ಪ್ರದರ್ಶನಾಲಯದಲ್ಲಿ 'ವರ್ಜಿನ್ ಮೇರಿ' ಎಂಬ ಶೀರ್ಷಿಕೆಯ ಒಂದು ಕಲಾಕೃತಿ ಪ್ರದರ್ಶಿತವಾಗಿತ್ತು. ಯೇಸುವಿನ ಮಾತೆಯಾದ ಮೇರಿಯನ್ನು ಕನ್ಯೆ ಎಂದು ಭಾವಿಸುತ್ತಾರೆ ! ಅದೊಂದು ನಗ್ನ ಚಿತ್ರವಾಗಿದ್ದು ಚಿತ್ರದ ಮೈಮೇಲೆ ಬೂಟಿನ ಹೆಜ್ಜೆ ಗುರುತುಗಳಿದ್ದುವು. ಮದುವೆಯಾಗದೆ ಇದ್ದ ಮೇರಿಗೆ ಮಗ ಹೇಗೆ ಜನಿಸಿದ ? ಮೇರಿಯ ಕನ್ಯತ್ವವನ್ನು ಅನುಮಾನದಿಂದ ಕಂಡ ಕಲಾವಿದನ ಅಭಿವ್ಯಕ್ತಿ ಅದನ್ನು ಸೂಚಿಸುತ್ತಿದ್ದಿರಬೇಕು. ಅದನ್ನು ಕಂಡ ಸಂಪ್ರದಾಯಶೀಲ ಕ್ರಿಶ್ಚಿಯನ್ನರು ಒಂದು ಪ್ರತಿಭಟನಾ ಮೆರವಣಿಗೆ ಮಾಡಿ ಅಂದಿನ ರಾಷ್ಟ್ರಾಧ್ಯಕ್ಷರಿಗೆ ಆ ಚಿತ್ರ ಪ್ರದರ್ಶನವನ್ನು ಬಹಿಷ್ಕರಿಸಬೇಕೆಂದು ಮನವಿ ಮಾಡಿಕೊಂಡರು. ಆಗ ಅಮೆರಿಕಾದ ರಾಷ್ಟ್ರಾಧ್ಯಕ್ಷರು ಪ್ರತಿಕ್ರಿಯಿಸಿದ್ದು ಹೀಗೆ : ಅದೊಂದು ಕಲಾ ಕೃತಿ. ಕಲಾವಿದನಿಗೆ ಅಭಿವ್ಯಕ್ತಿ ಸ್ವಾತಂತ್ರ್ಯವಿದೆ. ಅದನ್ನು ಸಾರ್ವಜನಿಕ ಸ್ಥಳದಲ್ಲಿ ಪ್ರದರ್ಶಿಸಲಿಲ್ಲ, ಪ್ರವೇಶ ಶುಲ್ಕವನ್ನು ನೀಡಿ ಪ್ರವೇಶ ಪಡೆದವರು ಮಾತ್ರ ಅದನ್ನು ನೋಡಬಹುದು. ಅದನ್ನು ಬಹಿಷ್ಕರಿಸಲಾಗುವುದಿಲ್ಲ.

ಇನ್ನು ಬಸವಣ್ಣನತ್ತ ಬಂದರೆ, ಅದೇಕೆ ಅವನು ತನ್ನ ವಚನಗಳಲ್ಲಿ ಅಷ್ಟೊಂದು ಸಾರಿ ತನ್ನನ್ನು ಮಾದಿಗ, ಹೊಲೆಯ, ಡೋಹರ ಎಂದು ಕರೆದುಕೊಳ್ಳುತ್ತಾನೆ ಎಂದು ಅಚ್ಚರಿ ಯಾಗುತ್ತದೆ. ಬಸವಣ್ಣ, ಕಾವ್ಯಗಳಲ್ಲಿ ಹೇಳಲಾದಂತೆ ಬ್ರಾಹ್ಮಣ ಎಂಬ ಮೇಲುಜಾತಿಯಲ್ಲಿ ಹುಟ್ಟಿದವನಾದರೂ ಕೀಳೆಂದು ಪರಿಗಣಿಸಲಾದ ಮಾದಾರ ಜಾತಿಯೊಡನೆ ಭಾವನಾತ್ಮಕ ವಾಗಿ ತನ್ನನ್ನು ಸಮೀಕರಿಸಿಕೊಳ್ಳುವುದು ಅವನ ವಿಶಾಲ ಹೃದಯ ಮತ್ತು ಮಾನವ ಪ್ರೇಮದ ಪ್ರತೀಕವಲ್ಲವೆ ? ಬಸವಣ್ಣನನ್ನು ಕುರಿತ ಕಾವ್ಯ, ಪುರಾಣ ಮತ್ತು ಜೀವನ ಚರಿತ್ರೆ ಗಳಲ್ಲಿ ಅದನ್ನೇ ಹೇಳುತ್ತಾ ಬರಲಾಗಿದೆ. ಹೀಗಿರುವಾಗ ಅವನು ಮಾದಿಗನಾಗಿಯೇ ಹುಟ್ಟಿರಬಹುದೆಂದು ವಿಶ್ಲೇಷಣೆ ಮಾಡುವ ಲೇಖಕ ಮತ್ತು ಆತನನ್ನು ಸಹಾನುಭೂತಿ ಯಿಂದ ನೋಡುವವರು ಭಾವನಾತ್ಮಕವಾಗಿ ಬಸವಣ್ಣನಿಗೆ ಸಮೀಪವರ್ತಿಗಳಾಗುವುದಿಲ್ಲವೆ ?

ಬಸವಣ್ಣನ ದೇಹ ಯಾವ ಜಾತಿಯಲ್ಲೇ ಹುಟ್ಟಿರಲಿ ಅವನ ಆತ್ಮ ಹುಟ್ಟಿದುದು ಮಾತ್ರ ಮಾದಾರ ಚೆನ್ನಯ್ಯನ ಜಾತಿಯಲ್ಲೇ ಎಂಬುದರಲ್ಲಿ ಎಳ್ಳಷ್ಟೂ ಅನುಮಾನವಿಲ್ಲ.

ಬಸವಧರ್ಮ ಮಹಾಸಭಾ ಮತ್ತು ಬಸವ ಸಮಿತಿಗಳು ಬಂಜಗೆರೆ ತಮ್ಮ ಕೃತಿಯಲ್ಲಿ ಅಂಬೇಡ್ಕರ್ ಮತ್ತು ಕುವೆಂಪುರವರಿಗೂ ಅವಮಾನ ಮಾಡಿದ್ದಾರೆ ಎಂದು ಆರೋಪಿಸಿವೆ. ಅಂಬೇಡ್ಕರ್ ಮತ್ತು ಕುವೆಂಪುರವರನ್ನು ಗುಟ್ಟಾಗಿ ಅವಮಾನಿಸುತ್ತಿದ್ದವರ ಗುಟ್ಟನ್ನು ಬಂಜಗೆರೆ ಅವರು ಬಯಲು ಮಾಡಿದ್ದಾರೆಯೇ ಹೊರತು ಅವರನ್ನು ಅವಮಾನಿಸಿಲ್ಲ ಎಂಬುದು 'ಆನು ದೇವಾ ಹೊರಗಣವನು...' ಕೃತಿಯ ಪುಟ ೧೫೭ರಲ್ಲಿ ಸ್ಪಷ್ಟವಾಗಿ ಮೂಡಿದೆ. ಟೀಕಾಕಾರರು ಮತ್ತೊಮ್ಮೆ ಪರಿಶೀಲಿಸಿ ಖಚಿತಪಡಿಸಿಕೊಳ್ಳಬಹುದು.

ಇಂದು ಮಠಮಾನ್ಯಗಳಲ್ಲಿ, ಬಸವ ಸಭಾ, ಸಮಿತಿಗಳಲ್ಲಿ ಮತ್ತು ಆ ಸಂಸ್ಥೆಗಳ ಅನುಯಾಯಿಗಳಲ್ಲಿ ಬಂಧಿತನಾಗಿರುವ ಬಸವಣ್ಣ, ನಿಜವಾದ ಬಸವತತ್ವಗಳಿಂದ ಎಷ್ಟು ದೂರವಾಗಿದ್ದಾನೆ ಎಂಬುದನ್ನು ಸೂಕ್ಷ್ಮವಾಗಿ ಪರ್ಯಾಲೋಚಿಸಬೇಕಾಗಿದೆ. ಇಲ್ಲದೆ ಹೋದರೆ ೧೨ನೇ ಶತಮಾನದ ಬಸವಣ್ಣ ಯಾರ ಸಂಪರ್ಕವನ್ನು ತೊರೆದು ಯಾರ ಒಡನಾಡಿಯಾಗಲು, ಯಾರತ್ತ ಪಥ ಸಂಚಲನ ಮಾಡಿದನೋ, ಅದಕ್ಕೆ ತದ್ವಿರುದ್ಧವಾದ ದಿಕ್ಕಿನಲ್ಲಿ ನಾವು ಹೋಗುತ್ತಿಲ್ಲವೇ ಎಂದು ಬಸವಾನುಯಾಯಿಗಳೆಂದು ತಮ್ಮನ್ನು ತಾವು ಕರೆದುಕೊಳ್ಳುವ ಶರಣ ಸಂಜಾತರು ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆ.

ದಾವಣಗೆರೆ

ಬಿ. ವಿ. ವೀರಭದ್ರಪ್ಪ

# ಸಿಗ್ಮಂಡ್ ಫ್ರಾಯ್ಡನಿಗೆ ನಮಸ್ಕಾರ !



ಸಂದರ್ಭ
ಮನೋವಿಜ್ಞಾನಿ ಸಿಗ್ಮಂಡ ಫ್ರಾಯ್ಡನ
೧೫೧ನೆಯ ಜನ್ಮದಿನ - ಮೇ ೬, ೨೦೦೭

ಸಿಗ್ಮಂಡ ಫ್ರಾಯ್ಡ
ಮಾತಾಡಲೊಲ್ಲೇಕೆ ! ನಿನ್ನ ದೀರ್ಘ ಮೌನದಲಿ
ಯಾವ ಅರ್ಥ ಹುದಗಿದೆ ತಿಳಿಯದು !
ಮನದ ಚಿತ್ರಗಳನ್ನು ಅಂದದಲಿ
ಬಿಡಿಸಿದ ಕಲಾ ಭೀಷ್ಮ ನೀನು
ಮನೋವಿಜ್ಞಾನದ ಆಳ ಅಗಲಗಳನು
ಅಳೆದ ಮನೋಭೀಮ ನೀನು
ವಿರಾಟ ಮನಕೆ ಕಿಟಕಿಯನ್ನು ಕೊರೆದು
ಬೆಳಕು ಕಂಡು ಉಂಡ ಪಿತಾಮಹನು ನೀನು
ಈಗೇಕೆ ಮೌನ ! ಯಾವ ಸಿಟ್ಟು ಯಾವ
ಯಾವ ಕೋಪ ತಿಳಿಯಲೊಲ್ಲದು ನಮಗೆ ! ಹೇಳು !
ಚಿಂತನೆಯ ದಿಕ್ಕಿಗೆ ಬೆಳಕು
ಹಿಡಿದ ದೀಪಧಾರಕನು ನೀನು
ಈಗ ನೋಡು – ಎಲ್ಲವೂ ವಿಪರ್ಯಾಸ
ಬಣ್ಣ ಬಣ್ಣದ ಕನಸುಗಳನು ಕಲ್ಪಿಸಿ
ಹೆಜ್ಜೆ ಹಾಕುವ ನಮ್ಮ ಮನವು
ಕತ್ತಲೆಯ ಕೂಪ ಕಂಗೆಟ್ಟಿದೆ.
ಅಂಧರಾಗಿ ಮುಗ್ಗರಿಸಿ ಬೀಳುವ
ನಮ್ಮನ್ನು ಕೈಹಿಡಿದು ನಡೆಸಬಲ್ಲೆಯಾ
ಯಾಕೆ ಮೌನ ! ತಪ್ಪು ನನ್ನದೋ
ಅಥವಾ ನಿನ್ನ ಮನೋವಿಜ್ಞಾನದೋ ಕಾಣೆ !
ಹೇಳು –
ಭಾವನೆಗಳು ಗಾಸಿಕೊಂಡು
ಹರಳುಗಟ್ಟಿವೆ –
ಪ್ರೀತಿ ಪ್ರೇಮಗಳು ಮೂಕವಾಗಿವೆ.
ಮನದ ಶೂನ್ಯತೆಯಲಿ ಬಂಧು
ಬಾಂಧವರಾರೆಂದು ಕಾಣದಾಗಿದೆ
ವಿಕಾರಗೊಂಡ ಮನ ಛಿದ್ರ ಛಿದ್ರವಾಗಿದೆ
ಕಿವಿ ಮಾತಿನಲ್ಲಿ ಉಪಾಯ ಹೇಳಬಲ್ಲೆಯಾ
ಮೌನ ಮುರಿದು ಒಂದಿಷ್ಟು ಮಾತಾಡು !

ನಾವೂ ಹುಚ್ಚರೆಂದರೂ ಸರಿ
ಮೂರ್ಖರೆಂದರೂ ಸರಿ
ಭಾವನೆಯ ವಿರಾಟಕೆ ವಿಕೃತಿಗಳು
ಮನೋಭಿತ್ತಿಯಲ್ಲಿ ನೂರೆಂಟು
ಭೈರವನ ರೂಪಗಳು !
ತಮ್ಮನಿಂದ ಅಣ್ಣನಿಗೆ ಗುಂಡೇಟು
ಕೊನೆಗೆ ಸಾವಿಗೆ ಶರಣು !
ಮನದ ರುದ್ರ ನರ್ತನ !
ಅಬ್ಬಾ ! ಮಗನಿಂದ ತಾಯಿಯ ಕೊಲೆ
ಶವದ ಯಾತ್ರೆಯ ಸುತ್ತಲೂ
ರಾಜಕೀಯ ಅಟ್ಟಹಾಸ
ಶವದೊಡನೆ ಹತ್ತಾರು ಜನ
ಗೋರಿ ಕಂಡ ಕರಳು ಕಿವಿಚುವ ರೋದನ !
ಎಲ್ಲೆಲ್ಲು ಭಯಮನದ ಕರಿಮೋಡ
ನೀನೇಕೆ ಮೌನ ಹೇಳು
ನಮ್ಮ ತಪ್ಪು ಹೆಜ್ಜೆಗೆ ಯಾವ ಶಿಕ್ಷೆ ?
ಹೀಗೆ ನಡೆದಂತೆಲ್ಲ
ಮನುಷ್ಯ–ಮನುಷ್ಯನಿಗೆ ಅಂಜಿಕೆ
ಭಯಾನಕ ರಿಂಗಣದ ಸುತ್ತಲೂ
ಕಾಣದಾಗಿದೆ ನಮ್ಮ ಮನೋರಥಕೆ
ದಾರಿ !
ಅಯ್ಯಾ ತೋರಿಸು ಒಂದಿಷ್ಟು ದಾರಿ !

ನಮ್ಮ ಸಂಸ್ಕೃತಿ – ಸಂವೇದನೆಗಳಿಗೆ
ನಾನು ಬೆಂಕಿ ಹಚ್ಚಿ ಮೈ ಕಾಸಿ
ಕೊಳ್ಳುವಾಗ ಮನ ವಿಕಾರಗೊಂಡು
ಕಬಂಧಬಾಹುಗಳನು ಹೊರ ಚಾಚಿದೆ
ಬದುಕಬೇಕೆಂಬ ಬಾಳಿನ ಸೂತ್ರಗಳನು
ಹಿಗ್ಗಾ ಮುಗ್ಗಾ ಎಳದಾಡಿ ಮನ ನರಕು
ಕಂಡಿದೆ ಈ ಕರಾಳಮನದ ರೂಪ
ಸಿಗ್ಮಂಡ ಫ್ರಾಯ್ಡ ನಿನ್ನ ಮನದಲಿ
ಅವಿತಿದೆ ನಮಗಿರುವ ಉತ್ತರ
ಗೊತ್ತಾಗಿದೆ ಈಗ ಇದರ ಕಾರಣ
ಮನದ ಶಾಂತಿ ಸಮಾಧಾನಗಳ
ಬೇರು ಕಾಣುವ ಮಂತ್ರ.
ನೀನು ಬುದ್ಧಿ ಹೇಳಿಕೊಟ್ಟು ಶತಮಾನವಾಯಿತು
ಆದರೆ ನಿನ್ನನ್ನೇ ಬದಿಗೊತ್ತಿರುವ ನಾವೆಂಥ
ಭೂಪರು !
ಸಿಗ್ಮಂಡ ಫ್ರಾಯ್ಡ ನೀನು
ನಿನ್ನ ದೀರ್ಘ ಮೌನ ನಾನು ಅರಿತಿರುವೆ
ಉತ್ತರ ನಮ್ಮ ಮನದಲ್ಲಿದೆ
ನಿನಗೆ ಶತಕೋಟಿ ನಮಸ್ಕಾರಗಳು.

ಡಾ|| ವಸಂತ ಅ. ಕುಲಕರ್ಣಿ ಎಂ. ಡಿ.
ಮೊದಲನೆಯ ಮಹಡಿ ನಂ. ೧೯೯೮, ೬ನೇ ಬಿ ಕ್ರಾಸ್
೧ನೇ 'ಬಿ' ಮೇನ್, ಕೆಂಗೇರಿ ಉಪನಗರ
ಬೆಂಗಳೂರು - ೫೬೦ ೦೬೦

# ೧೮೫೭ರ ಪ್ರತಿರೋಧ

**ಭಾ**ರತದ ಸ್ವಾತಂತ್ರ್ಯಕ್ಕಾಗಿ ನಡೆದ ದೀರ್ಘಕಾಲದ ಹೋರಾಟಗಳಲ್ಲಿ ಸ್ಮರಣೀಯ ಪಾತ್ರ ಪಡೆದಿರುವ ೧೮೫೭ರ ಪ್ರತಿರೋಧಕ್ಕೆ ಈಗ ೧೫೦ ವರ್ಷ. ಅದು ಸಿಪಾಯಿಗಳಿಂದ ಪ್ರಾರಂಭವಾದದ್ದು. ಫಿರಂಗಿಯವರ ದುರಾಡಳಿತದಿಂದ ರೊಚ್ಚಿಗೆದ್ದ ಪ್ರಚಲಿತ ಊಳಿಗಮಾನ್ಯ ವ್ಯವಸ್ಥೆಯ ನವಾಬರು, ರಾಜರು, ಜಮೀನುದಾರರು, ರೈತಾಪಿವರ್ಗ, ಈಸ್ಟ್ ಇಂಡಿಯಾ ಕಂಪನಿಯ ಸೇನಾ ತುಕಡಿಗಳಲ್ಲಿ ಹೊಟ್ಟೆಪಾಡಿಗಾಗಿ ಸಿಪಾಯಿಗಳಾದ ಕೃಷಿ ಕಾರ್ಮಿಕರು, ಹೀಗೆ ಸಮಾಜದ ಎಲ್ಲ ವರ್ಗದವರೂ ಫಿರಂಗಿಯವರ ವಿರುದ್ಧ ಒಂದಾಗಿದ್ದ ವಿಶಿಷ್ಟ ಸಂದರ್ಭ. ಉದ್ದೇಶ ಫಿರಂಗಿಯವರನ್ನು ಓಡಿಸುವುದು, ತಮ್ಮ ಸ್ವಂತ ವ್ಯವಸ್ಥೆಯನ್ನು ಉಳಿಸಿಕೊಳ್ಳುವುದು. ಇದು ಹಠಾತ್ತನೆ ದತ್ತು ಪುತ್ರನ ಹಕ್ಕಿನ ವಿವಾದ, ಹಂದಿ-ಹಸುವಿನ ಕೊಬ್ಬಿನಂಥ ವಿಷಯಗಳಿಂದ ಉಂಟಾದ ಪ್ರಕ್ರಿಯೆಯಲ್ಲ. ಅದರ ಹಿಂದೆ ಸಾಕಷ್ಟು ತಯಾರಿ ಇತ್ತು. ನಾನಾಸಾಹೇಬ, ರಾಣಿ ಝಾನ್ಸಿ, ಕುಂವರಸಿಂಹ, ತಾಂತ್ಯಾಟೋಪಿ ಮುಂತಾದ ನಾಯಕರಿದ್ದರು. ಎಷ್ಟೇ ಸಣ್ಣ ಪ್ರಮಾಣದ್ದಿದ್ದರೂ ಪ್ರಾರಂಭದಲ್ಲಿ ವ್ಯವಸ್ಥಿತವಾಗಿತ್ತು. ಮುಂದುವರಿದಂತೆ ವಾಸ್ತವ ಪರಿಸ್ಥಿತಿಯಲ್ಲಿ ಮಿಲಿಟರಿ ಶಕ್ತಿಯ ದೌರ್ಬಲ್ಯದಿಂದಾಗಿ ಇದರ ವೈಫಲ್ಯ ಅನಿವಾರ್ಯವಾಗಿತ್ತು. ಆದರೆ ಈ ಅಲ್ಪ ಕಾಲದ ಪ್ರತಿರೋಧವೂ ತನ್ನ ವ್ಯಾಪ್ತಿಗೆ ಮೀರಿ, ಹಿಂದೂಸ್ತಾನಾದ್ಯಂತ ಮಿಂಚಿನ ಸಂಚಾರ ಉಂಟುಮಾಡಿತು. ಈಗ ಲಭ್ಯವಿರುವ ದಾಖಲೆಗಳಿಂದ ತಿಳಿದು ಬರುವಂತೆ, ದೂರದ ಚೀಣಾ, ಪರ್ಶಿಯಾ ಮುಂತಾದ ವಿದೇಶಗಳಲ್ಲೂ ಅಲೆಗಳನ್ನೆಬ್ಬಿಸಿತ್ತು, ಮೆಚ್ಚುಗೆ ಗಳಿಸಿತ್ತು.

'ಸಿಪಾಯಿ ದಂಗೆ' ಎಂದೇ ಲಘುವಾಗಿ ಬಹುತೇಕ ಇತಿಹಾಸಕಾರರಿಂದ ಗುರುತಿಸಲ್ಪಟ್ಟು ೧೮೫೭ರಲ್ಲಿ ಆಗಿನ ಹಿಂದೂಸ್ತಾನದಲ್ಲಿ ನಡೆದ ಬ್ರಿಟಿಷ್ ಆಳ್ವಿಕೆಯ ವಿರುದ್ಧದ ಈ ಬಂಡಾಯದ ಸ್ವರೂಪವೇನು ಎಂದು ಚರ್ಚಿಸುವವರು ನಮ್ಮ ಮಧ್ಯೆ ಇನ್ನೂ ಇದ್ದಾರೆ. ಅದು ಬ್ರಿಟಿಷರ ವಿರುದ್ಧವೇ ಅಲ್ಲ ಎನ್ನುವವರಿದ್ದಾರೆ. ಅದು ಕೆಲವು ಅಸಮಾಧಾನಗಳ ವಿರುದ್ಧ, ತಾತ್ಕಾಲಿಕ, ಕ್ಷಣಿಕ, ಸೀಮಿತ ಎಂದು ಮೂಗುಮುರಿಯುವವರಿದ್ದಾರೆ. ಈ ಸಂದರ್ಭದ ಐವತ್ತನೆಯ ವರ್ಷದ ಸುಮಾರಿಗೆ ವೀರ ಸಾವರ್ಕರರು ಅದರ ಇತಿಹಾಸವನ್ನು ರಚಿಸಿದ ಪ್ರಥಮ ಭಾರತೀಯರು. ಅವರು ತಮ್ಮ ಪುಸ್ತಕಕ್ಕೆ 'ಭಾರತದ ಸ್ವಾತಂತ್ರ್ಯ ಸಂಗ್ರಾಮ'ವೆಂದು ಕರೆದಿದ್ದರು. ಅದರಾಚೆಗೆ ಅದನ್ನು ಪುನರ್ಮುದ್ರಿಸಿದವರು ಆ ಶೀರ್ಷಿಕೆಯ ಹಿಂದೆ 'ಪ್ರಥಮ'ವೆಂದು ಸೇರಿಸಿದರೆಂದು ಹೇಳುವುದುಂಟು. ೧೮೫೭-೫೯ರ ನಡುವೆ ಒಮ್ಮೆ ವ್ಯಾಪಕವಾಗಿ, ನಂತರ ಅಲ್ಲಲ್ಲೇ ಪ್ರಕಟವಾಗಿ, ಸಂಪೂರ್ಣವಾಗಿ ಹತ್ತಿಕ್ಕಲ್ಪಟ್ಟ, ಈ ಬಂಡಾಯದ ಪೂರ್ವದಲ್ಲೂ ೧೮೫೩ರಷ್ಟು ಮುಂಚೆಯೇ ಕಾರ್ಲ್ ಮಾರ್ಕ್ಸ್ ಹಿಂದೂಸ್ತಾನವನ್ನು ಕುರಿತು ಐತಿಹಾಸಿಕ ಹೊಳಪಿನ ಹತ್ತಾರು ವಿಮರ್ಶಾ ಲೇಖನಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ ಮುಂದೊಮ್ಮೆ ಇಂಥ ಪ್ರತಿರೋಧ ಉದ್ಭವವಾಗಬಹುದೆಂಬ ಮುನ್ಸೂಚನೆಯಿದೆ. ಬಂಡಾಯದ ಅವಧಿಯ ಉದ್ದಕ್ಕೂ ಮಾರ್ಕ್ಸ್ ಅಂದಂದಿನ ಸಂಗತಿಗಳ ಮೇಲೆ ಬಹಳ ಮೌಲಿಕವಾದ ವಿಮರ್ಶಾ ಲೇಖನಗಳನ್ನು ರಚಿಸಿದ್ದಾರೆ. ಈ ಲೇಖನಗಳನ್ನೆಲ್ಲಾ ಒಟ್ಟಾರೆ ಸಂಗ್ರಹಿಸಿ ಮಾಸ್ಕೋದ ಪ್ರೋಗ್ರೆಸ್ ಪುಸ್ತಕ ಪ್ರಕಾಶನ ಈ ವಿಪ್ಲವದ ಶತಮಾನೋತ್ಸವದ ವೇಳೆಗೆ ಪ್ರಕಟಿಸಿದ್ದರು. ಈ ಪ್ರಯತ್ನದ ಹಿಂದೆ ಅಂದಿನ ಹಿರಿಯ ಕಮ್ಯುನಿಸ್ಟ್ ನಾಯಕ ಪಿ. ಸಿ. ಜೋಷಿಯವರ ಪರಿಶ್ರಮವಿತ್ತೆಂದು ಕಂಡುಬರುತ್ತದೆ. ಮಾರ್ಕ್ಸ್ ತಾನೇ ಈ ಯಾವ ಲೇಖನದಲ್ಲೂ ಹಾಗೆ ಸ್ಪಷ್ಟವಾಗಿ ಹೇಳದಿದ್ದರೂ, ಈ ಲೇಖನಗಳ ಸಂಗ್ರಹಕ್ಕೆ 'ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ'ವೆಂಬ ಶೀರ್ಷಿಕೆಯನ್ನು ನೀಡಲಾಗಿದೆ. ಈ ಲೇಖನಗಳನ್ನು ಓದಿದವರಿಗೆಲ್ಲ ಈ ಶಿರೋನಾಮೆಯ ಸಾರ್ಥಕ್ಯ ಸ್ಪಷ್ಟವಾಗುತ್ತದೆ. ೧೮೫೭ರ ಸಮಕಾಲೀನ ಮತ್ತು ನಂತರದ ಚರಿತ್ರಕಾರರು ಮತ್ತು ರಾಜಕೀಯ ವ್ಯಕ್ತಿಗಳು ಆ 'ದಂಗೆ'ಯ ಸ್ವರೂಪವನ್ನು ಅರ್ಥೈಸಲು ಹಲವು ಬಾರಿ ಪ್ರಯತ್ನಪಟ್ಟಿದ್ದಾರೆ. ಅವರ ಪೈಕಿ ಒಂದಿಬ್ಬರು ಮಾತ್ರ, ಮೀರತ್, ಲಕ್ನೋ, ಕಾನ್ಪುರವನ್ನು ಒಳಗೊಂಡ ಅವಧ ರಾಜ್ಯದಲ್ಲಿನ ಬಂಡಾಯಗಳನ್ನು ರಾಷ್ಟ್ರೀಯತೆಯ ಸ್ವರೂಪದ್ದೆಂದು ಗುರುತಿಸಿದ್ದಾರೆ. ಆಗಷ್ಟೇ ಚಾರಿತ್ರಿಕ ಭೌತಮಾನ ಪದ್ಧತಿಯ ಇತಿಹಾಸ ವಿಮರ್ಶಾ ಪದ್ಧತಿಯನ್ನು ಪ್ರಚುರಪಡಿಸಿದ್ದ ಮಾರ್ಕ್ಸ್‌ಗೆ ಈ ಪ್ರತಿರೋಧದ ರಾಷ್ಟ್ರೀಯತೆಯ ಸ್ವರೂಪವನ್ನು ಗುರುತಿಸುವಲ್ಲಿ ಯಾವ ಗೊಂದಲವೂ ಇರಲಿಲ್ಲ. ಹಾಗೂ ಈ ರಾಷ್ಟ್ರೀಯತೆಯ ಅಂಕುರ ಮುಂದೊಮ್ಮೆ ಬ್ರಿಟಿಷರಿಂದ ವಿಮುಕ್ತಿ ಪಡೆಯುವ ಅಖಿಲ ಹಿಂದೂಸ್ತಾನದ ವ್ಯಾಪಕ ಸ್ವಾತಂತ್ರ್ಯ ಸಂಗ್ರಾಮವಾಗಿ ಬೆಳೆಯಲು ಏನೆಲ್ಲಾ ಸಾಧ್ಯತೆಯಿದೆಯೆಂದೂ ಮುಕ್ತವಾಗಿ ಚರ್ಚಿಸುತ್ತಾನೆ. ಅಂದಿನ ಭಾರತದಲ್ಲೇ ಆಂತರಿಕವಾಗಿ ಇಂಥ ಬರಹಗಳು ಹೊರಬರುವುದನ್ನು ಬ್ರಿಟಿಷರು ಕಟ್ಟುನಿಟ್ಟಾಗಿ ಹಲವು ರೀತಿಯಲ್ಲಿ ಪ್ರತಿಬಂಧಿಸಿದ್ದೂ ಸ್ಪಷ್ಟ. ವೀರ ಸಾವರ್ಕರರೂ ತಮ್ಮ ಪುಸ್ತಕವನ್ನು ಬರೆದಿದ್ದು ಇಂಗ್ಲೆಂಡಿನಲ್ಲಿ ಕುಳಿತು ಹಾಗೂ ಮರಾಠಿಯಲ್ಲಿ. ಆ ತಪ್ಪಿಗಾಗಿ ಈ ದೇಶಭಕ್ತ ತೆತ್ತಬೆಲೆ, ಅದರ ಪರಿಣಾಮವಾಗಿ ಆತ ಸ್ಫೂರ್ತಿದಾಯಕ ರಾಷ್ಟ್ರೀಯ ಆದರ್ಶವ್ಯಕ್ತಿಯಾಗಿ ಹೊರಹೊಮ್ಮಿದ್ದು, ನಮ್ಮ ಸ್ವಾತಂತ್ರ್ಯ ಹೋರಾಟದ ಚರಿತ್ರೆಯಲ್ಲಿ ಸ್ಮರಣೀಯ ಸಂಗತಿ. ನಮ್ಮ ಇತಿಹಾಸದ ಈ ಮಹಾನ್ ಸಂದರ್ಭದ ಶತಮಾನೋತ್ಸವ ಸಮಯದಲ್ಲಿ, ಅಂದರೆ ೧೯೫೭ರ ಸಮಯದಲ್ಲೂ ನಮ್ಮವರೇ ಆದ ರಾಷ್ಟ್ರೀಯ ನಾಯಕರು ಇನ್ನೂ ಇದನ್ನು ಸ್ವಾತಂತ್ರ್ಯ ಸಂಗ್ರಾಮದ ನಾಂದಿ ಎನ್ನುವಷ್ಟನ್ನೂ ಗುರುತಿಸಲು ಹೆಣಗಾಡುತ್ತಿದ್ದುದು ಕಂಡುಬರುತ್ತದೆ. ಅದನ್ನು ಕುರಿತು ಅಂದಿನ ಸರ್ಕಾರ ಒಂದು ಗ್ರಂಥವನ್ನು ಪ್ರಕಟಿಸುವ ವಿಷಯವೂ ಚರ್ಚಾಸ್ಪದವಾಗುತ್ತದೆ. ಎಸ್. ಎನ್. ಸೇನರು ಭಾರತ ಸರ್ಕಾರದ ಪ್ರಕಟಣೆಗಾಗಿ ಬರೆದರೆ, ಆರ್. ಸಿ. ಮುಜುಮ್‌ದಾರರು ಸರ್ಕಾರಕ್ಕೆ ಬರೆದುಕೊಡದೆ ಸ್ವತಂತ್ರವಾಗಿ ತಮ್ಮದೇ ಪುಸ್ತಕ ಬರೆಯುತ್ತಾರೆ. ಇವರಿಬ್ಬರೂ ಈ ಬಂಡಾಯವನ್ನು ಮುಕ್ತವಾಗಿ ರಾಷ್ಟ್ರೀಯತೆಯ ಸಮರವೆಂದು ಗುರುತಿಸಲು ಚೌಕಾಸಿ ಮಾಡುವಂತೆ ಕಾಣುತ್ತದೆ. ಆ ಹೊತ್ತಿಗಾಗಲೇ ಜವಾಹರಲಾಲ ನೆಹರೂ ಅವರು ತಮ್ಮ 'ಭಾರತದರ್ಶನ' ಗ್ರಂಥದಲ್ಲೂ ಹೀಗೆ ಗುರುತಿಸಲು ಹಿಂದೇಟು ಹಾಕಿರುವುದು ಕಂಡುಬರುತ್ತದೆ. ಈ ವಿಪ್ಲವದಲ್ಲಿ ಎರಡೂ ಕಡೆ ನಡೆದ ಅಪಾರವಾದ ಹಾಗೂ ಅಸಹ್ಯವಾದ ಹಿಂಸಾಪ್ರಕರಣಗಳನ್ನು ಸಂವೇದನಾಶೀಲರಿಗೆ ಅರಗಿಸಿಕೊಳ್ಳುವುದು ಕಷ್ಟ. ಎರಡನೆಯ ಮಹಾಯುದ್ಧಾನಂತರ, ಮತ್ತೊಮ್ಮೆ ಯುದ್ಧ ಬೇಡ, ನಾಗರಿಕರಾಗಿರೋಣವೆಂದು ಘೋಷಣೆಮಾಡಿದ, ಪ್ರಜಾಪ್ರಭುತ್ವ ವಾದಿಗಳೆಂದು ಮೆರೆಯುವ ಸಮಕಾಲೀನ ಪಾಶ್ಚಿಮಾತ್ಯ ಸರ್ಕಾರಗಳು ವಿಯೆಟ್ನಾಂ, ಇರಾಕ್,



ಕೆ. ಎಸ್. ಪಾರ್ಥಸಾರಥಿ

ಪಶ್ಚಿಮ ಏಷ್ಯಾ, ಅಫ್ಘಾನಿಸ್ತಾನ ಮುಂತಾದೆಡೆ ಹಿಂದೆಂದೂ ಕಾಣದ ಕ್ರೌರ್ಯವನ್ನು ಪ್ರದರ್ಶಿಸಿವೆ. ಈಗಲೂ ಅನೇಕ ರಾಷ್ಟ್ರೀಯ ಹೋರಾಟಗಳನ್ನು ಹೊಸಕಿಹಾಕುತ್ತಿರುವ, ಪ್ರಭುತ್ವ ನಿರ್ದೇಶಿತ, ಅನಗತ್ಯವಾದ, ಅನಿವಾರ್ಯವಲ್ಲದ, ಅಮಾನವೀಯವಾದ ಹಿಂಸೆಯನ್ನು, ಜಗತ್ತಿನಾದ್ಯಂತ ಇಂದಿನ ಮಾಧ್ಯಮಗಳ ದೀರ್ಘವಾದ ನಿಲುಕಿನಿಂದಾಗಿ ನಾವೆಲ್ಲರೂ ನೋಡಲು ಸಾಧ್ಯವಾಗುತ್ತಿದೆ. ಇವುಗಳೊಡನೆ ಹೋಲಿಸಿದರೆ ಅಂದಿನ ಆ ಹಿಂಸೆಯ ಸ್ವರೂಪ ಅಂದಿನ ಸಂದರ್ಭದಲ್ಲಿ ಸಾಮ್ರಾಜ್ಯಶಾಹಿಯ ಸಹಜ ಪ್ರವೃತ್ತಿಯಾಗಿ ಮತ್ತು ಅದಕ್ಕೆ ಪ್ರತಿಕ್ರಿಯಾತ್ಮಕವಾಗಿ ಕಂಡುಬರುತ್ತದೆಯಷ್ಟೆ. ಇದನ್ನು ಕಾರಣವಾಗಿಟ್ಟು ಈ ಪ್ರತಿರೋಧದ ರಾಜಕೀಯ ಸಾಮಾಜಿಕ ಸ್ವರೂಪವನ್ನು ತಿರಸ್ಕರಿಸಲಾಗದು. ಎಪ್ಪತ್ತರ ದಶಕದಲ್ಲಿ ಮಾರ್ಕ್ಸ್‌ವಾದಿ ಸಿದ್ಧಾಂತಿ ಇ. ಎಂ. ಎಸ್. ನಂಬೂದ್ರಿಪಾದ್ ಅವರು ರಚಿಸಿದ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆಯಲ್ಲೂ, ಇದನ್ನು ಸ್ವಾತಂತ್ರ್ಯ ಸಂಗ್ರಾಮವೆಂದು ಹೇಳಲು ಸಿದ್ಧರಿಲ್ಲ. ೧೯೭೭ರಲ್ಲಿ ಪ್ರಕಟವಾದ ತಮ್ಮ ಗ್ರಂಥದಲ್ಲಿ ಅಂದು ಲಭ್ಯವಿದ್ದ ಎಲ್ಲ ಗ್ರಂಥಗಳನ್ನೂ ಉಲ್ಲೇಖಿಸುತ್ತಾರಾದರೂ, ೧೯೫೭ರಲ್ಲಿ ಪಿ. ಸಿ. ಜೋಷಿಯವರಿಂದ ಸಂಪಾದಿತವಾಗಿದ್ದು, ಪ್ರಕಟವಾಗಿದ್ದ 'ರೆಬೆಲಿಯನ್ ೧೮೫೭' ಗ್ರಂಥವನ್ನು ಅವರು ಗಮನಿಸದಂತಿರುವುದು ಸೋಜಿಗವೆನಿಸುತ್ತದೆ. ಅದು ಹಾಗಿರಲಿ. ನಂಬೂದ್ರಿಪಾದರ ಅಭಿಪ್ರಾಯವನ್ನು ನಾವು, ಆ ಪ್ರತಿರೋಧದ ನೂರೈವತ್ತರ ಸಂದರ್ಭದಲ್ಲಿ ಗಮನಿಸುವುದು ಅಗತ್ಯ. ಈ ದಂಗೆ ಮತ್ತು ಅದರ ಸುತ್ತ ಭುಗಿಲೆದ್ದ ವಿಪ್ಲವದ ಬಗ್ಗೆ ಅವರು ಹೇಳುತ್ತಾರೆ: ಸಿಪಾಯಿಗಳಿಂದ ಪ್ರಾರಂಭವಾಗಿತ್ತು, ಅದರಿಂದಾಗಿ ಅದು **ಸಿಪಾಯಿ ದಂಗೆ**. ಸಿಪಾಯಿಗಳು ದಂಗೆ ಏಳುವುದಕ್ಕೆ ಸ್ವಲ್ಪ ಮುಂಚಿನಿಂದಲೇ, ಗ್ರಾಮಾಂತರ ಪ್ರದೇಶಗಳಲ್ಲಿ ಮಧ್ಯ ಭಾರತ, ಮಧ್ಯ ಪೂರ್ವ ಭಾರತದಲ್ಲಿ ಸಾಧಾರಣ ರೈತಾಪಿ ಬಡಜನ ಹಲವು ರೀತಿಯಲ್ಲಿ ಸಿಡಿದೆದ್ದರು. ಈ ದಂಗೆಯ ಸಂದರ್ಭಕ್ಕೂ ಮೀರಿ, ೧೮೫೯ರವರೆಗೂ ಹತ್ತಾರು ಲಕ್ಷ ಸಾಮಾನ್ಯ ಜನಸಮೂಹ ಹಲವು ರೀತಿಯ ಹೋರಾಟಗಳನ್ನು ನಡೆಸಿದರು. ಅವರ ಕೋಪ ಇದ್ದದ್ದು ಅಂದಿನ ಭೂಮಾಲೀಕರ ವಿರುದ್ಧ, ಸರ್ಕಾರಿ ಅಧಿಕಾರಿಗಳ ವಿರುದ್ಧ, ಫಿರಂಗಿಯವರ ಪರವಾಗಿ ಅವರನ್ನು ನಿರಂತರ ಶೋಷಿಸುತ್ತಿದ್ದವರ ವಿರುದ್ಧ. ಸಿಪಾಯಿಗಳು ಬಂಡೆದ್ದ ಸಂದರ್ಭವನ್ನು ಉಪಯೋಗಿಸಿಕೊಂಡು ತಮ್ಮನ್ನು ನಿರಂತರ ಹಿಂಸಿಸುತ್ತಿದ್ದ ಅವರು ಸರ್ಕಾರಿ ಅಧಿಕಾರಿಗಳನ್ನು, ವಸಾಹತುಶಾಹಿಗಳ ಪ್ರತಿನಿಧಿ ಹೊಸ ಜಮೀನುದಾರರು, ಶಾನುಭೋಗ, ಪಟೇಲ್‌ನಂಥ ತಾಲೋಕ್‌ದಾರ ಮುಂತಾದವರನ್ನು ಕೊಲೆಮಾಡಿದರು. ಸರ್ಕಾರಿ ಕಛೇರಿಗಳನ್ನು ಸುಟ್ಟರು. ಸರ್ಕಾರಿ ಕಡತಗಳನ್ನು ಧ್ವಂಸ ಮಾಡಿದರು. ಈ ಅರ್ಥದಲ್ಲಿ **ಅದು ಒಂದು ಜನಾಂದೋಳನವಾಗಿತ್ತು. ಇದು ಖಂಡಿತ ಸ್ವಾತಂತ್ರ್ಯ ಹೋರಾಟವೆನಿಸಿಕೊಳ್ಳುವುದಿಲ್ಲ**, ಅದು ಅಖಿಲ ಭಾರತದ ವ್ಯಾಪ್ತಿಯದಲ್ಲ; ನಡೆದದ್ದು ಕೇವಲ ಸೀಮಿತ ಪ್ರದೇಶದಲ್ಲಿ, ಭಾರತದ ಇತರ ಪ್ರದೇಶದ ರಾಜರೂ, ಸರ್ಕಾರಗಳೂ, ಅಲ್ಲಿಯ ಜನರೂ, ಸೈನಿಕರೂ ಈ ದಂಗೆಯನ್ನು ಹತ್ತಿಕ್ಕಲು ಫಿರಂಗಿಯವರಿಗೆ ನೆರವಾಗಿ ನಿಂತರು. **ಆದ್ದರಿಂದ ಇದು ನಮ್ಮ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೆಂದೆನಿಸಿಕೊಳ್ಳುವುದಿಲ್ಲ.**

೧೫೦ ವರ್ಷಗಳ ನಂತರ, ಸ್ವತಂತ್ರ ಭಾರತದಲ್ಲಿರುವ ನಾವು ನಮ್ಮ ಈ ಪೂರ್ವಜರನ್ನು ಹೇಗೆ ನೆನಪಿಸಿಕೊಳ್ಳಬೇಕು? ಶ್ರದ್ಧಾಂಜಲಿಯೇ, ಕೃತಜ್ಞತೆಯೇ, ಅದೊಂದು ನಗಣ್ಯ ಸಂಗತಿಯೆಂದೇ?

ಒಂದು ಚಾರಿತ್ರಿಕ ಸಂಗತಿಯ ವರದಿ, ಅದು ಎಂಥದೇ ವರದಿಯಿರಲಿ, ಅದು ವರದಿ ಮಾಡುವವನ ವರ್ಗ ಸಂವೇದನೆಯ ಪ್ರಭಾವವನ್ನು ಹೊಂದಿರುತ್ತದೆ. ಬ್ರಿಟಿಷರು ಅಂದು ರಚಿಸಿದ ಅಧಿಕೃತ ಇತಿಹಾಸದಲ್ಲಿ ನಮ್ಮನ್ನು ಮೆಚ್ಚುವ ವರದಿಯನ್ನು ನಿರೀಕ್ಷಿಸಬಾರದು. ಆದರೆ ಈಗ ಪುರಾತನ ಕಡತಗಳೆಲ್ಲಾ ಲಭ್ಯವಿವೆ. ಪಿ. ಸಿ. ಜೋಷಿ ಇತ್ತೀಚೆಗೆ ಮತ್ತು ಸಾವರ್ಕರರು ಅಂದು, ಬ್ರಿಟಿಷ್ ಸರ್ಕಾರದ ಕಡತಗಳನ್ನೇ ಸಂಶೋಧಿಸಿ ಅವರ ಮಾತುಗಳನ್ನು ಬಳಸಿಕೊಂಡೇ ಅಧಿಕೃತವೆನ್ನಬಹುದಾದ ತಮ್ಮ ಬರಹಗಳನ್ನು ನೀಡಿದ್ದಾರೆ. ಸರ್ಕಾರೀ, ಅಧಿಕೃತ ದಾಖಲೆಗಳು ಆಯಾಯ ಸರ್ಕಾರದ ಮೂಗಿನ ನೇರಕ್ಕೆ ವಿಕೃತಗೊಂಡವು. ಆದರೆ ವಿಚಾರವಾದಿಗಳಾದ ನಾವು ಗಮನಿಸುವ ಇತಿಹಾಸ ರಾಜನದಲ್ಲ, ಆಳುವವನದಲ್ಲ; ಅವನಿಂದ ಶೋಷಣೆಗೊಳಗಾದ ಜನಸಮೂಹ ಏನು ಹೇಳುತ್ತದೆ ಎಂಬುದು. 'ಚರಿತ್ರೆಯಲ್ಲಿ ೧೮೫೭' ಎಂಬ ಉದ್ದಾಮ ಸಂಶೋಧಕ ನೀಳ ಪ್ರಬಂಧವನ್ನೂ ಬರೆದ ಜೋಷಿಯವರು '೧೮೫೭ನ್ನು ಕುರಿತ ಜನಪದ ಗೀತೆಗಳು' ಎಂಬ ಪ್ರಬಂಧವನ್ನೂ ರಚಿಸಿದ್ದಾರೆ. ಜನತೆಯಲ್ಲಿ ಈ ಬಂಡಾಯ ಮೂಡಿಸಿದ್ದ ಆಶಾವಾದ, ಅವರು ತಮ್ಮ ಅಂದಿನ ನೆಚ್ಚಿನ ನಾಯಕರನ್ನು ಕುರಿತು ಹಾಡಿದ, ಆಡಿದ ಜನಪದ ಸಾಹಿತ್ಯ ಕೃತಿಗಳು ತದನಂತರದ ಸ್ವಾತಂತ್ರ್ಯ ಹೋರಾಟದುದ್ದಕ್ಕೂ ಹೋರಾಟಗಾರರಿಗೆ ಸ್ಫೂರ್ತಿ ನೀಡಿರುವುದು ವಾಸ್ತವ ಸಂಗತಿ. ಇತ್ತೀಚಿನ ಉತ್ತರ ಪ್ರದೇಶದ ಚುನಾವಣೆಯಲ್ಲಿ, ಈ ದೇಶದ ಸ್ವಾತಂತ್ರ್ಯಕ್ಕೆ ದಲಿತರು ನೀಡಿದ ಕೊಡುಗೆಯನ್ನು ಹೇಳಿಕೊಳ್ಳುವ ಸಂಭ್ರಮದಲ್ಲಿ ಬಹುಜನ ಸಮಾಜಪಕ್ಷ ೧೮೫೭ರ ದಂಗೆಯ ಹಾಡುಗಳನ್ನು ಪ್ರಭಾವಯುತವಾಗಿ ಬಳಸಿದ್ದನ್ನೂ ಇಲ್ಲಿ ಸ್ಮರಿಸಬಹುದು. ವಿದ್ವಾಂಸರು ಏನೇ ಚರ್ಚಿಸುತ್ತಿರಲಿ, ಜನಮನದ ಪ್ರಜ್ಞಾವಲಯದಲ್ಲಿ, ಅಖಿಲ ಭಾರತ ವ್ಯಾಪ್ತಿಯಲ್ಲಿ ಅದು ನಮ್ಮ ನಾಡಿನ ಸ್ವಾತಂತ್ರ್ಯದ ಆಕಾಂಕ್ಷೆಯ ಪ್ರಥಮ ಸೊಲ್ಲು ಎಂದು ಹೂತು ನಿಂತಿರುವುದು ಸ್ಪಷ್ಟ. ನಾವೆಲ್ಲ ನಲವತ್ತು ಐವತ್ತರ ದಶಕಗಳಲ್ಲಿ ರಾಷ್ಟ್ರನಾಯಕರ ಹೆಸರಿನೊಡನೆ ಝಾನ್ಸಿ ರಾಣಿಗೆ ಜಯಕಾರ ಹಾಕುವುದನ್ನೂ, ಅಂದಿನ ಘೋಷಣೆ "ಇನ್‌ಕ್ವಿಲಾಬ್ ಜಿಂದಾಬಾದ"ನ್ನು ಘೋಷಿಸುವುದನ್ನೂ ಮರೆಯುತ್ತಿರಲಿಲ್ಲ. ಇತಿಹಾಸ ನಿರ್ಮಿಸುವವರು ಜನ, ರಾಜರಲ್ಲ, ಸರ್ಕಾರಗಳಲ್ಲ, ಕೆಲವೇ ವ್ಯಕ್ತಿಗಳಲ್ಲ.

೧೮೫೭ಕ್ಕೆ ಮುಂಚೆಯೂ ಬ್ರಿಟಿಷ್ ವಿರುದ್ಧದ ಪ್ರಜ್ಞಾಪೂರ್ವಕ ಪ್ರತಿರೋಧ ದೇಶದ ಹಲವೆಡೆ ಮೊಳಗಿದ್ದದ್ದು ವಾಸ್ತವ. ಈ ಪ್ರತಿರೋಧಗಳು ಸ್ಥಳೀಯ, ಸೀಮಿತ ಎಂದು ವಾದಿಸುವುದು ಐತಿಹಾಸಿಕ ದೃಷ್ಟಿ ಎನಿಸಿಕೊಳ್ಳುವುದಿಲ್ಲ. ಹೊರಗಿನವರು ಈ ಭೂಖಂಡವನ್ನು ಹಿಂದೂಸ್ಥಾನವೆಂದು ಗುರುತಿಸುತ್ತಿದ್ದರೂ ಆಂತರಿಕವಾಗಿ ನಾವು ಯಾವಾಗಲೂ ಛಪ್ಪನ್ನಾರು ದೇಶಗಳೇ ಆಗಿದ್ದದ್ದು ವಾಸ್ತವ. ಹತ್ತಾರು ರಾಷ್ಟ್ರೀಯತೆಗಳು ಹಾಗೂ ಉಪರಾಷ್ಟ್ರೀಯತೆಗಳ ನಡುವಿನ ಎಡೆಬಿಡದ ಸಂಘರ್ಷಗಳು ಈ ಉಪಖಂಡದಲ್ಲಿ ರಾಜಕೀಯ ಐಕ್ಯತೆಗೆ ಅವಕಾಶ ನೀಡಿರಲೇ ಇಲ್ಲ. ಮೊಘಲರ ಚಕ್ರಾಧಿಪತ್ಯ ನಮ್ಮ ಇತಿಹಾಸ ಕಂಡ ಅತಿ ದೊಡ್ಡ ಏಕಛತ್ರ. ಅದು ಅನೇಕ ರಾಷ್ಟ್ರಗಳ ಸಂಯುಕ್ತ ಸಂಸ್ಥಾನದಂತೆ ಕಾಣುತ್ತಿತ್ತೇ ವಿನಾ ಒಂದು ಏಕೀಕೃತ ರಾಷ್ಟ್ರವಾಗಿ ಅಲ್ಲ. ಮುಸ್ಲಿಮರ ಆಳ್ವಿಕೆಯಲ್ಲೂ ಪರಸ್ಪರ ಕಲಹವಾಡುತ್ತಿದ್ದ ಹಲವಾರು ಮುಸ್ಲಿಮರ ರಾಜ್ಯಗಳಾಗಿದ್ದವಷ್ಟೆ. ಆದ್ದರಿಂದ ಟಿಪ್ಪೂ ಸುಲ್ತಾನ ತನ್ನ ರಾಜ್ಯವನ್ನು ಉಳಿಸಿಕೊಳ್ಳುವ ಪ್ರಯತ್ನವಾಗಿ, ಮಿಕ್ಕೆಲ್ಲಾ ರಾಜರ ಒಕ್ಕೂಟವನ್ನು ರಚಿಸಿ, ಬ್ರಿಟಿಷರ ಹೊರಗಿನ ಶತ್ರುಗಳ ಸಹಕಾರವನ್ನು ಪಡೆದು ಫಿರಂಗಿಯವರ ವಿರುದ್ಧ ಹೋರಾಟ ಮಾಡಬೇಕೆಂದು ಚಿಂತಿಸಿದ್ದರೆ, ಅದು ಅಂದಿಗೆ ಬಹಳ ಪ್ರಗತಿಪರ ಮುತ್ಸದ್ದಿತನದ ರಾಷ್ಟ್ರೀಯ ಚಿಂತನೆಯೆಂದೇ ಪರಿಗಣಿಸಬೇಕೇ ವಿನಾ ಅದನ್ನು ಅವನ ಸ್ವಾರ್ಥವೆಂದು ಹೇಳುವುದು ವೈದುಷ್ಯವಾಗುವುದಿಲ್ಲ. ಅದನ್ನು ಅವನ ವೈಯಕ್ತಿಕ ಸ್ವಾರ್ಥವೆಂದು ಪರಿಗಣಿಸಿ ಇತರರು ಅವನೊಡನೆ ಸಹಕರಿಸದೇ ಹೋದ, ಪರಿಣಾಮವಾಗಿ ಅವನು ಸೋತಿದ್ದರಿಂದಲೇ ಬ್ರಿಟಿಷರು ಇವರೆಲ್ಲರನ್ನು ಬಿಡಿಬಿಡಿಯಾಗಿ ಸದೆಬಡಿದು, ೧೫೦ ವರ್ಷ ಇಲ್ಲಿ ಬೇರೂರಲು ಸಾಧ್ಯವಾಯಿತು. ಹಾಗೆ ಸ್ವಾರ್ಥವೆಂದು ಅಂದು ಅರ್ಥೈಸಹೊರಟವರು ನಮಗೆ ಇಂದು ರಾಷ್ಟ್ರವಿರೋಧಿಗಳಾಗಿ ಕಂಡರೆ ಅಚ್ಚರಿಯಿಲ್ಲ. ಕಿತ್ತೂರಿನ ರಾಣಿಗೆ ತನ್ನ ರಾಜ್ಯವನ್ನು ಉಳಿಸಿಕೊಳ್ಳಲು ಹೋರಾಡುವುದು ಅನಿವಾರ್ಯವಾಗಿತ್ತು. ಆದರೆ ಆ ಹೋರಾಟದ ರಾಜಕೀಯ ಉದ್ದೇಶವನ್ನು ಅವಳು ತನ್ನ ಬೆಂಬಲಿಗರಿಗೆ ಸ್ಫೂರ್ತಿ ನೀಡಲು ನೀಡಿರುವ ಘೋಷಣೆ, ಬರಲಿರುವ ವ್ಯಾಪಕ ರಾಷ್ಟ್ರೀಯ ಹೋರಾಟದ ಸ್ವರೂಪವನ್ನು ಸೂಚಿಸುತ್ತದೆ. "... ಈ ಪೇಶ್ವೆಗೂ ನಮಗೂ ಎಂದೂ ಮಾತ್ಸರ್ಯ ಜಗಳ. ಆದರೆ ಅವನು ಏನಿದ್ದರೂ ನಮ್ಮವನು. ನಮಗಿಬ್ಬರಿಗೂ ಸಮಾನ ಶತ್ರು ಈ ಬಿಳಿಯ, ನಮ್ಮ ನಡುವಿನ ಅಂತಃಕಲಹವನ್ನು ಉಪಯೋಗಿಸಿಕೊಂಡು, ನಮ್ಮನ್ನು ಸದೆಬಡಿದು, ಆಳಲು ಬಯಸುವ ಇವನ ವಿರುದ್ಧ ಹೋರಾಟ ಅನಿವಾರ್ಯ. ಇಂದಲ್ಲದಿದ್ದರೆ ಮುಂದೊಮ್ಮೆ ಪೇಶ್ವೆಯೂ ನಮ್ಮೊಡನೆ ಈ ಹೋರಾಟದಲ್ಲಿ ಸೇರುವುದು ಅನಿವಾರ್ಯ..." ಸಾವರ್ಕರರು ಈ ಪ್ರಥಮ ಸಂಗ್ರಾಮದಲ್ಲಿ ಬೆಸೆದ ಹಿಂದೂ-ಮುಸ್ಲಿಂ ಮೈತ್ರಿಯ ಬಗ್ಗೆ ೧೯೦೭ರಲ್ಲಿ ಸಂಭ್ರಮದಿಂದ ವಿಮರ್ಶಿಸುತ್ತಾರೆ: "ಈ ಮುಸ್ಲಿಂ ಚಕ್ರವರ್ತಿಗಳು ಈ ಮುಂಚೆ ನಮ್ಮ ವಿದೇಶೀ ಶತ್ರುಗಳಾಗಿದ್ದರು. ನಾವು ಅವರಿಂದ ಬಹಳ ಕಾಲ ಸೋಲನ್ನೇ ಅನುಭವಿಸಿದ್ದೇವೆ. ಆದರೆ ಇಂದು ಅವರನ್ನು ನಾವು ಹಲವು ಕಡೆ ಸೋಲಿಸಿ ಹಿಂದೂ ರಾಜ್ಯಗಳನ್ನು ಸ್ಥಾಪಿಸಿದ್ದೇವೆ. ಈಗ ಅವರು ಇಲ್ಲೇ ನೆಲೆಸಿದ್ದಾರೆ. ಈ ಮಣ್ಣಿನವರೇ ಆಗಿದ್ದಾರೆ. ಈಗ ನಾವಿಬ್ಬರೂ ಸರಿಸಮಾನರು. ನಮ್ಮ ಮಧ್ಯೆ ಈ ಕುರಿತ ಜಗಳಕ್ಕೆ ಇನ್ನು ಅರ್ಥವಿಲ್ಲ. ಅವರೂ ಈಗ ಹಿಂದೂಸ್ಥಾನದವರೇ. ನಮ್ಮ ಸಮಾನಶತ್ರು ಬಿಳಿಯರ ವಿರುದ್ಧ ಒಟ್ಟಾಗಿ ನಾವು ಹೋರಾಟಕ್ಕೆ ಕೈಜೋಡಿಸಿರುವುದು ಸರಿಯಾಗಿಯೇ ಇದೆ' ಎಂಬುದು ನಾನಾಸಾಹೇಬನ ವಾದವಾಗಿತ್ತು ಎನ್ನುತ್ತಾರೆ. ನಮ್ಮ ರಾಷ್ಟ್ರೀಯತೆಯನ್ನು ಹುಟ್ಟುಹಾಕಿ ಬೆಳೆಸುವುದರಲ್ಲಿ ೧೮೫೭ರಲ್ಲಿ ಸಾಧಿಸಿದ ಹಿಂದೂ-ಮುಸ್ಲಿಂ ಬೆಸುಗೆ ಒಂದು ಮಹತ್ವದ ಘಟ್ಟ. ಬ್ರಿಟಿಷರು ೧೮೫೭ರ ನಂತರ ಹಿಂದೂ

ಮುಸ್ಲಿಮರ ನಡುವೆ ದ್ವೇಷ ಬಿತ್ತಿ ಒಡೆದು ಆಳಿದ ತಂತ್ರವನ್ನು ಗಮನಿಸಿದರೆ, ಈ ಮಾತಿನ ಮಹತ್ವ ಸ್ಪಷ್ಟವಾಗುತ್ತದೆ.

ಈಸ್ಟ್ ಇಂಡಿಯಾ ಕಂಪೆನಿ ಭಾರತವನ್ನು ಸಮಗ್ರವಾಗಿ ಕ್ರಿಶ್ಚಿಯನ್ ಧರ್ಮಕ್ಕೆ ಪರಿವರ್ತಿಸುವುದು ತನ್ನ ಗುರಿಯೆಂದು ಪದೇ ಪದೇ ಸ್ಪಷ್ಟಪಡಿಸಿತ್ತು, ಬ್ರಿಟನ್ನಿನ ಪಾರ್ಲಿಮೆಂಟಿನಲ್ಲೂ ಇದು ಪ್ರಸ್ತಾಪವಾಗಿದೆ. ನಮಗೆ ಇಂಗ್ಲಿಷ್ ಭಾಷೆಯನ್ನು 'ಕರುಣಿಸಿದ' ಮೆಕಾಲೆ, ಇಂಗ್ಲಿಷ್ ಶಿಕ್ಷಣ ಪ್ರಾರಂಭಿಸಿದ ಅವಸರದಲ್ಲೇ ತನ್ನ ತಂಗಿಗೆ ಬರೆದ ಪತ್ರದಲ್ಲಿ ''ಕ್ರಿಸ್ತನ ಕೃಪೆಯಿಂದ ಇನ್ನು ಮೂವತ್ತು ವರ್ಷದಲ್ಲಿ ಇಡೀ ಬಂಗಾಳವನ್ನು ಕ್ರಿಶ್ಚಿಯನ್ ಮತಕ್ಕೆ ಪರಿವರ್ತಿಸುತ್ತೇವೆ'' ಎನ್ನುತ್ತಾನೆ. ಯಾವ ಚಾರಿತ್ರಿಕ ಘಟ್ಟದಲ್ಲಿ ರಾಷ್ಟ್ರೀಯತೆಯನ್ನು ಹೊರಹೊಮ್ಮಿಸಲು ಮತಧರ್ಮವೇ ಮಾಧ್ಯಮವಾಗಿತ್ತೋ, ಊಳಿಗಮಾನ್ಯ ವ್ಯವಸ್ಥೆಯ ಆ ಕಾಲದಲ್ಲಿ, ಸಿಪಾಯಿ ದಂಗೆಯಲ್ಲಿ ಹಿಂದೂ ಮುಸ್ಲಿಮ್ ನಾಯಕರು ಸಮಾನವಾಗಿ ತಮ್ಮ ಹೋರಾಟ ಕ್ರಿಶ್ಚಿಯನ್ ಧರ್ಮದ ವಿರುದ್ಧವೆಂದು ಸಾರಿದರೆ, ಅದನ್ನು ಅಂದಿನ ಒಂದು ರಾಷ್ಟ್ರೀಯತೆಯ, ಸ್ವಾತಂತ್ರ್ಯ ಪಿಪಾಸೆಯ ಘೋಷಣೆಯೆಂದು ಚಾರಿತ್ರಿಕವಾಗಿ ಗ್ರಹಿಸುವುದರಲ್ಲಿ ತಪ್ಪೇನಿದೆ? ಛಪ್ಪನ್ನಾರು ದೇಶಗಳಾಗಿ ವಿಭಜನೆಯಾಗಿದ್ದರೂ, ಆ ಭೂ ಪ್ರದೇಶದ ರಾಷ್ಟ್ರೀಯತೆಯನ್ನು ಅಂದಿನ ಸಂದರ್ಭದಲ್ಲಿ ಹಿಂದೂಸ್ತಾನವೆಂಬ ಮತಧರ್ಮ ಸೂಚಕ ಪದದಿಂದ ಅಂದಿನವರೆಲ್ಲಾ ಜಗತ್ತಿನಾದ್ಯಂತ ಪ್ರಕಟಪಡಿಸಿರುವುದನ್ನು ಗಮನಿಸಿದರೆ, ಕೆಲವೊಮ್ಮೆ ಒಂದೇ ರಾಷ್ಟ್ರೀಯತೆಯೊಳಗೆ ಹಲವು ರಾಜಕೀಯ ಘಟಕಗಳು ದೇಶಗಳೆಂಬ ಉಪರಾಷ್ಟ್ರೀಯತೆಗಳನ್ನು ತಮ್ಮಲ್ಲಿ ಅಡಗಿಸಿಕೊಂಡು ಇರಬಲ್ಲದು ಎಂದು ಸ್ಪಷ್ಟವಾಗುತ್ತದೆ. ಇಂದಾದರೂ ಹಿಂದೆಂದೂ ರಾಜಕೀಯವಾಗಿ ಇಲ್ಲದಿದ್ದ ಒಂದು ಬೃಹತ್ತಾದ ಭಾರತ ರಾಷ್ಟ್ರ ನಿರ್ಮಾಣ ಪ್ರಕ್ರಿಯೆ ನಮ್ಮ ಕಣ್ಣಮುಂದೆ ಕ್ರಿಯಾಶೀಲವಾಗಿರುವಾಗ, ಇಂತಹ ರಾಜಕೀಯ ಘಟಕದೊಳಗೆ ಹಲವಾರು ಉಪರಾಷ್ಟ್ರೀಯತೆಗಳು ಇರುವುದು, ಅದನ್ನು ಇರಲು ಬಿಡುವುದು ಸರಿಯಾದ ಮಾರ್ಗವೆಂದು ಇತಿಹಾಸದ ಅನುಭವ ಸಾರುತ್ತದೆ. ಚಾರಿತ್ರಿಕ ಭೌತವಾದದ ಚರ್ಚಾ ವಿಧಾನದ ಜಾಡನ್ನು ಹಿಡಿದು, ೧೮೫೭ರ ಪ್ರತಿರೋಧವನ್ನು, ಒಂದು ಅಖಿಲ ಭಾರತೀಯ ರಾಷ್ಟ್ರೀಯತೆಯನ್ನು ಗ್ರಹಿಸುವ ಹಲವಾರು ಪ್ರಯತ್ನಗಳಲ್ಲಿ ಪ್ರಪ್ರಥಮವಾದ, ಒಂದಷ್ಟು ವ್ಯಾಪಕ ಸ್ವರೂಪದ, ಸ್ವಲ್ಪಕಾಲದ್ದೇ ಆದರೂ, ನೂರಾರು ವರ್ಷ ಪ್ರಭಾವಬೀರುವ ಸಾಮರ್ಥ್ಯ ಹೊಂದಿದ್ದ ಸ್ವಾತಂತ್ರ್ಯ ಸಂಗ್ರಾಮದ ಹರಿಕಾರ ಹೋರಾಟವೆಂದು ಗುರುತಿಸುವುದು ಸಮರ್ಥನೀಯ. ಅದರ ಎಲ್ಲ ವೈಫಲ್ಯಗಳನ್ನು ಗಮನಿಸುತ್ತಲೇ ಈ ಕಾರಣದಿಂದಲೇ ಅದರ ಪ್ರಸ್ತುತತೆಯನ್ನು ಇಂದಿಗೂ ಮುಂದಿಗೂ ಗಮನಿಸಲೇಬೇಕಾಗುತ್ತದೆ.

ಬ್ರಿಟಿಷ್ ಆಳ್ವಿಕೆಯ ಪರಿಣಾಮಗಳನ್ನು ಇಂದು ಗ್ರಹಿಸುವುದು ಸಾಧ್ಯ ೧೮೫೭ರ ಪೂರ್ವ ಒಂದು ಶತಮಾನಕ್ಕೂ ಮೀರಿ ಫಿರಂಗಿ ವ್ಯಾಪಾರಿಗಳು ಈ ರಾಷ್ಟ್ರದ ಸಂಪತ್ತನ್ನು ದೋಚಿದರು. ಇಲ್ಲಿಯ ಜನ ಜೀವನ ವ್ಯವಸ್ಥೆಯನ್ನು ಅಸ್ತವ್ಯಸ್ತಗೊಳಿಸಿದರು. ಉತ್ಪಾದನಾ ವ್ಯವಸ್ಥೆಯನ್ನು ಹಾಳುಗೆಡವಿದರು. ಈ ಅವಧಿಯಲ್ಲಿ ಈ ವ್ಯಾಪಾರಿ ವರ್ಗದಿಂದ ಆದ ಸೀಮಿತ ವಸಾಹತೀಕರಣ ಪ್ರಕ್ರಿಯೆ ಆಗದಿದ್ದರೆ, ಸಿಪಾಯಿ ದಂಗೆ ಫಿರಂಗಿಯವರನ್ನು ರಾಷ್ಟ್ರದಿಂದ ಹೊಡೆದೋಡಿಸಲು ಸಮರ್ಥವಾಗಿದ್ದರೆ, ಜಗತ್ತಿನ ಇತರೆಡೆ ಅಂದು ಪ್ರಾರಂಭವಾಗಿದ್ದ ಕೈಗಾರಿಕಾ ಕ್ರಾಂತಿಯ ಪ್ರಕ್ರಿಯೆ ಮತ್ತು ಅಂದು ಊಳಿಗಮಾನ್ಯ ಪದ್ಧತಿಯನ್ನು ಎಲ್ಲೆಡೆ ಸವರಿ ಹೊಸ ಕಾಲದ ಬಂಡವಾಳಿಗ ಬೂರ್ಷ್ವಾವರ್ಗಕ್ಕೆ ಎಡೆಮಾಡಿಕೊಟ್ಟಂತೆ ಭಾರತದಲ್ಲೂ ಆಗಬಹುದಿತ್ತು. ಇದನ್ನು ತಡೆಹಿಡಿದಿದ್ದು, ಮರಣಶಯ್ಯೆಯಲ್ಲಿದ್ದ ನಮ್ಮ ಊಳಿಗಮಾನ್ಯ ವ್ಯವಸ್ಥೆಗೆ ಮತ್ತಷ್ಟು ಕಾಲ ಉಸಿರಾಡಲು ದಾರಿಮಾಡಿಕೊಟ್ಟಿದ್ದು ಆ ಅವಧಿಯ ವಸಾಹತುಶಾಹಿಯ ಸಾಧನೆ! ಈ ವ್ಯಾಪಾರಿಗಳ ತಂಡಕ್ಕೆ ಈ ದೇಶವನ್ನು ಆಳುವ ಸಾಮರ್ಥ್ಯವಿಲ್ಲವೆಂಬ ಮನವರಿಕೆಯಾಗುತ್ತಿದ್ದಂತೆಯೇ, ಅದೇ ಲೂಟಿಯ ಸಂಪತ್ತಿನಿಂದ ತಮ್ಮ ಬಂಡವಾಳಶಾಹಿ ಜಗತ್ತಿನ ಕೈಗಾರಿಕೀಕರಣವನ್ನು ಸಾಧಿಸಿಕೊಂಡಿದ್ದ ಇಂಗ್ಲೆಂಡಿನ ಬೂರ್ಷ್ವಾವರ್ಗ ವಿಕ್ಟೋರಿಯಾ ರಾಣಿಯ ಘೋಷಣೆಯ ಮೂಲಕ ಭಾರತವನ್ನು ತನ್ನ ನೇರ ನಿಯಂತ್ರಣಕ್ಕೆ ತೆಗೆದುಕೊಂಡಿತು. ಆದರೆ ಅವರು ನಿಯಂತ್ರಿಸುವ ಪ್ರಯತ್ನಕ್ಕೆ ವಿರುದ್ಧವಾಗಿ ಬೀಸಿದ ಹೊಸ ಗಾಳಿಯ ಅನೇಕ ಅಲೆಗಳ ಪರಿಣಾಮವಾಗಿ ಇಲ್ಲೂ ಕೈಗಾರಿಕೆಗಳು, ಕಾರ್ಮಿಕ ವರ್ಗ, ರಾಷ್ಟ್ರೀಯ ನವ ಬಂಡವಾಳಶಾಹಿಯ ವರ್ಗ ಅನಿವಾರ್ಯವಾಗಿ ಉದಯಿಸಿದವು. ಅದರ ಜತೆಜತೆಗೇ ಸ್ವಾತಂತ್ರ್ಯ ಹೋರಾಟ, ೧೯೪೨ರ ಚಳುವಳಿಯ ಸ್ವರೂಪದಲ್ಲಿ ಹೊರಗೆಡವಿದಂತೆ ವ್ಯಾಪಕ ಕ್ರಾಂತಿಕಾರಿ ಪರಿವರ್ತನೆಯನ್ನು ತರಬಲ್ಲ ಎಲ್ಲಾ ಸಾಧ್ಯತೆಗಳನ್ನು

೧೬ನೇ ಪುಟಕ್ಕೆ

೩ನೇ ಪುಟದಿಂದ (ಈ ತಿಂಗಳು)

ಎಂದು ಸೇರಿಸಬೇಕು). ಅವರೂ ಅವರ ಪಕ್ಷದ ಉಚ್ಚಮಟ್ಟದ ಕಾರ್ಯಕರ್ತೆ; ಯಜ್ಞ-ಬಲಿ ಇಂಥಾದುವುಗಳಲ್ಲಿ ಅತಾರ್ಕಿಕ ಶ್ರದ್ಧೆ ಇರುವುದು ಅವರ ವ್ಯಕ್ತಿತ್ವದ ಒಂದು ಕೊರತೆ. ಆದರೂ ಶಿವರಾಜ ಪಾಟೀಲರಿಗಿಂತ ಒಂದೆರಡು ಮೆಟ್ಟಿಲು ಮೇಲಿನವರು. ಶಿವರಾಜರು ಸಾಯಿಬಾಬಾ ಭಕ್ತರು. ಬಾಬಾ ಅಂಥವರನ್ನು ರಕ್ಷಿಸುವುದಷ್ಟೇ ಗೃಹಮಂತ್ರಿಯ ಜವಾಬ್ದಾರಿಯೆನ್ನುವಂತೆ ವರ್ತಿಸುವ ಅವರು ಈಗ ಅವರ ಪದವಿಯಿಂದ ನಿರ್ಗಮಿಸುತ್ತಾರೆಂದು ಆಶಿಸಬಹುದಾಗಿದೆ. ಹಿಂದೊಮ್ಮೆ ಬೆಂಗಳೂರಿನ ಸಾಯಿಬಾಬಾ ಕುಟೀರದಲ್ಲಿ ಕೊಲೆಗಳು ಸಂಭವಿಸಿದ್ದಾಗ ಭಕ್ತ ಪಾಟೀಲರು ಜಾಗ್ರತೆ ಬೆಂಗಳೂರಿಗೆ ಧಾವಿಸಿ ಬಂದು ಸಾಯಿಬಾಬಾರ ರಕ್ಷಣಾ ದಳದ ಸಿಪಾಯಿಯಂತೆ ಕೆಲಸ ಮಾಡಿ ಬಾಬಾರ ಆಶೀರ್ವಾದ ಪಡೆದರೆಂದು ಹೇಳುತ್ತಾರೆ. ಕೊಲೆಗಳ ತನಿಖೆ ಮುಂದುವರಿಯಲಿಲ್ಲವೆಂಬುದು ವಿಖ್ಯಾತ ಸತ್ಯ. ಆ ಘಟನೆಯಾಗಿ ಸುಮಾರು ಹದಿನೈದು ವರ್ಷಗಳು ಕಳೆದಿವೆ. ಆದರೆ ಶಿವರಾಜರ ಬೌದ್ಧಿಕ ಮತ್ತು ಸಾಂಸ್ಕೃತಿಕ ವಯಸ್ಸು ಹೆಚ್ಚಿರುವುದಕ್ಕೆ ಸೂಚನೆಗಳೇನೂ ಇಲ್ಲ. ಎಡಪಕ್ಷಗಳು ಅವರನ್ನು ನಿರಾಕರಿಸಿದ್ದು ಇಂಥವೇ ಕಾರಣಗಳಿಂದ ಎಂದು ಊಹಿಸಬಹುದಾಗಿದೆ. ಇನ್ನು ಕರಣ ಸಿಂಗರ ಬಗ್ಗೆ ಹೇಳುವುದೇ ಬೇಡ. ಮಹಾರಾಜರಲ್ಲದೆಯೂ ಮಹಾರಾಜನಂತೆ ಮಾತನಾಡುವುದನ್ನಷ್ಟೇ ಅವರು ಸಿದ್ಧಿಸಿಕೊಂಡಿದ್ದಾರೆ. ಎಲ್ಲ ತರಹದ ಮೂಢನಂಬಿಕೆಗಳ ಸಮಾವೇಶಗಳಿಗೆ ಅವರೇ ಹೇಳಿಮಾಡಿಸಿದ ಮುಖ್ಯ ಅತಿಥಿ. ಈ ಕೆಲಸಕ್ಕೆ ನಮ್ಮ ದೇಶದಲ್ಲಿ ಒಳ್ಳೆಯ ಬೇಡಿಕೆ ಇರುವುದರಿಂದ ಅವರು ನಿರುದ್ಯೋಗಿಗಳಾಗುವ ಸಂಭವವಿಲ್ಲ. ಪ್ರತಿಭಾ ಅವರು ಕಲಾಂ 'ಅಂಕಲ್' ರೀತಿಯಲ್ಲಿ ಪ್ರತಿಭಾನ್ವಿತ ವಿದ್ಯಾರ್ಥಿಗಳನ್ನು ಸಂಧಿಸಿ ಶಪಥ ಬೋಧನೆಯ ಪರಂಪರೆಯನ್ನು ಮುಂದುವರಿಸುತ್ತಾರೋ ಇಲ್ಲವೋ ಕಾದುನೋಡೋಣ.

* * *

ಡಾ॥ ಬಂಜಗೆರೆ ಜಯಪ್ರಕಾಶರ 'ಆನು ದೇವಾ...' ಕೃತಿಯನ್ನು ಬಹಿಷ್ಕರಿಸಬೇಕೆಂದು ರಾಜಕೀಯ ಚಳುವಳಿ ನಡೆಸುವ ಬೆದರಿಕೆಯನ್ನು ಒಂದು ಪ್ರಬಲ ಜಾತಿ ಗುಂಪಿನ ನೇತಾರರು ಹಾಕುತ್ತಿದ್ದಾರೆ. ವಿದ್ಯುನ್ಮಾನ ಮಾಧ್ಯಮವು ವ್ಯಾಪಕವಾಗಿ ಹಬ್ಬಿರುವ ಇಂದಿನ ದಿನಗಳಲ್ಲಿ ಬಹಿಷ್ಕಾರವು ಅಪ್ರಯೋಜಕ. ಪುಸ್ತಕವು ಈಗಾಗಲೇ ಡಿಸ್ಕ್‌ಗಳಲ್ಲಿ ಲಭ್ಯವಿರಬೇಕು! ಅಮೇರಿಕಾದಲ್ಲಿ ಮಾತ್ರವೇ ಇಂಟರ್‌ನೆಟ್‌ಗೆ ಪುಸ್ತಕಗಳನ್ನು ಅಳವಡಿಸುವ ತಂತ್ರಜ್ಞಾನವಿದೆಯೆಂದು ಭ್ರಮಿಸಬಾರದು. ಯಾರಾದರೂ ಆ ಪುಸ್ತಕವನ್ನು ಹಾಗೆ ಇಂಟರ್‌ನೆಟ್‌ಗೆ ಹಾಕಿದರೆ ಮುಗಿಯಿತು! ಆದ್ದರಿಂದ ರಾಜಕೀಯ ದುರ್ಲಾಭ ಪಡೆಯಲು ಇಂದಿನ ದಿನಗಳಲ್ಲಿ ಪುಸ್ತಕಗಳಿಂದಾಚೆಗೂ ಯೋಚಿಸಬೇಕಾದ ಅವಶ್ಯಕತೆ ಇದೆ!! ಮಠಾಧ್ಯಕ್ಷರುಗಳಿಗೆ ಇಷ್ಟೂ ತಿಳಿಯದೆ? ಪುಸ್ತಕಗಳನ್ನು ಬಹಿಷ್ಕರಿಸುವುದು ಸುಲಭ. ಸ್ವತಂತ್ರವೂ ತಾರ್ಕಿಕವೂ ಆದ ಚಿಂತನೆಯನ್ನು ಒಲ್ಲದ ಯಾವುದೇ ಅಧಿಕಾರ ವರ್ಗ (ಸರ್ಕಾರ, ಮಠ, ಪೀಠ ಇತ್ಯಾದಿ) ಅದನ್ನು ಮಾಡಬಹುದು. ಆದರೆ ಹತ್ತು ಮನಸ್ಸುಗಳನ್ನು ಹೊಕ್ಕಿರುವ ವಿಚಾರಧಾರೆಯನ್ನು ಇಲ್ಲವಾಗಿಸಲು ಬರುತ್ತದೆಯೆ? ಉದಾಹರಣೆಗೆ, ಬಸವಣ್ಣ: ಅವನ ಆಚಾರ-ವಿಚಾರಗಳನ್ನು ಮಣ್ಣುಗೂಡಿಸಲು ಎಷ್ಟೋ ಮಠಗಳು ಶ್ರಮಿಸುತ್ತಿದ್ದರೂ ಶ್ರೀ ಬಂಜಗೆರೆಯಂಥವರು ಬಸವಣ್ಣನನ್ನು ಇನ್ನೂ ಗೌರವದಿಂದಲೇ ಕಾಣುತ್ತಾ ಅವನ ಮಾರ್ಗದರ್ಶನ ಪಡೆಯುತ್ತಿಲ್ಲವೇ, ಹಾಗೆ.

* * *

ಮಾನ್ಯ ಮುಖ್ಯಮಂತ್ರಿಗಳು ಹಳ್ಳಿಗಳಲ್ಲಿ ವಾಸ್ತವ್ಯ ಹೂಡುವುದನ್ನು ರೂಢಿಸಿಕೊಳ್ಳುತ್ತಿದ್ದಾರೆ. ಇದು ಅವರಿಗೆ ಆರೋಗ್ಯಕರ. ತಿಳಿವಳಿಕೆ ಹೆಚ್ಚುವ ಸಂಭವವಿರುತ್ತದೆ. ಅದರಿಂದ ರಾಜ್ಯಕ್ಕೆ ಉಪಯೋಗವಾಗುತ್ತದೋ ಇಲ್ಲವೋ ಎಂಬುದಕ್ಕೆ ಆತುರದಿಂದ ಉತ್ತರ ನೀಡುವಂತಿಲ್ಲ. ಆದರೆ ಶ್ರೀ ಕುಮಾರಸ್ವಾಮಿಯವರು ಒಂದು ಹೊಸ ವಿಧಾನ ಅನುಸರಿಸಿದರೆ ಚೆನ್ನಾಗಿರುತ್ತದೆ: ಯಾವ ಊರು, ಯಾರ ಮನೆ, ಎಂದು ಮೊದಲೇ ಹೇಳುವುದು ಬೇಡ. ಸರ್ಕಾರದ ಖರ್ಚಿನಲ್ಲಿ ಆ ಮನೆಯನ್ನು ದುರಸ್ತಿ ಮಾಡುವುದು ಸೂಕ್ತವಲ್ಲ. ದುರಸ್ತಿ ಮಾಡಹೋಗಿ ಆ ಮನೆಯಲ್ಲಿ ನೀರು ತುಂಬಿಕೊಂಡರೆ ಮನೆಯವರಿಗೆ ಅನಗತ್ಯವಾದ ತೊಂದರೆ ಬೇರೆ. ಇವರು ಬರುತ್ತಾರೆಂದು ಹಳ್ಳಿಯನ್ನು ಸ್ವಚ್ಛಗೊಳಿಸುವುದೂ ಬೇಡ. ಅನಿರೀಕ್ಷಿತವಾಗಿ ಮತ್ತು ಬಾಜಾ-ಬಜಂತ್ರಿ ಇಲ್ಲದೆ ಸುಮ್ಮನೆ ಹಳ್ಳಿಗಳಿಗೆ ಹೋಗಲಿ, ಯಾವ ಮಹಾನುಭಾವರಾದರೂ ಅವರಿಗೆ ತಂಗಲು ಅವಕಾಶ ನೀಡುತ್ತಾರೆ. ಜನರ ಸಮಸ್ಯೆಗಳನ್ನು ತಿಳಿಯಲು ಅದು ಇನ್ನೂ ಹೆಚ್ಚು ಉಪಯುಕ್ತವಾದ ಕ್ರಮ.

(ದಿನಾಂಕ : ೧೫-೦೬-೨೦೦೭)

# ಶಿಕ್ಷಣ ಮತ್ತು ವೈಚಾರಿಕತೆ

ಇಂದಿನ ನಮ್ಮ ಶಿಕ್ಷಣ ಪದ್ಧತಿ ಕೇವಲ ಮೇಲು ಪದರದ ಕಲಿಕೆಗೆ ಸೀಮಿತಗೊಂಡಿದ್ದು, 'ವಿದ್ಯೆ' ಎಂದರೆ ಗಿಳಿಪಾಠದಂತೆ ಕಲಿತು ಒಪ್ಪಿಸುವ ಅರ್ಥಹೀನವೂ, ಯಾಂತ್ರಿಕವೂ, ಜಡವೂ ಆದ ಪ್ರಕ್ರಿಯೆಯಾಗಿದೆಯೇ ವಿನಾ ಬದುಕಿನೊಂದಿಗೆ ತಾದಾತ್ಮ್ಯದಿಂದ ಕೂಡಿಲ್ಲ. ಹಾಗೆಂದಾಕ್ಷಣ ಕಲಿತವರು ನಿಷ್ಪ್ರಯೋಜಕರು ಎಂಬ ತೀರ್ಮಾನಕ್ಕೆ ಬರುವುದು ಸಾಧುವಲ್ಲ. ಬದಲಾಗಿ ಒಳ್ಳೆಯ ಶಿಕ್ಷಣ ನೀಡುವಲ್ಲಿ ವಿಫಲರಾಗಿದ್ದೇವೆ ಎಂಬುದನ್ನು ಮನಗಾಣಬೇಕು. ಚಿಕ್ಕ ವಯಸ್ಸಿನಿಂದಲೇ ಮಗುವಿಗೆ ಪರೀಕ್ಷೆಗಾಗಿ ಓದುವಂತೆಯೂ, ಹೆಚ್ಚು ಅಂಕ ಪಡೆದು ಉತ್ತೀರ್ಣರಾಗುವಂತೆಯೂ, ಒಳ್ಳೆಯ ನೌಕರಿ ಹಿಡಿದು ಸಾಕಷ್ಟು ಹಣಮಾಡುವಂತೆಯೂ ಪ್ರೇರೇಪಿಸುವುದು ಸಾಮಾನ್ಯವಾಗಿಬಿಟ್ಟಿದೆ. ಆದರೆ, ಶಿಕ್ಷಣ ಓದು ಬರಹದ ಜೊತೆಗೆ ತನ್ನ ಸುತ್ತಮುತ್ತಲ ಬದುಕನ್ನು ಕುರಿತು ಅರ್ಥ ಮಾಡಿಕೊಳ್ಳುವುದು ಮತ್ತು ವರ್ತಮಾನದ ಸಮಸ್ಯೆಗಳನ್ನು ಚಿಕಿತ್ಸಕ ದೃಷ್ಟಿಯಿಂದ ನೋಡುವುದು. ಆ ಜಾಣ್ಮೆ ಮತ್ತು ಅದನ್ನು ಅರ್ಥಮಾಡಿಕೊಳ್ಳಲು ಬೇಕಾದ ಗಟ್ಟಿತನವನ್ನು ನಮ್ಮ ನೆಲ ಮೂಲದ ಸಂಸ್ಕೃತಿಯ ಧಾತುಗಳಿಂದ ಧಾರಣ ಮಾಡಿ ಕೊಳ್ಳುವ ಶಕ್ತಿಯನ್ನೇ ಕಳೆದುಕೊಂಡಿದ್ದೇವೆ. ಇಂದು ಅಂತಹ ಶಕ್ತಿ ನಮಗೆ ಅಗತ್ಯವಿದೆ, ಇಂತಹ ಧಾರಣ ಶಕ್ತಿಯನ್ನು ವೈಜ್ಞಾನಿಕ ಮನೋಧರ್ಮ ಅಥವಾ ವೈಚಾರಿಕತೆಯಿಂದ ಪಡೆಯಲು ಸಾಧ್ಯವಿದೆ. ವೈಚಾರಿಕತೆ ಎಂದರೆ ನಮ್ಮ ದೈನಂದಿನ ಬದುಕಿನಲ್ಲುಂಟಾಗುವ ಬಿಕ್ಕಟ್ಟಿನ ಸಂದರ್ಭದಲ್ಲಿ ನಮ್ಮ ಮನದಾಳದ ಅರಿವಿಗೆ ಕಾಣುವ ಸತ್ಯವೂ ಪ್ರಾಮಾಣಿಕವೂ ಆದ ತಿಳಿವಳಿಕೆಯಿಂದಾಗಿ ನಮ್ಮಲ್ಲಿ ಮೂಡುವ ಪ್ರಶ್ನೆಗಳು ಮತ್ತು ಚಿಂತನೆಗಳು ಎಂದು ಹೇಳಬಹುದು. ಪ್ರಸ್ತುತ ಇಂತಹದ್ದೊಂದು ಚಿಂತನಾ ಕ್ರಮವನ್ನು ಬೆಳೆಸುವುದು ಅಗತ್ಯವಾಗಿದೆ. ಹಾಗೆಂದಾಕ್ಷಣ 'ವಿಚಾರ' ಎಂಬುದು ಕೇವಲ ಬೌದ್ಧಿಕ ಕಸರತ್ತು ಎಂದೇನೂ ಭಾವಿಸಬೇಕಿಲ್ಲ.

'ವೈಚಾರಿಕತೆ' ನಮ್ಮ ವ್ಯಕ್ತಿತ್ವದ ಶೋಧವೂ ಆಗಿರುವುದರಿಂದ ಬೌದ್ಧಿಕ ಬೆಳವಣಿಗೆ ತಂತಾನೆ ಸಾಧ್ಯವಾಗುತ್ತದೆ. ವ್ಯವಸ್ಥೆಯ ಬಗೆಗಿನ ಅತೃಪ್ತಿ, ಅಸಮಾಧಾನ ಮತ್ತು ಪ್ರಶ್ನಿಸುವ ಮನೋಭಾವ ಬೆಳೆದು ಸಾಮಾಜಿಕ, ರಾಜಕೀಯ ಅಥವಾ ಒಟ್ಟಾರೆ ನಮ್ಮ ಸಾಂಸ್ಕೃತಿಕ ಪರಿವರ್ತನೆಯ ತುಡಿತಗಳು ತೀವ್ರವಾಗುತ್ತವೆ. ಇದನ್ನು ತಿಳಿದಿದ್ದ ನಮ್ಮ ಸಂವಿಧಾನ ರಚನಕಾರರು ವೈಜ್ಞಾನಿಕ ಮನೋಭಾವ, ಮಾನವೀಯತೆ ಮತ್ತು ಅನ್ವೇಷಣಾ ಪ್ರವೃತ್ತಿಯನ್ನು ಬೆಳೆಸುವುದು ಪ್ರತಿಯೊಬ್ಬ ಪ್ರಜೆಯ ಕರ್ತವ್ಯ ಎಂಬುದನ್ನು ಸಂವಿಧಾನದ ೫೧-ಎ ವಿಧಿಯಲ್ಲಿ ಸೇರಿಸಿದ್ದಾರೆ. ಆದುದರಿಂದ ಸಂವಿಧಾನದ ಆಶಯದಂತೆ ವೈಜ್ಞಾನಿಕ ಮನೋಭಾವವನ್ನು ಬೆಳೆಸುವ ವಿಷಯವನ್ನು ಪಠ್ಯಕ್ರಮದಲ್ಲಿ ಅಳವಡಿಸಿ ಬೋಧಿಸಬೇಕಾದುದು ಅತ್ಯಂತ ಜರೂರಿನದು ಎಂದು ಭಾವಿಸಿದ್ದೇನೆ. ಯಾಕೆಂದರೆ ಇಂದು ಅಕ್ಷರಬಲ್ಲವರು ನಮ್ಮ ಸಮಾಜದಲ್ಲಿನ ಮೌಢ್ಯ, ಭ್ರಷ್ಟಾಚಾರ, ಅಪ್ರಾಮಾಣಿಕತೆ, ಜಾತೀಯತೆಗಳಲ್ಲಿ ಮುಳುಗಿ ಏಳುತ್ತಿರುವುದನ್ನು ನೋಡಿದರೆ ಕಲಿಸುವಲ್ಲಿನ ಲೋಪ ಎದ್ದುಕಾಣುತ್ತದೆ. ಮಕ್ಕಳು ನಾವು ಹೇಳಿದ್ದನ್ನು ಅನುಸರಿಸುವುದಕ್ಕಿಂತ ನಾವು ಮಾಡಿದ್ದನ್ನೇ ಅನುಕರಿಸುತ್ತಾರೆ. ಈ ಕಾರಣದಿಂದಾಗಿ ನಡೆ-ನುಡಿ ಒಂದಾಗಿರಿಸಿಕೊಂಡ ಪ್ರಜ್ಞೆ ಸದಾ ಎಚ್ಚರವಾಗಿರಬೇಕು. ಇದು ಬೌದ್ಧಿಕ ಪ್ರಜ್ಞೆಯಾಗಿಯಷ್ಟೇ ಉಳಿಯದೆ ಕಾರ್ಯತಃ ಆಚರಣೆಗೆ ಬರಬೇಕು. ಕ್ರಿಯೆಗೆ ತೊಡಗಿಸಿಕೊಳ್ಳಲು ಬಾರದ ಜ್ಞಾನ ನಿರರ್ಥಕ ಅಲ್ಲವೇ ?

'ವೈಚಾರಿಕತೆ'ಯು ಕೇವಲ ದಿನನಿತ್ಯದ ಮೌಢ್ಯ ಆಚರಣೆಗಳ ವಿಡಂಬನೆಗೆ ಸೀಮಿತವಾಗದಂತೆ ಸಂಕೀರ್ಣವಾಗಿರುವ ಸಮಾಜದ ಸಮಸ್ಯೆಗಳನ್ನು ಅರಿಯುವ ಮತ್ತು ಪರಿಹಾರಗಳನ್ನು ಹುಡುಕುವ ಕ್ರಿಯೆಗೆ ಪ್ರೇರಣೆ ನೀಡುತ್ತದೆ. ಆದರೆ ನಮ್ಮ ತಿಳಿವಳಿಕೆಯೇ ಶ್ರೇಷ್ಠ ಎಂಬ ಅಹಂಕಾರವಿರಬಾರದು. ಬದಲಾಗಿ ವಿನಯದಿಂದ ಕೂಡಿದ ನಿರಂತರ ಶೋಧದಿಂದ ಹೊಸ ತಿಳಿವಳಿಕೆಯು ಉಂಟಾಗುತ್ತದೆ ಎಂಬುದನ್ನು ಗಮನಿಸಬೇಕು.

ವೈಚಾರಿಕತೆ ಎಂಬುದು ದೊಡ್ಡ ಕ್ರಾಂತಿ ಎಂಬ ಭ್ರಮೆ ಇಂದು ಮನೆಮಾಡಿದೆ. ವಿಚಾರವಾದಿ ಎನಿಸಿಕೊಂಡವನು ತಾನು ತಿಳಿದಿರುವುದೇ ಸತ್ಯ ಮತ್ತು ಅಂತಿಮ ಎಂದು ಭಾವಿಸಿದಂತೆ ಕಾಣುತ್ತದೆ. ವಾಸ್ತವವಾಗಿ ಇಂತಹ ಆರ್ಭಟಗಳಿಲ್ಲದ ಅತ್ಯಂತ ಸಹಜ ಎನ್ನಬಹುದಾದ ಚಿಂತನಾ ಕ್ರಮದಲ್ಲೇ ನಿಜವಾದ ವಿಚಾರವಾದವಿರುವುದು. ವಿಚಾರವಾದ ಕುರಿತ ಒಳನೋಟಕ್ಕಾಗಿ ನಾನು ಇಬ್ಬರು ವ್ಯಕ್ತಿಗಳ ಬದುಕನ್ನು ಉದಾಹರಿಸುತ್ತೇನೆ. ನಾವು ಈವೊತ್ತು ಯಾವುದನ್ನು ವೈಚಾರಿಕತೆ, ಕ್ರಾಂತಿ ಇತ್ಯಾದಿ ಏನೆಲ್ಲಾ ಕರೆಯುತ್ತಿದ್ದೇವೆ ಅಂತಹ ಯಾವುದೇ ಭ್ರಮೆಗಳಿಲ್ಲದ ಅತ್ಯಂತ ಸಹಜವೆಂಬಂತೆ ತನ್ನ ಸುತ್ತಲಿನ ಬದುಕನ್ನು ಕುರಿತು ಪ್ರಾಮಾಣಿಕವೂ, ಕ್ರಿಯಾಶೀಲವೂ ಆದ ನೆಲೆಯಲ್ಲಿ ಚಿಂತಿಸಿದ ವ್ಯಕ್ತಿ ಬಸವಣ್ಣ. ಅಲ್ಲಮನಂತೆ ದರ್ಶನಕ್ಕೂ ಕೈಹಾಕದ, ಹರಿಹರ, ಚಾಮರಸ ಮೊದಲಾದವರಂತೆ ಮತೀಯ ಧರ್ಮಶ್ರದ್ಧೆಯೂ ಇಲ್ಲದ, ಅತ್ಯಂತ ಸ್ವಾಭಾವಿಕವಾಗಿ ಯೋಚಿಸಿದವನು ಬಸವಣ್ಣ. ಇಂತಹ ಸಹಜ ಚಿಂತನೆ, ಕೃತ್ರಿಮತೆ, ಕರ್ಮಠ ಯಾವುದೂ ಇಲ್ಲದೆ ಸಮಕಾಲೀನ ಬದುಕನ್ನೇ ಕುರಿತದ್ದಾಗಿರುತ್ತದೆ. ಆದುದರಿಂದಲೇ ಬಸವಣ್ಣ ಎತ್ತಿದ ಅನೇಕ ಪ್ರಶ್ನೆಗಳು ಎಲ್ಲ ಸಮುದಾಯದ ಪರವಾಗಿರಲು ಸಾಧ್ಯವಾಯಿತು. ಅಲ್ಲದೆ ಆ ಸಮಸ್ಯೆಗಳಿಗೆ ಪೂರ್ಣ ಪ್ರಮಾಣದ ಉತ್ತರ ಸಿಗದೆ ಬೇರೆ ಬೇರೆ ರೂಪಗಳಲ್ಲಿ ಅವೇ ಪ್ರಶ್ನೆಗಳು ನಮ್ಮ ಮುಂದೆ ಇರುವುದರಿಂದ ಇಂದು ಬಸವಣ್ಣನಂತಹವರು ಮುಖ್ಯರೆನಿಸಿಬಿಡುತ್ತಾರೆ. ಇಂತಹ ವ್ಯಕ್ತಿಯನ್ನು ನಾವು ಭಕ್ತಿ, ಧರ್ಮದಲ್ಲಿ ಬಂಧಿಸುವುದರಿಂದ ಇಂದಿನ ನಮ್ಮ ಎಲ್ಲ ಸಮಸ್ಯೆಗಳನ್ನು ಮರೆಮಾಚಲು ಬಳಸುವ ಸಾಧನವಾಗಿಬಿಡುವ ಅಪಾಯ ಎಲ್ಲರಿಗೂ ತಿಳಿದಿರುವುದೇ ಆಗಿದೆ. ಆದುದರಿಂದ ಇಂದು

■

ಡಾ|| ಕೆ. ಶಿವಾನಂದಯ್ಯ



ನಾವು ಪರಂಪರೆಗೆ ಮುಖಾಮುಖಿಯಾಗುತ್ತಾ ಇಂದಿನ ನಮ್ಮ ಸಮಸ್ಯೆಗಳಿಗೆ ವೈಜ್ಞಾನಿಕವೂ, ಪ್ರಜಾಸತ್ತಾತ್ಮಕವೂ, ಸಂವಿಧಾನಬದ್ಧವೂ, ಮಾನವೀಯವೂ ಆದ ನೆಲೆಯಲ್ಲಿ ಉತ್ತರ ಕಂಡುಕೊಳ್ಳಬೇಕಾಗಿದೆ. ಇಂತಹದ್ದೊಂದು ದೃಷ್ಟಿಕೋನಕ್ಕೆ ಬಸವಣ್ಣ ಮೊದಲಾದವರು ನಮಗೆ ಎಷ್ಟರ ಮಟ್ಟಿಗೆ ನೆರವಾಗಬಲ್ಲರು ಎಂಬುದು ಕಾರ್ಯತಃ ತೊಡಗಿಸಿ ಕೊಂಡವರಿಗೆಲ್ಲಾ ಗೋಚರಿಸುತ್ತದೆ. ಈ ಮಿತಿಯನ್ನು ಅರಿತಾಗ ಮಾತ್ರ ಯಾವುದೇ ವ್ಯಕ್ತಿ, ಧರ್ಮಕ್ಕೆ ಬಂಧಿಯಾಗಿ ಭಕ್ತಿ-ಪೂಜೆಗೆ ಒಳಗಾಗಲಾರನೇನೋ ಎಂದೆನಿಸುತ್ತದೆ.

ನಾನು ಉದಾಹರಿಸಲು ಬಯಸುವ ಮತ್ತೊರ್ವ ವ್ಯಕ್ತಿ ಇಂಗ್ಲೆಂಡಿನ ಚಾರ್ಲ್ಸ್ ಬ್ರಾಡ್ಲಾ, ದೇವರ ಬಗ್ಗೆ ನಂಬಿಕೆ ಇಲ್ಲದ ಈತ ತನ್ನ ಬದುಕಿನುದ್ದಕ್ಕೂ ಮಾನವೀಯತೆಯನ್ನು ಮೆರೆದ ಸಹಜ ಚಿಂತಕ. ನಾಸ್ತಿಕನಾದ ಈತ ಸಂಪ್ರದಾಯದ ಜನರಿಂದಲೇ ಆಯ್ಕೆಯಾಗಿ, ದೇವರ ಹೆಸರಿನಲ್ಲಿ ಪ್ರಮಾಣವಚನ ಸ್ವೀಕರಿಸಲು ನಿರಾಕರಿಸುತ್ತಾನೆ. ಕೋರ್ಟ್, ಚರ್ಚು, ಸಂಸತ್ತು ಈತನ ನಿಲುವನ್ನು ವಿರೋಧಿಸಿದರೂ ಧರ್ಮ, ದೇವರಲ್ಲಿ ನಂಬುಗೆ ಇರಿಸಿ ಕೊಂಡಿದ್ದ ಸಾಮಾನ್ಯ ಜನ ಈತನನ್ನು ನಾಲ್ಕು ಬಾರಿ ಗೆಲ್ಲಿಸಿ, ಚರ್ಚ್‌ನ ಪ್ರತಿನಿಧಿಯನ್ನು ಸೋಲಿಸುತ್ತಾರೆ. ಈಗ ನೋಡಿ, ಸಾಮಾನ್ಯ ಜನ ಸಂಪ್ರದಾಯಶರಣರು ಎಂದಿಟ್ಟು ಕೊಂಡರೂ ಕೋರ್ಟ್, ಚರ್ಚ್, ಸಂಪತ್ತು ಯೋಚಿಸು ವುದಕ್ಕಿಂತ ಭಿನ್ನವೂ, ಸಹಜವೂ, ಶ್ರೇಷ್ಠವೂ ಆದ ನಂಬುಗೆ ಯನ್ನು ಇರಿಸಿಕೊಂಡಿದ್ದರು ಎಂಬುದು ಗಮನಾರ್ಹ. ಕಾರಣ ಬ್ರಾಡ್ಲಾ ನಾಸ್ತಿಕನಾದರೂ ಮಾನವೀಯ ತುಡಿತ ಹೊಂದಿದ್ದ, ಅಲ್ಲವೇ?

ಈಗ ಯೋಚಿಸಿ, ಬಸವಣ್ಣ ಅಂದಿನ ಸಮಸ್ಯೆಗಳಿಗೆ ಭಕ್ತಿಯ ನೆಲೆಯಲ್ಲೇ ಪರಿಹಾರ ಹುಡುಕಿದರೆ, ಬ್ರಾಡ್ಲಾನ ನಾಸ್ತಿಕತೆಯ ಆಳದಲ್ಲೂ ಮಾನವೀಯ ಸ್ಪಂದನವಿತ್ತು ಎಂಬುದು ಸ್ಪಷ್ಟವಾಗುತ್ತದೆ. ಇವರ ಕಾಳಜಿಗಳನ್ನು ಅರ್ಥಮಾಡಿಕೊಳ್ಳದಿದ್ದರೆ, ಕೇವಲ ಭಕ್ತಿ ವೈರುಧ್ಯಗಳನ್ನು ಮರೆಮಾಚುವ ಸಾಧನವಾಗುತ್ತದೆ. ಅಲ್ಲಿ ಮಾನವೀಯತೆ ಗೈರು ಹಾಜರಾಗುತ್ತದೆ. ಮಾನವೀಯ ತುಡಿತಗಳಿಲ್ಲದ ನಾಸ್ತಿಕತೆಯೂ ಬರಡೆನಿಸುತ್ತದೆ.

ಡಾ|| ಕೆ. ಶಿವಾನಂದಯ್ಯ
ಹಿರಿಯ ಶ್ರೇಣಿ ಕನ್ನಡ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಸದುರ್ಗ - ೫೭೭ ೫೨೭

೧೪ನೇ ಪುಟದಿಂದ (೧೮೫೭ರ ಪ್ರತಿರೋಧ)

ಮೈಗೂಡಿಸಿಕೊಳ್ಳುತ್ತಿದ್ದಂತೆಯೇ, ಆ ಪರಿವರ್ತನೆಯನ್ನು ತಡೆಯಲೋ ಎಂಬಂತೆ ಅಧಿಕಾರವನ್ನು ತಮ್ಮದೇ ದೇಶೀ ಮಿತ್ರವರ್ಗಕ್ಕೆ ಅವಸರದಲ್ಲಿ ಹಸ್ತಾಂತರಿಸಿ, ಬ್ರಿಟಿಷ್ ಬಂಡವಾಳ ತನ್ನ ಭವಿಷ್ಯತ್ತಿನ ಹಿತಾಸಕ್ತಿಗಳನ್ನು ಕಾಪಾಡಿಕೊಂಡಿತು. ನಮಗೆ ಸ್ವಾತಂತ್ರ್ಯ ಬಂತು ಎಂದೋ, ಸಂಪಾದಿಸಿದೆವು ಎಂದೋ ಹೇಳಲಾಗಲಿಲ್ಲ. ಅಮೆರಿಕಾದಲ್ಲಿ ಆದಂತೆ ನಾವು ಗಳಿಸಿದ್ದನ್ನು ಸ್ವಾತಂತ್ರ್ಯವೆಂದು ಘೋಷಿಸಲೂ ನಮಗೆ ಸಾಧ್ಯವಾಗಲಿಲ್ಲ. ಆಡಳಿತದ ವರ್ಗಾವಣೆಯು ಪ್ರಭುತ್ವದಲ್ಲಿ, ಅದರ ವರ್ಗದ ಸ್ವರೂಪದಲ್ಲಿ, ಯಾವ ಬದಲಾವಣೆಯನ್ನೂ ತರಲಿಲ್ಲ. ೧೮೫೭ರಲ್ಲಿ ಮತ್ತು ತದನಂತರ ಯಾವ ಯಾವ ವ್ಯಕ್ತಿಗಳು, ಮನೆತನಗಳು, ರಾಜ ಮಹಾರಾಜರುಗಳು ಬ್ರಿಟಿಷರಿಗೆ ಪ್ರತಿರೋಧವನ್ನು ಹತ್ತಿಕ್ಕಲು ಸಹಾಯ ಮಾಡಿದ್ದರೋ ಅವರಿಗೇ ಅಧಿಕಾರ ವರ್ಗಾವಣೆ ಆಯಿತೆಂದು ದಿನಕಳೆದಂತೆ ನಮಗೆ ಅನುಭವವಾಗುತ್ತಿದೆ. ಉದಾಹರಣೆಗೆ, ಗ್ವಾಲಿಯರ್‌ನ ಸಿಂಧ್ಯಾ ಮನೆತನ ಬ್ರಿಟಿಷರಿಗೆ ಸಲ್ಲಿಸಿದ, ಸ್ವಾತಂತ್ರ್ಯ ಹೋರಾಟ ವಿರೋಧಿ ಕ್ರಮಗಳೆಲ್ಲಾ ದಾಖಲೆಯಲ್ಲಿವೆ. ಅಂದು ಬ್ರಿಟಿಷರಿಂದ ತಮ್ಮ ಸೇವೆಗೆ ಮಾನ್ಯತೆ ಪಡೆದು, ಜಹಗೀರು ಗಿಟ್ಟಿಸಿಕೊಂಡ ಅನೇಕರು ಇಂದು ಅತಿದೊಡ್ಡ ಉದ್ಯಮಿಗಳೂ, ಬಂಡವಾಳಿಗರೂ ಆಗಿದ್ದಾರೆ. ಅಂದಿನ ಮಹಾರಾಜರುಗಳನ್ನು ನಾಚಿಸುವ ಏಕಸ್ವಾಮ್ಯ ಉದ್ಯಮ ಭೂಪತಿಗಳು ಇಂದು ತುಂಬಿದ್ದಾರೆ. ಅದಕ್ಕೆಂದೇ ಚಿಕ್ಕದಿದ್ದರೂ ಅಧಿಕಾರದಿಂದ, ಸಂಪತ್ತಿನಿಂದ ಅತ್ಯಂತ ಬಲಶಾಲಿಯಾದ ಈ ವರ್ಗಕ್ಕೆ ೧೮೫೭ರ ಪ್ರತಿರೋಧವನ್ನು ಸ್ವಾತಂತ್ರ್ಯ ಸಂಗ್ರಾಮವೆಂದು ಗುರುತಿಸಲು ಹುಳ್ಳಮನಸು. ಅಂದೂ ಇಂದೂ ಶೋಷಣೆಗೆ ಒಳಗಾದ, ಇತಿಹಾಸ ನಿರ್ಮಿಸುವ ಜನಸಮುದಾಯ ಮಾತ್ರ ಆ ಸಂಗ್ರಾಮವನ್ನು, ರಾಷ್ಟ್ರೀಯತೆ ಬೆಳೆಯಲು ಆ ಸಂಗ್ರಾಮವು ನೀಡಿದ ಒತ್ತಾಸೆಯನ್ನು, ಇನ್ನೂ ನೆನಪಿಸಿಕೊಳ್ಳುತ್ತಾರೆ. ಮುಂದುವರಿದ ತಮ್ಮ ಘೋಷಣೆಯ ವಿರುದ್ಧ ಹೋರಾಟಕ್ಕೆ ಅದರಲ್ಲಿ ಸ್ಫೂರ್ತಿ ಕಾಣುತ್ತಾರೆ.

ಫ್ರಾನ್ಸ್ ಮಹಾಕ್ರಾಂತಿಯಲ್ಲಿ ಹೇಗೆ ಊಳಿಗಮಾನ್ಯ ಪದ್ಧತಿಯ ವಿರುದ್ಧದ ಬೂರ್ಷ್ವಾ ಕ್ರಾಂತಿ ಕ್ಷಣಿಕವಾಗಿ ಮಿಂಚಿ, ನಂತರ ಮುದುಡಿಕೊಂಡಿತೋ, ಮುಂದೊಮ್ಮೆ ಪ್ಯಾರಿಸ್ ಕಮ್ಯೂನ್‌ನ ಸಂದರ್ಭಕ್ಕೆ ಕಾಯಬೇಕಾಯ್ತೋ, ಅದೇ ಪರಿಸ್ಥಿತಿ ಎನ್ನಬಹುದು ೧೮೫೭ರ ಸಂದರ್ಭ. ಆದರೆ ೧೮೫೭ರ ನಮ್ಮ ಪ್ರಯತ್ನ, ಸಂಘಟನೆ, ಧ್ಯೇಯ ತಂತ್ರಗಳನ್ನು ಫ್ರಾನ್ಸ್ ಮಹಾಕ್ರಾಂತಿಯ ಮಹಾಸಂದರ್ಭಕ್ಕೆ ಯಾವ ರೀತಿಯಲ್ಲೂ ಹೋಲಿಸಲಾಗದು. ಅದರ ಕಾಳಗದ ಕರೆ, ಸ್ವಾತಂತ್ರ್ಯ, ಸಮಾನತೆ, ಸೌಭ್ರಾತೃತ್ವ, ವಿಶ್ವದ ಎಲ್ಲ ಹೋರಾಟಗಳ ಕರೆ ಆಯಿತು.

ಕ್ರಾಂತಿ ಎಂದರೆ, ಅಧಿಕಾರ ಒಂದು ವರ್ಗದಿಂದ ಮತ್ತೊಂದು ವರ್ಗಕ್ಕೆ ಹಸ್ತಾಂತರಗೊಳ್ಳುವುದು ಎಂದೇ ಅರ್ಥ. ೧೮೫೭ರ ಸಂದರ್ಭದಲ್ಲಿ ಊಳಿಗಮಾನ್ಯ ವರ್ಗದಿಂದ ಹೊಸ ಬೂರ್ಷ್ವಾ ವರ್ಗಕ್ಕೆ ಅಧಿಕಾರ ಹಸ್ತಾಂತರವಾಗ ಬೇಕಾಗಿತ್ತು. ಇಂಗ್ಲೆಂಡಿನಲ್ಲಿ ಹಾಗೂ ಯೂರೋಪಿನಲ್ಲಿ ಅದೇ ಕಾಲದಲ್ಲಿ ಈ ವ್ಯಾಪಕ ಕ್ರಾಂತಿ ನಡೆದಿತ್ತು. ಆದರೆ ಭಾರತದಂತಹ ತಮ್ಮ ಇತರ ವಸಾಹತುಗಳಲ್ಲಿ ಈ ಬೆಳವಣಿಗೆಯನ್ನು ಹಲವು ರೀತಿಯಲ್ಲಿ ಅವರು ಆಗಗೊಡಲಿಲ್ಲ. ರಾಜಮಹಾರಾಜರ, ಜನಸಾಮಾನ್ಯರ ವಿರುದ್ಧ ಜನರೇ ಸಿಡಿದೆದ್ದರೂ, ವಿಕ್ಟೋರಿಯಾ ರಾಣಿ ತನ್ನ ಸನ್ನದ್ದಿನಲ್ಲಿ ಇವರನ್ನೆಲ್ಲಾ ಯಥಾಸ್ಥಿತಿ ಮುಂದುವರೆಸುವ ಭರವಸೆ ನೀಡಿದಳು. ಅವರ ವಿರುದ್ಧ ಸಿಡಿದೆದ್ದವರನ್ನು ನಿರ್ದಾಕ್ಷಿಣ್ಯವಾಗಿ ಧೂಳಿಪಟ ಮಾಡಿದಳು. ಮುಂದೆ ೧೯೪೭ರಲ್ಲಿ ಆ ಹೊತ್ತಿಗಾಗಲೇ ಪ್ರವರ್ಧಮಾನಕ್ಕೆ ಬಂದಿದ್ದ ಭಾರತದ ಬೂರ್ಷ್ವಾ ವರ್ಗ ಇದೇ ರಾಜಮಹಾರಾಜರಿಂದ ಅಧಿಕಾರ ಕಸಿದುಕೊಂಡಿತು. ಮುಂದುವರಿದು ಆ ರಾಜರೂ ಅದೇ ವರ್ಗ ದೊಡನೆ ಸಮ್ಮಿಳಿತವಾದರು. ಹೊಸ ಭಾರತದ ಆರ್ಥಿಕ ಯೋಜನೆಗಳ ಬುನಾದಿ ಹಾಕಿದವರೂ ಮುಂಬಯಿಯ ಬಂಡವಾಳಿಗರು. ಒಂದು ಕ್ರಾಂತಿಕಾರಕ ಸನ್ನಿವೇಶ ವಿಫಲವಾದರೆ ಪ್ರತಿಗಾಮಿ ಪ್ರವೃತ್ತಿಗಳು ಹಿಂದಿಗಿಂತಲೂ ಪ್ರಖರವಾಗಿ ಜಿದ್ದಿನಿಂದ ಪುನರಾವಿರ್ಭವಿಸುತ್ತವೆ. ಮತ್ತೊಂದು ಕ್ರಾಂತಿಕಾರಿ ಸನ್ನಿವೇಶದ ಸಾಧ್ಯತೆಯನ್ನು ಬಹುಕಾಲ ಮುಂದೂಡಲು ಸಮರ್ಥವಾಗುತ್ತವೆ. ಆದ್ದರಿಂದ ಕ್ರಾಂತಿ ನಡೆಸಬೇಕೆನ್ನುವವರು, ಇದು ವೈಯಕ್ತಿಕ ಸಾಹಸದ ಕೆಲಸವಲ್ಲವೆಂದೂ, ಬಹು ಜವಾಬ್ದಾರಿಯ ಉಜ್ಜುಗವೆಂದೂ, ಅಪಾರ ಸಂಘಟನೆಯ ಜೊತೆಗೆ ಜನ ಸಮೂಹವನ್ನು ಒಟ್ಟಿಗೆ ಒಯ್ಯಬೇಕೆಂದೂ ತಿಳಿಯುವುದು ಅಗತ್ಯ; ಗೆಲ್ಲಲೇಬೇಕು, ಇಲ್ಲವೇ ಆ ಪ್ರಯತ್ನ ಮಾಡಬಾರದು. ಅರೆಬರೆ ವಿಫಲ ಪ್ರಯತ್ನ ಪ್ರತಿಗಾಮಿಗಳಿಗೆ ಆಹ್ವಾನ ಎನ್ನುವ ರೀತಿಯಲ್ಲಿ ಸಮಕಾಲೀನ ವಸ್ತುಸ್ಥಿತಿಯನ್ನು ಅರ್ಥೈಸಿಕೊಂಡರೆ ಅನೇಕ ಭ್ರಮೆಗಳು ಕರಗಿಹೋಗಿ, ನಮ್ಮ ಸಧ್ಯದ ರಾಜಕೀಯ ಕರ್ತವ್ಯಗಳ ಬಗ್ಗೆ ತಿಳಿವು ಮೂಡಿಸಲು ಸಹಕಾರಿಯಾದೀತು.

೧೮೫೭ರ ಪ್ರತಿರೋಧದಲ್ಲಿ ಸ್ವಾತಂತ್ರ್ಯದ ಕುಡಿಯ ಉಗಮವನ್ನು ಗುರುತಿಸಲಾಗದ ಅಸಾಮರ್ಥ್ಯ, ೧೯೪೭ರಲ್ಲಿ ನಮಗೆ ಬಂದದ್ದು ಸ್ವಾತಂತ್ರ್ಯವೇ ಅಲ್ಲವೆಂದು ವಾದಿಸುವುದು, ಗಾಂಧಿ-ನೆಹರೂ ಮುಂತಾದವರೆಲ್ಲಾ ಸಾಮ್ರಾಜ್ಯಶಾಹಿಗಳ ಬಾಲಂಗೋಚಿ ಎನ್ನುವುದು ಮುಂತಾದ ಅನಿಸಿಕೆಗಳು ಪ್ರಗತಿ ಪರವೆಂದೆನಿಸಿಕೊಂಡವರಲ್ಲೂ ಏಕೆ ಉಂಟಾಗುತ್ತದೆ ಎಂದು ವಿಸ್ಮಯ ಉಂಟಾಗುತ್ತದೆ. ಸಾಮಾಜಿಕ ಪರಿಸ್ಥಿತಿಯನ್ನು ವಿಶ್ಲೇಷಣೆಗೆ ಒಳಪಡಿಸುವಾಗ ಗಣಿತ ಶಾಸ್ತ್ರದ ಸೂತ್ರಬದ್ಧ ನಿಖರತೆಯನ್ನು ಬಯಸುವಂಥ ವಾದಸರಣಿ, ಅದಕ್ಕೆ ಬಳಸುವ ಸಿದ್ಧಾಂತಗಳ ಯಾಂತ್ರಿಕ ಪ್ರಯೋಗವಾಗುತ್ತದೆಯಷ್ಟೆ. ಕಾರಣ ನಾವು ಮೂಲತಃ ವ್ಯವಹರಿಸುತ್ತಿರುವುದು ಮನುಷ್ಯರೊಡನೆ, ಪ್ರಯೋಗಾಲಯದ ಮೊಲಗಳು, ಇಲಿಗಳು ಅಥವಾ ರಾಸುಗಳು ಅಲ್ಲ. ಇದನ್ನು ಮರೆತಾಗ ಇಂತಹ ಪ್ರಮಾದಗಳಾಗುತ್ತವೆ. ಸ್ವಾತಂತ್ರ್ಯವೆಂಬುದು ಯಾರೋ ಕೊಡುವ, ಕಸಿದುಕೊಳ್ಳುವ, ಕಳೆದುಕೊಳ್ಳುವ ವಸ್ತು ಅಲ್ಲ. ಸಮಾಜ ವಿಕಾಸದ ಹಾದಿಯಲ್ಲಿ ಅಂದಂದಿನ ವಾಸ್ತವಿಕ ಸಂದರ್ಭಕ್ಕೆ ಅನುಗುಣವಾಗಿ ಹಂತಹಂತ ವಾಗಿ ಸಾಧಿತವಾಗುತ್ತಾ ಹೋಗುವ ಪರಿಕಲ್ಪನೆ ಸ್ವಾತಂತ್ರ್ಯ. ಅದು ಉಪಯೋಗಿಸುವ ಸಲಕರಣೆ ಶುದ್ಧ ಪ್ರಜಾಪ್ರಭುತ್ವದ್ದು. ೧೯೪೭ರ ನಮ್ಮ ಐತಿಹಾಸಿಕ ಸಾಧನೆ ನಮ್ಮ ಜನತೆಯು ಸಾಧನೆಯ ಹಾದಿಯಲ್ಲಿ ಇಟ್ಟ ಒಂದು ಮಹಾ ಹೆಜ್ಜೆ. ಎಲ್ಲಾ ಹೋರಾಟಗಳು ಜರುಗುವುದು ಪ್ರಜಾಪ್ರಭುತ್ವದ ವಿಕಾಸಕ್ಕಾಗಿಯೇ. ಅದರ ವಿಕಾಸವನ್ನು ತಡೆಯುವವರ ವಿರುದ್ಧ; ವಿವಿಧ ವರ್ಗ ಹಿತಾಸಕ್ತಿಗಳ ವಿರುದ್ಧ. ವರ್ಗಗಳು ಇರುವ ವರೆಗೆ ಸಂಘರ್ಷಗಳೂ ಅನಿವಾರ್ಯ. ಗುರಿ ತಲಪುವ ವರೆಗೆ ಈ ಪ್ರಕ್ರಿಯೆ ನಡೆಯುತ್ತಲೇ ಇರುತ್ತದೆ. ಈ ಮಾರ್ಗವು ಒಂದು ಸರಳರೇಖೆಯಲ್ಲದಿರಬಹುದು. ಒಂದೊಮ್ಮೆ ಹಿಂದು ಮುಂದಾದರೂ ಸರಿಯೇ ಈ ಮಾರ್ಗವು ಯಾವತ್ತಿಗೂ ಊರ್ಧ್ವಮುಖೀ ಎಂದು ಇತಿಹಾಸ ಹೇಳುತ್ತದೆ.

ಕೆ. ಎಸ್. ಪಾರ್ಥಸಾರಥಿ
ಸಿ-೨, 'ಐಕ್ಯತಾ', ನಂ. ೬೦/೨, ೧೭ನೇ ಅಡ್ಡರಸ್ತೆ,
ಮಲ್ಲೇಶ್ವರಂ, ಬೆಂಗಳೂರು - ೫೬೦ ೦೫೫





# ಬಲಿ

ಪಿ. ಬಿ. ಪ್ರಸನ್ನ

"ದಣಿಗಳೇ... ಓ ದಣಿಗಳೆ... ಬನ್ನಿ ಹೊರಗೆ! ಕಲಿಸ್ತೇನೆ ಬುದ್ಧಿ ನಿಮ್ಗೆ!... ನನ್ನ ಜಾಗ ಒಳಗೆ ಹಾಕ್ಕೊಂಡು ಭಾರೀ ಮೆರೀತಾ ಇದ್ದೀರಿ ಅಲ್ವಾ? ನಾಡಿದ್ದು ಜುಮಾದಿಯ ಹತ್ರ ಪ್ರಶ್ನೆ ಕೇಳುವ ಮಗನೇ, ನಾನು ಬಿಡೂದಿಲ್ಲ, ಎಕ್ರೆಗಟ್ಲೆ ಆಸ್ತಿ ಮಾಡಿದ್ರೂ ನನ್ನ ಮೂರು ಸೆಂಟ್ಸ್ ಜಾಗವನ್ನೂ ಸುಮ್ನೆ ಒಳ್ಗೆ ಹಾಕ್ಕೊಂಡ್ರಾ? ನಾಡಿದ್ದು ಬನ್ನಿ ಜುಮಾದಿ ಕಟ್ಟೆಗೆ... ಅಲ್ಲಿ ಗೊತ್ತಾಗ್ತದೆ ಜುಮಾದಿಯ ಕಾರ್ಣಿಕ ಎಂತದೂಂತ. ನಾನು ಯಾರಿಗೂ ಕ್ಯಾರ್ ಮಾಡುದಿಲ್ಲ ಗೊತ್ತಾಯ್ತಾ..." ಡೀಕಯ್ಯ ಇನ್ನೂ ಎಂತೆಂಥದೋ ಹೇಳ್ಳಿಕ್ಕಿದ್ದ. ರವಿಚಂದ್ರ ಹೆಗ್ಡೇರಿಗೆ ಬಾಯಿಗೆ ಬಂದಹಾಗೆ ಬೈಲಿಕ್ಕಿತ್ತು ಅವ್ನಿಗೆ, ಅಷ್ಟೊತ್ತಿಗೆ ಅವ್ನೊಟ್ಟಿಗೆ ಬಂದಿದ್ದವ್ರೆಲ್ಲ ಅವನ್ನ ದರದರಾಂತ ಎಳ್ಕೊಂಡು ಹೋದ್ರು. ಹೆಗ್ಡೇರಿಗೆ ಅಂಗ್ಳಕ್ಕೆ ಬಂದ ಮಾರಿಲಿ ಒಮ್ಮೆ ಹಿಂದಕ್ಕೆ ಹೋದ ಹಾಗಾಯ್ತು.

ಡೀಕಯ್ಯ ಏರ್ಮಾಳು ಗುತ್ತು ಮನೆಯ ರವಿಚಂದ್ರ ಹೆಗ್ಡೇರ ಒಕ್ಕಲಿನವ. ಉಳುವವ್ನೇ ಹೊಲ್ದೊಡೆಯ ಕಾನೂನು ಬಂದ್ಮೇಲೆ ಅವ್ನು ಉಳ್ತಾ ಇದ್ದ, ಹೆಗ್ಡೇರ ಮೂರು ಗದ್ದೆ ಅವ್ನ ಪಾಲಾಗಿತ್ತು. ಆ ಕಾನೂನು ಇನ್ನೇನು ನಾಳೆ ಬರ್ತದೆ ಅನ್ನುವಾಗ ಅವ್ನಿಗೆ ಸಂದುಹೋಗಿದ್ದ ತೋಟ, ಬೈಲು ಗದ್ದೆ ಎಲ್ಲವನ್ನು ಹೆಗ್ಡೇರು ಒಳಗೆ ಹಾಕ್ಕೊಂಡಿದ್ರು. ಅದು ಗೊತ್ತಾದದ್ದು ಅವ್ನಿಗೆ ಮೊನ್ನೆ ಮೊನ್ನೆ. ಅವ್ನ ಒಬ್ನೇ ಮಗ ಸುರೇಶ ಬೀಯೇ ಡಿಗ್ರಿಯನ್ನು ಪಡ್ಕೊಂಡು ಮಂಗ್ಳೂರಿನಿಂದ ಬಂದವ ಎಂತದಕ್ಕೋ ಜಾಗದ ಕಾಗ್ದ ಪತ್ರ ಎಲ್ಲ ತೆಗ್ದಾಗ, ಗುತ್ತಿನ ಹೆಗ್ಡೆ ಸಾಮಾನ್ಯದ ಮಗ ಅಲ್ಲ, ಭಾರೀ ದೊಡ್ಡ ಘಟಿಂಗ ಅಂತ ಎಣಿಸಿದ. ಸರ್ಕಾರ ಡೀಕಯ್ಯನಿಗೆ ಮನೆ ಕಟ್ಟಿಕ್ಕೇಂತ ಮೂರು ಸೆಂಟ್ಸ್ ಜಾಗ ಕೊಟ್ಟಿತ್ತು. ಆ ಜಾಗ ಹೆಗ್ಡೇರ ಗೇರು ಬೀಜದ ತೋಟಕ್ಕೆ ಹೋಗುವ ಗುಡ್ಡೆಯ ಹತ್ರವೇ ಇತ್ತು. ಸರ್ಕಾರ ಆ ಜಾಗವನ್ನು ಡೀಕಯ್ಯನಿಗೆ ಕೊಟ್ಟಿತು ಅಂತ ಗೊತ್ತಾದ ಕೂಡ್ಲೆ ಕುಂಡೆ ತುರಿಸ್ಲಿಕ್ಕೆ ಸುರುವಾಯ್ತು. ಎಂತಾದ್ರು ಮಾಡಿ ಅದನ್ನು ಒಳಗೆಹಾಕ್ಕೊಳ್ಬೇಕು ಅಂತ ಎಣಿಸ್ಲಿಕ್ಕೆ ಸುರು ಮಾಡಿದ್ರು. ಆ ವರ್ಷ ಫೆಬ್ರವರಿ ಮಾರ್ಚಲ್ಲಿ ಗೇರು ಬೀಜದ ಸೀಸನ್ ಸುರುವಾಗುವಾಗ ತೋಟಕ್ಕೆ ಬೇಲಿ ಹಾಕುವಾಗ ಡೀಕಯ್ಯನಿಗೆ ಕೊಟ್ಟಿದ್ದ ಮೂರು ಸೆಂಟ್ಸ್ ಜಾಗವನ್ನೂ ಸೇರ್ಸಿಕೊಂಡು ಬೇಲಿ ಹಾಕಿಸಿದ್ರು. ಅದನ್ನು ನೋಡಿ ಅವ್ನ ಮಂಡೆ ಗರಗರ ತಿರ್ಗಿತು. ಓಡಿ ಬಂದವ್ನೆ, ಹೆಗ್ಡೇರೆ... ಬಡವ... ಬಾಯಿಗೆ ಮಣ್ಣು ಹಾಕ್ಬೇಡಿ... ಎಂತಾದ್ರೂ ಅಲ್ಲಿ ಬೆಳ್ಸಿ ದಿನ ದೂಡ್ತೇನೆ... ನಿಮ್ಮ ದಮ್ಮಯ್ಯ... ದಕ್ಕಯ್ಯ... ಅಂತೆಲ್ಲ ಕಾಲಿಗೆ ಬಿದ್ದು ಕೂಗ್ಲಿಕ್ಕೆ ಸುರು ಮಾಡಿದ. ಅಷ್ಟೇ ಆಗಿದ್ರೆ ಹೆಗ್ಡೇರು ಎಂತಾದ್ರೂ ಅಷ್ಟಿಷ್ಟು ಕೈ ಬಿಸಿ ಮಾಡಿ ವಾಪಸ್ ಕಳಿಸ್ತಿದ್ರೋ ಏನೋ, ಅವತ್ತು ಒಂದು ಮಿಸ್ಟೇಕ್ ಆಯ್ತು. ಅದು ಎಂತದೂಂದ್ರೆ, ಡೀಕಯ್ಯನೊಟ್ಟಿಗೆ ಅವ್ನ ಮಗ ಮತ್ತು ಅವ್ನ ಕಾಲೊನಿಯವ್ರು ಒಂದೈದಾರು ಜನ್ರು ಬಂದಿದ್ರು. ಅಪ್ಪ ಹೆಗ್ಡೇರ ಕಾಲಿಗೆ ಬಿದ್ದು ಕೂಗುದನ್ನು ನೋಡ್ಲಿಕ್ಕಾಗದೆ ಸುರೇಶ, ಪಿಕ್ಚರ್‌ನ ಶೈಲಲ್ಲೇ, "ಅಪ್ಪಾ, ಎಂತಕ್ಕೆ ಇವ್ನತ್ರ ದಮ್ಮಯ್ಯ ಹಾಕುದು? ಅದೇನು ಅವ್ನಪ್ಪನ ಜಾಗ ಅಲ್ಲ ಸರ್ಕಾರ ನಮ್ಗೆ ಕೊಟ್ಟದ್ದು, ಕೋರ್ಟು ಇರೂದೇ ಇಂಥದ್ದಕ್ಕೆ, ಕೇಸು ಹಾಕುವ. ಗೆಲ್ಲೋದು ನಾವೇ" ಅಂತ ಹೇಳಿಬಿಟ್ಟ. ಟೈಟ್ಟಾಗಿ ಬಂದಿದ್ದ ಕಾಲೋನಿಯವ್ರು "ಸಾ ಹೌದೌದು" ಅಂತ ತಲೆ ಅಲ್ಲಾಡಿಸಿದ್ರು. ಹೆಗ್ಡೇರಿಗೆ ಪಿಸುರು ಎಲ್ಲಿತ್ತೋ ನೆತ್ತಿಗೇರಿತು. "ರಂಡ್ಯಾ ಮಕ್ಕೆ!... ಕೋರ್ಟಿಗೆ ಹೋಗ್ತೀರಾ... ಹೋಗಿ... ಪೊಲೀಸ್ ಕಂಪ್ಲೇಂಟಾ? ಅದೂ ಕೊಡಿ!... ನಾನು ಯಾವುದಕ್ಕೂ ಕ್ಯಾರ್ ಮಾಡುದಿಲ್ಲ ಗೊತ್ತಾಯ್ತಾ? ಬ್ಯಾವರ್ಷಿಗಳೆ! ನಿಮ್ಮೆಲ್ಲ ಸರ್ಕಾರ ಸಡ್ಲು ಬಿಟ್ಟು ಬಿಟ್ಟು ನೀವು ಇವತ್ತು ನಮ್ಮ ತಲೆ ಹತ್ತಿ ಹೇಳ್ಲಿಕ್ಕೆ ಸುರು ಮಾಡಿದ್ದು, ಎಷ್ಟು ಹಾಂಕಾರ ನಿಮ್ಗೆ ಅಂತ. ಅಲ್ಲಾ, ನಾನು ದಣಿ, ನೀವು ಒಕ್ಕಲಿನವ್ರು. ಅದು ಮಾತ್ರ ಅಲ್ಲ, ನಾನು ಗುತ್ತಿನ ಮನೆಯವ. ನನ್ನತ್ರ ಬಂದು ಏಕವಚನದಲ್ಲಿ ಮಾತಾಡ್ತೀಯನಾ ಪಿಸು? ಡೀಕಯ್ಯ!... ಸಾದಾ ಸೀದಾ ಕೇಳಿದ್ರೆ ಜಾಗದ ಬದ್ಲು ಅಷ್ಟಿಷ್ಟು ಕೊಟ್ಟು ಕಳಿಸ್ತಿದ್ದೆ. ಆದ್ರೆ ನಿನ್ನ ಮಗ ಈಗ ಮಾತಾಡಿದ ನೋಡು... ಇದು ಭಾರೀ ದೊಡ್ಡ ಅಧಿಕ ಪ್ರಸಂಗ. ಇನ್ನು ನಾನೂ ಬಿಟ್ಟುಕೊಡುವ ಮಗ ಅಲ್ಲ, ಎಂತ ಬೇಕಾದ್ರೂ ಮಾಡು" ಅಂತ ಗರ್ವದಿಂದ ಹೇಳಿದ್ರು.

ಸುರೇಶ ಯಾವ್ದೋ ಸಿಟ್ಟಲ್ಲಿ ಕೋರ್ಟು ಲಂಗು ಲಸ್ಕೂಂತ ಹೇಳಿದ್ದ. ಆದ್ರೆ ಅವ್ನಿಗೂ ಕೈಯಲ್ಲಿ ನಯಾ ಪೈಸೆ ಇರ್ಲಿಲ್ಲ. ಪೊಲೀಸ್ ಸ್ಟೇಷನ್ ಹತ್ತಿದ್ದಕ್ಕೆ ಇನ್ಸೆಪೆಕ್ಟರ್ ನಾಗ್ರಾಜ, "ಹೆಗ್ಡೇರ ಮೇಲೆ ಕಂಪ್ಲೇಂಟ್ ಕೊಡ್ಲಿಕ್ಕೆ ಬಂದಿದ್ದೀಯಾ ರಂಡ್ಯಾ ಮಗ್ನೆ!" ಅಂತ ಸುರೇಶನಿಗೆ ಬೈದು ಕಳಿಸಿದ. ಅವ್ನೊಟ್ಟಿಗೆ ಬಂದಿದ್ದ ಕಾಲೊನಿಯವ್ರು ಮರುದಿವ್ಸ ಹೆಗ್ಡೇರ ಗುತ್ತಿನ ಮನೆಗೆ ತಾವೇ ವಾಲಿಂಟರಿಯಾಗಿ ಬಂದು, ಎಲ್ರೂ ಅವರ ಕಾಲಿಗೆ

ರಾತ್ರಿ ಹತ್ತು ಗಂಟೆಯ ಹೊತ್ತು. ಅರ್ದಳ ಹಾಕ್ಕೊಂಡು ಶೃಂಗಾರ ಮಾಡ್ಕೊಂಡು ಭೂತ ಎದ್ದು ನಿಂತಿತು. ಗಗ್ಗರ ನೆಚ್ಚಿ ಎಲ್ಲ ಆಯ್ತು. ನೂರಾರು ಜನ ಸೇರಿದ್ರು. ಆವೇಶ ಬಂದ ಭೂತಕ್ಕೆ ಮಣೆ ಮತ್ತು ಸುಭಾಸ್ ಹೆಗ್ಡೇರು ಅರ್ಪಿಸಿದ ಬೆಳ್ಳಿಯ ಕಡ್ತಲೆಯನ್ನು ಕೊಟ್ರು, ಭೂತ ವಾದ್ಯಕ್ಕೆ ಭಾರೀ ಆವೇಶದಲ್ಲಿ ಕುಣೇಲಿಕ್ಕೆ ಸುರು ಮಾಡಿತು. ಮಣೆ ಬದಿಗಿಟ್ಟು ದೀವಟಿಗೆಯನ್ನು ಎದೆ, ಮುಖದ ಹತ್ರ ಎಲ್ಲ ತಂದುಕೊಂಡು ಕಾರ್ಣಿಕ ತೋರ್ಸಿತು.

ಆಗ ಹೆಗ್ಡೇರು, "ವರ್ಷಕ್ಕೊಂದು ಸಲ ಮಾಡುವ ಸೇವೆ. ನಾವು ಮನುಷ್ಯ ಮಾತ್ರ, ಏನಿದ್ರೂ ವಿಷ ಇಟ್ಟುಕೊಂಡು ಅಮೃತ ಕೊಡ್ಬೇಕು" ಅಂತ ಹೇಳಿದ್ರು. ಭೂತ ಮತ್ತೆ ಕುಣೇಲಿಕ್ಕೆ ಸುರು ಮಾಡಿತು. ಬೆಳ್ಳಿಯ ಕಡ್ತಲೆಯನ್ನು ಎದೆಗೆ ಒತ್ತಿ ಹಿಡ್ಕೊಂಡು ಮತ್ತೆ ಹೆಗ್ಡೇರ ಹತ್ರ ಬಂತು. ಅವ್ರು ಆ ಕಡ್ತಲೆಯನ್ನು ಸರಿಯಾಗಿ ಹಿಡ್ಸಿ ಹಿಂದೆ ಹೇಳಿದ ಹಾಗೆಯೇ ಹೇಳಿಕ್ಕಿತ್ತು. ಆದ್ರೆ ಆ ಕಡ್ತಲೆಯನ್ನು ಎಳೆಯುವ ಹಾಗೆ ಮಾಡಿ, ಕೂಡ್ಲೆ ಎದೆಗೆ ಒತ್ತಿಬಿಟ್ರು. ವಾದ್ಯ, ಗರ್ನಾಲುಗಳ ಗಲಾಟೆಯಲ್ಲಿ ಯಾರಿಗೂ ಎಂಥದೂ ಗೊತ್ತಾಗ್ಲಿಲ್ಲ. ರಕ್ತ ಜಿಲ್ ಅಂತ ಚಿಮ್ಮಿ ಜುಮಾದಿ ಅಲಿಯಾಸ್ ಸುರೇಶ್ ಬಿದ್ದವ ಮತ್ತೆ ಏಳ್ಳೇ ಇಲ್ಲ.

ಬಿದ್ದು, ''ದಣಿಗಳೆ... ನಮ್ಮನ್ನು ಮಾಫು ಮಾಡಿ... ನಮ್ಗೆ ಗೊತ್ತಿರ್ಲಿಲ್ಲ, ಸುರೇಸ ನಮ್ಗೆ ನಿನ್ನೆ ಫುಲ್ ಕುಡ್ಸಿ ಕರ್ಕೊಂಡು ಬಂದಿದ್ದ. ಟೈಟಾಗಿದ್ದ ನಮ್ಗೆ ಯಾರ್ದು ತಪ್ಪು ಯಾರ್ದು ಸರಿ ಅಂತ ಗೊತ್ತಿರಲಿಲ್ಲ, ಎಂತಕ್ಕೇತ ಗೊತ್ತಿಲ್ಲ. ಕುಡ್ದಾಗ ನೀವೇ ನಮ್ಗೆ ಕಷ್ಟ ಕೊಡುವವ್ರೂಂತ ಅನ್ಸಿಸ್ತದೆ. ಕುಡಿಯದೇ ಇದ್ದಾಗ ನೀವೇ ನಮ್ಮ ದೇವ್ರೂಂತ ಅನ್ನಿಸ್ತದೆ. ನಾವು ನಿಮ್ಮ ವಿರುದ್ಧ ಕೋರ್ಟು ಗೀರ್ಟೂಂತ ಹೋಗುವುದಿಲ್ಲ. ಯಾವಾಗ್ಲೂ ಕೆಲ್ಸ ಕೊಡುವ ಹಾಗೆ ನಿಮ್ಮ ತೋಟದಲ್ಲಿ ಕೆಲ್ಸ ಕೊಡ್ತಾ ಇರಿ'' ಅಂತ ದಮ್ಮಯ್ಯ ಹಾಕಿದ್ರು. ಹೆಗ್ಡೇರು ಸಿಕ್ಕಿದ್ದೇ ಚಾನ್ಸ್ ಅಂತ ಎಣಿಸಿ, ''ಅದು ಹ್ಯಾಗೆ ಆಗ್ತದೆ ? ನಿಮ್ಮ ಬದ್ಲು ಬಿಜಾಪುರ್ದಿಂದ ಒಂದಷ್ಟು ಜನ ಕೂಲಿ ಕೆಲ್ಸ ಕೇಳಿಕೊಂಡು ಬಂದಿದ್ದಾರೆ. ಅವ್ರಿಗೆ ಕೂಲಿ ನಿಮ್ಗಿಂತ ಕಡಿಮೆ ಕೊಟ್ರೆ ಆಯ್ತು. ಗಂಡಸ್ರಿಗೆ ಮೂವತ್ತು, ಹೆಂಗಸ್ರಿಗೆ ಹದ್ನೈದು. ನಿಮ್ಗೆ ರಂಡ್ಯಾಮಕ್ಳಿಗೆ ಒಬ್ಬೊಬ್ರಿಗೆ ನೂರು-ನೂರೈವತ್ತು ಕೊಟ್ರೂ ಬರುದು ಬೆಳಿಗ್ಗೆ ಹತ್ತು ಗಂಟೆ ಆದ್ಮೇಲೆ. ಹೋಗುದು ಸಂಜೆ ನಾಲ್ಕು ಗಂಟೆಗೇ. ಮಧ್ಯದಲ್ಲಿ ನಿಮ್ಮ ಕಪ್ಪಲ್ ತುಂಬಿಸ್ಲಿಕ್ಕೆ ಚಾ, ತಿಂಡಿ, ಊಟ, ಬೀಡ, ಬೀಡಿ ಎಲ್ಲ ಆಗ್ಬೇಕು. ಅವ್ರೆಲ್ಲ ಹಾಗಿಲ್ಲಂತೆ. ಬೆಳಿಗ್ಗೆ ಏಳಕ್ಕೆ ಬಂದ್ರೆ ಹೊತ್ತು ಕಂತುವ ತಂಕ ತೋಟದಲ್ಲಿ ಇರ್ತೇವೇಂತ ಹೇಳಿದ್ದಾರೆ. ಊಟ, ತಿಂಡಿ, ಚಾ ಅಂತ ಕೇಳೂದೇ ಇಲ್ಲಂತೆ'' ಅಂತ ಬಾಂಬ್ ಬಿಟ್ರು. ಕಾಲೊನಿಯವ್ರಿಗೆಲ್ಲ ಮಂಡೆ ಬಿಸೀಽಽ ಆಯ್ತು. ''ಅಯ್ಯಯ್ಯೊ ದಮ್ಮಯ್ಯ ! ಆ ಬಿಜಾಪುರದವ್ರನ್ನು ಸೇರಿಸ್ಕೊಳ್ಬೇಡಿ, ನಮ್ಮ ಬಾಯಿಗೆ ಮಣ್ಣು ಹಾಕ್ಬೇಡಿ. ಅವ್ರಿಗೆ ಎಷ್ಟು ಕೊಡ್ತೀರಾ ಅಷ್ಟೇ ನಮ್ಗೂ ಕೊಡಿ'' ಅಂತ ಕೇಳಿದ್ರು. ಹೆಗ್ಡೇರಿಗೂ ಇದೇ ಬೇಕಾಗಿತ್ತು. ತನ್ನ ಕಾಲೋನಿಯವ್ರು ಗುತ್ತಿನ ಮನೆಗೆ ಹೋಗಿ ಇಷ್ಟೆಲ್ಲ ಮಾತಾಡಿ ಬಂದಿದ್ದಾರೆ ಅಂತ ಗೊತ್ತಾದ ಮೇಲೆ ಸುರೇಶ, ಡೀಕಯ್ಯ ಇಬ್ರೂ ಮಂಡೆ ಬಿಸಿ ಮಾಡಿಕೊಂಡ್ರು, ಏನೂ ಮಾಡ್ಲಿಕ್ಕಾಗದೆ ಒದ್ದಾಡಿದ್ರು. ಸುರೇಶ ಮಂಗ್ಳೂರಿಗೆ ಹೋಗಿ ಅಂದೆಂಥದೋ ಸಂಘ ಸಂಸ್ಥೆ ಅಂತ ಹೇಳಿಕೊಂಡು ತಿರ್ಗಾಡಿಕೊಂಡಿದ್ದ. ಜುಬ್ಬಾ, ಪೈಜಾಮ ಹೆಗಲಲ್ಲಿ ಜೋಳಿಗೆ ಹಾಕ್ಕೊಂಡು ಆಗಾಗ ಎರ್ಮಾಳಿಗೂ ಬರ್ತಿದ್ದ. ಪೇಪರಲ್ಲಿ ಅವ್ನ ಫೋಟೋ ಎಲ್ಲ ಆಗಾಗ ಬರ್ತಿತ್ತು. ಡೀಕಯ್ಯನಿಗೆ ಮಾತ್ರ ಬೇರೆ ಕೆಲಸ ಇರ್ಲಿಲ್ಲ. ಮಂಡೆ ಬಿಸಿಯಾದಾಗ ಸರೀ ಟೈಟ್ಟಾಗಿ ಬಂದು ಗುತ್ತಿನ ಮನೆಯ ಅಂಗಳದಲ್ಲಿ ನಿಂತು ಬಾಯಿಗೆ ಬಂದ ಹಾಗೆ ಹೆಗ್ಡೇರಿಗೆ ಬೈಯ್ಯುದು, ಇದಿಷ್ಟೇ ಅವ್ನ ಕೆಲ್ಸ ಆಗಿತ್ತು.

ಇದೆಲ್ಲ ಆಗಿ ಕೆಲವು ವರ್ಷ ಆಗಿತ್ತು. ಅವತ್ತೂ ಸಾ ಬಂದಿದ್ದ ಡೀಕಯ್ಯ ಹಾಗೇ ಮಾಡಿದ್ದ. ಆದ್ರೆ ಜುಮಾದಿಯ ವಿಷಯ ಹೇಳಿದ್ದು ಅವ್ರಿಗೆ ಮಂಡೆ ಬಿಸಿ ಆಯ್ತು. ಜುಮಾದಿಯ ಕೋಲ ನಡ್ಸುವವ್ರೇ ಅವ್ರು. ಗುತ್ತಿನವ್ರು ಪ್ರಸಾದ ತಕ್ಕೊಳುದು ಫಸ್ಟ್, ನಂತ್ರ ಊರಿನವ್ರು. ಆವತ್ತು ಡೀಕಯ್ಯ ಜುಮಾದಿಯ ಹತ್ರ ಪ್ರಶ್ನೆ ಕೇಳಿದ್ರೆ ? ಭೂತ ಆವೇಶದಲ್ಲಿ, ''ಡೀಕಯ್ಯ... ನಿಂಗೆ ಅನ್ಯಾಯ ಆಗಿದ್ದು ಸತ್ಯ. ನಿಂಗೆ ಯಾರು ಅನ್ಯಾಯ ಮಾಡಿದ್ದಾರೋ ಅವ್ರು ಮುಂದಿನ ವರ್ಷದ ಕೋಲ ಆಗೂದ್ರೊಳ್ಗೆ ರಕ್ತಕಾರಿ ಸಾಯ್ತಾರೆ'' ಅಂತ ನುಡಿಕಟ್ಟು ಕೊಟ್ರೆ ? ಸಾಲದ್ದಕ್ಕೆ ಪ್ರಶ್ನೆಯನ್ನು ಹೇಳಿ ಕೊಡುವವ್ನೇ ತಾನು. ತಾನೇ ಅಪರಾಧಿ ಜಾಗದಲ್ಲಿ ನಿಲ್ಲುದು ತುಂಬ ಸುಮಾರು ಅಲ್ಲವಾ ? ಹೀಗೆಲ್ಲ ಅವ್ರು ಎಣಿಸ್ತಾ ಮಲ್ಗಿದ್ರು, ಇಡೀ ರಾತ್ರಿ ನಿದ್ದೆ ಬರ್ಲಿಲ್ಲ ಅವ್ರಿಗೆ.

ಬೆಳಿಗ್ಗೆದ್ದು ಪೇಪರು ನೋಡ್ತಾರೆ, 'ಎರ್ಮಾಳಿನ ಮಾರಿ ಬಲಿಗೆ ವಿರೋಧ' ಅಂತ ಹೆಡ್ಡಿಂಗು ಕಂಡಿತು. ಮಂಗ್ಳೂರಲ್ಲಿ ಪ್ರಾಣಿ ದಯಾ ಸಂಘ ಅಂತ ಬೋರ್ಡು ಹಾಕಿಕೊಂಡು ಸುರೇಶ ಒಂದಷ್ಟು ಜನ್ರನ್ನು ಕಟ್ಟಿಕೊಂಡು ಕೂತ. ಫೋಟೋವೂ ಬಂದಿತ್ತು ಅದ್ರಲ್ಲಿ. ಓ... ಈ ಬೋಳಿಮಗನ ಕಿತಾಪತಿ ಇದು ಅಂತ ಗೊತ್ತಾಗಿ ಮತ್ತಷ್ಟು ಪಿಸ್ರು ಏರಿತು. ಎಂತಕ್ಕೇಂದ್ರೆ ಜುಮಾದಿ ಕೋಲದ ಮರುದಿವ್ಸ ಮಾರಿ ಗುಡಿಯಲ್ಲಿ ಮಾರಿ ನಡಿಯುದು. ಪ್ರತೀ ವರ್ಷ ಕೋಳಿ, ಕುರಿ, ಆಡು ಬಲಿ ಕೊಟ್ರೆ ಈ ವರ್ಷ ಹೆಗ್ಡೇರು ಪೆಷಲ್ಲಾಗಿ ತಮ್ಮ ಕೋಣವನ್ನು ಬಲಿ ಕೊಡುದು ಅಂತ ತೀರ್ಮಾನ ಆಗಿತ್ತು. ಬೊಂಬೈಯಲ್ಲಿರುವ ಅವ್ರ ಮಗ್ಳ ಡೆಲಿವರಿ ಯಾವ್ದೇ ತೊಂದ್ರೆ ಇಲ್ದೆ ಆದ್ರೆ ಮತ್ತು ಹುಟ್ಟುವ ಮಗು ಗಂಡಾದ್ರೆ ಮಾರಿಗೆ ಈ ವರ್ಷ ಕೋಣನ ಬಲಿ ಕೊಡ್ತೇನೆ ಅಂತ ಹರ್ಕೆ ಹೇಳಿಕೊಂಡಿದ್ರು. ಹೆಗ್ಡೇರು ಹೇಳಿಕೊಂಡ ಹಾಗೇ ಆಗಿತ್ತು. ಆದ್ರಿಂದ ಈ ಸಾರಿ ಕೋಲ, ಅದ್ರ ಮರುದಿವ್ಸ ಮಾರಿ ಎರ್ಡೂ ಭಾರೀ ರೈಸ್ತದೇಂತ ಎಲ್ರೂ ಲೆಕ್ಕ ಹಾಕಿದ್ರು. ಕೋಲ ರೈಸ್ಲಿಕ್ಕೆ ಕಾರ್ಣ ಅಂದ್ರೆ, ಹೆಗ್ಡೇರ ತಮ್ಮ ಸುಭಾಶ್ಚಂದ್ರ ಹೆಗ್ಡೇರು ಈ ಸರ್ತಿ ಜುಮಾದಿಗೆ ಬೆಳ್ಳಿದ್ದು ಕಡ್ತಲೆ ಒಪ್ಪಿಸುದು ಅಂತ ಪ್ರಚಾರ ಆಗಿತ್ತು. ಸುಭಾಶ್ಚಂದ್ರ ಹೆಗ್ಡೇರು ಬೊಂಬೈಯಲ್ಲಿ ನಾಲ್ಕೈದು ಬಾರ್ ಅಂಡ್ ರೆಸ್ಟೋರಾಂಟ್ ಇಟ್ಟುಕೊಂಡಿದ್ರು. ಪ್ರತೀ ವರ್ಷ ಕೋಲದ ಟೈಮಲ್ಲಿ ಊರಿಗೆ ಬರ್ತಿದ್ರು. ಒಂದು ಸರ್ತಿ ಜುಮಾದಿಗೆ ಬೆಳ್ಳಿದು ಅಣಿ ಮಾಡ್ಸಿದ್ರು. ಮತ್ತೊಂದು ಸರ್ತಿ ಬಂಗಾರ್ದು ಮುಗ ಮಾಡ್ಸಿದ್ರು. ''ಈ ಸರ್ತಿ ಬೆಳ್ಳಿದ್ದು ಕಡ್ತಲೆ ಕೊಡ್ತಾರಂತೆ'' ಅಂತ ಮೊದ್ಲೇ ಪಬ್ಲಿಕ್ ಮಾಡ್ಸಿದ್ರು ದೊಡ್ಡ ಹೆಗ್ಡೇರು. ಸುಭಾಶ್ಚಂದ್ರ ಹೆಗ್ಡೇರನ್ನು ಎಲ್ರೂ ಊರಲ್ಲಿ ಸುಭಾಸ್ ಗುರ್ಕಾರ್ರು ಅಂತ್ಲೇ ಕರೀತಾ ಇದ್ದದ್ದು. ಸ್ವಲ್ಪ ಸಲಿಗೆ ಇದ್ದ ಆ ಊರಿನ ಜಾತಿ ಮಕ್ಳು ಸುಭಾಸಣ್ಣೆ ಅಂತ ಕರೀತಾ ಇದ್ರು. ಇರ್ಲಿ, ಈಗ ಮುಖ್ಯ ವಿಷಯಕ್ಕೆ ಬರುವ. ಪೇಪರಲ್ಲಿ ಸುರೇಶನ ಪ್ರತಿಭಟನೆಯ ವಿಷಯ ಓದಿದವ್ರೇ ಶೆಟ್ರಿಗೆ ಮಂಡೆ ಬಿಸೀಽಽಽ ಆಯ್ತು. ಎಂತ ಮಾಡುದು ? ಅಂತ ಎಣಿಸಿದ್ರು. ಎಂತದಕ್ಕೂ ಒಂದು ಸರ್ತಿ ದೇವಸ್ಥಾನ ವಾಸ್ದೇವ ಭಟ್ರತ್ರ ಕೇಳುವಾ ಅಂತ ಡಿಸೈಡ್ ಮಾಡಿದ್ರು.

ವಾಸ್ದೇವ ಭಟ್ರು ಇಡೀ ಊರಿಗೆ ಒಬ್ರೇ ಭಟ್ರು, ಅವ್ರನ್ನು ಎಲ್ರೂ ಹಿಂದಿನಿಂದ ಹೂಸ್ದೇವ ಭಟ್ರು ಅಂತ ಕರೀತಿದ್ರು ! ಯಾಕೆಂದ್ರೆ ಅವ್ರು ಪೂಜೆಗೆ ಹೆಚ್ಚು ಹೋಗ್ತಾ ಇದ್ದದ್ದು ಶೂದ್ರರ ಮನೆಗೆ. ತನ್ಗೆ ಯಾವುದು ಇಷ್ಟವಾ ಅದನ್ನೇ ದೇವ್ರಿಗೂ ಇಷ್ಟಾಂತ ತಾನು ಮನೆಗೆ ಹೋಗುವ ಪೂಜೆಯವ್ರನ್ನು ನಂಬಿಸ್ತಿದ್ರು. ತನ್ಗೆ ಗೊತ್ತಿರುವ ಅಡ್ಗೆಯವ್ರನ್ನು ಕರ್ಕೊಂಡೋಗಿ ಅವ್ರ ಮನೆಗಳಲ್ಲಿ ಕಡ್ಲೆ ಮಡ್ಡಿ, ಉದ್ದಿನ ವಡೆ, ಗಸಗಸೆ ಹೋಳಿಗೆ, ಕಡ್ಲೆ ಹೋಳಿಗೆ, ಹೆಸ್ರ ಬೇಳೆ ಪಾಯ್ಸ ಅಂತೆಲ್ಲ ಮಾಡ್ಸಿಕೊಂಡು ಸರೀ ತಿಂತಿದ್ರು. ಆಮೇಲೆ ಡರ್ರೂಂಽಽಽ ಡುಸ್ಕುಂ ಅಂತ ಹೂಸು ಬಿಡ್ತಿದ್ರು. ಎರ್ಮಾಳು ಮಹಾಲಿಂಗೇಶ್ವರನ ಪೂಜೆ, ಅದ್ರ ಎದ್ರಿಗೆ ಇದ್ದ ಮಾರಿಗುಡಿಯ ಪೂಜೆ ಎರ್ಡನ್ನೂ ಲಪಟಾಯಿಸಿಕೊಂಡಿದ್ರು. ಮಾಲಿಂಗೇಶ್ವರನ ಪೂಜೆ ಅವ್ರಿಗೆ ಪಾರಂಪರ್ಯದಿಂದ ಬಂದದ್ದು.



ಆದ್ರೆ ಮಾರಿಗುಡಿಯ ಪೂಜೆ ಯಾರು ಮಾಡುದು ಅಂತ ಒಂದು ಕಾಲದಲ್ಲಿ ಊರಲ್ಲಿ ಪ್ರಶ್ನೆ ಬಂದಾಗ ಭಟ್ರು, ''ಗುತ್ತಿನ ಮನೆಯವ್ರು ನೋಡಿಕೊಳ್ಳುವ ಮಾರಿಗುಡಿಯ ದೇವಿಗೆ ಪೂಜೆಯಲ್ಲಿ ಒಂಚೂರೂ ದೋಷ ಬರ್ಬಾರ್ದು. ಅವ್ಳು ಬರೀ ದೇವಿಯಲ್ಲ ನನ್ನ ಹೆಂಡ್ತಿ ಅಂತಸಾ ಆ ಮಾಲಿಂಗೇಶ್ವರನೇ ದೊಡ್ಡ ಹೆಗ್ಡೇರ ಕನಸಲ್ಲಿ ಬಂದು ಹೇಳಿದ್ದಾನಂತೆ. ಅದು ಮಾತ್ರ ಅಲ್ಲ, ಪೂಜೆಯನ್ನು ಬ್ರಾಮಣ್ರೇ ಮಾಡ್ಬೇಕು ಅಂತಸಾ ಹೇಳಿದ್ದಾನಂತೆ. ನೋಡಿ ಆ ಮಾಲಿಂಗೇಶ್ವರಿಗೂ ಗೊತ್ತುಂಟು. ಎಂತಾದ್ರೂ ಮಂತ್ರ ತಂತ್ರ ಅಂತ ಗೊತ್ತಿದ್ರೆ ಬ್ರಾಮಣ್ರಿಗೆ ಮಾತ್ರ ಅಂತ. ಅಲ್ವಾ ಹೆಗ್ಡೆಯವ್ರೆ ?'' ಅಂತ ಊರಿನ ಜನ್ರ ಮುಂದೆ ಕೇಳಿದ್ರು. ಅವ್ರು ತಲೆ ಅಲ್ಲಾಡಿಸಿದ್ರು. ಊರಿನವ್ರು ಮತ್ತೆಂತದೂ ಮಾತಾಡ್ಲಿಲ್ಲ. ಮಾಲಿಂಗೇಶ್ವರ್ನ ದೇವಸ್ಥಾನಕ್ಕೆ ಸೋಮವಾರ, ಶನಿವಾರ ಬರುವ ಭಕ್ತರಲ್ಲಿ ಬೇರೆ ಊರುಗಳ ಬ್ರಾಮಣ್ರೇ ಜಾಸ್ತಿ. ಅವ್ರು ಹಾಕ್ತಿದ್ದ ತಟ್ಟೆ ದಕ್ಷಿಣೆ ಐವತ್ತು ಪೈಸೆ, ಹೆಚ್ಚೊಂದ್ರೆ ಒಂದ್ರುಪಾಯಿ. ಆದ್ರೆ ಮಾರಿ ಗುಡಿಗೆ ಬರ್ತಿದ್ದವ್ರು ಊರಿನ ಶೂದ್ರರು. ಭಟ್ರಿಗೆ ಹೆದ್ರಿಯೋ, ದೇವಿಗೆ ಹೆದ್ರಿಯೋ ಅಥ್ವಾ ನಮ್ಮ ಹತ್ರವೂ ದುಡ್ಡುಂಟೂಂತ ತೋರಿಸ್ಲಿಕ್ಕೋ ಅಂತೂ ಹತ್ರುಪಾಯಿ, ಇಪ್ಪತ್ರುಪಾಯಿಗಿಂತ ಕಡಿಮೆ ಒಬ್ಬೊಬ್ರು ತಟ್ಟೆಗೆ ಹಾಕ್ತಿರ್ಲಿಲ್ಲ. ಹಾಗಾಗಿ ಭಟ್ರಿಗೆ ಮಂಗ್ಳವಾರ, ಶುಕ್ರವಾರ, ಅಮಾವಾಸ್ಯೆ, ಸಂಕ್ರಾಂತಿ ಇಂಥ ದಿವ್ಸ ಭಾರೀ ಕಲೆಕ್ಷನ್ ಆಗ್ತಿತ್ತು. ಅಂಥ ಭಟ್ರು ದೇವಸ್ಥಾನದಲ್ಲೂ ಸುಮ್ನೆ ಇರ್ತಿರ್ಲಿಲ್ಲ. ಯಾರಾದ್ರೂ ಎಂತಾದ್ರೂ ಬಲಿಮೆ ಕೇಳ್ಳಿಕೆ

ಬಂದ್ರೆ ಅವ್ರು ಹೇಳುದನ್ನೆಲ್ಲ ಕೇಳಿ ನಂತ್ರ ''ಡರೋಂSSS ಢುಸ್ಕ್ಯಂ'' ಅಂತ ಹೂಸು ಬಿಟ್ಟು, ''ನಿಮ್ಗೆ ಗ್ರಾಚಾರ ಉಂಟೂ'' ಅಂತ ಹೇಳ್ತಿದ್ರು. ಹಾಗಾಗಿ ಎಲ್ರೂ ಅವ್ರನ್ನ ಹೂಸ್ದೇವ ಭಟ್ರು ಅಂತ್ಲೇ ಹಿಂದಿನಿಂದ ಕರೀತಿದ್ರು, ಅಂಥ ಭಟ್ರತ್ರ ಹೆಗ್ಡೇರು ಬಂದ್ರು.

ಭಟ್ರು ಎಲ್ಲ ವಿಷಯ ಕೇಳಿದ್ರು. ಅವ್ರಿಗೂ ಸುರೇಶನ ಮುಖಾಂತರ ಮಾರಿಗುಡಿಯಲ್ಲಿ ಶುಕ್ರವಾರ, ಸಂಕ್ರಾಂತಿ, ಅಮಾವಾಸ್ಯೆ ಇಂಥ ದಿವ್ಸಗಳಲ್ಲಿ ನಡೀತಿದ್ದ ಪ್ರಾಣಿಬಲಿ ನಿಂತ್ರೆ ಒಳ್ಳೇದು ಅಂತ ಅನ್ನಿಸಿತು. ಆದ್ರೆ ಹೆಗ್ಡೇರನ್ನು ಎದ್ರು ಹಾಕೊಂಡ್ರೆ ಬದುಕ್ಲಿಕ್ಕೆ ಕಷ್ಟ ಅಂತ ಎಣಿಸಿದ್ರು. 'ಕಚಕ್ ಕಚಕ್' ಅಂತ ಕೋಳಿ, ಕುರಿಗಳ ಕುತ್ತಿಗೆ ಕಡಿಯುದು, 'ಫಚಲ್' ಅಂತ ರಕ್ತ ಹಾರುದು ಎಲ್ಲ ಅವ್ರಿಗೆ ನೋಡ್ಲಿಕ್ಕೆ ಆಗ್ತಿರ್‍ಲಿಲ್ಲ. ಈಗ ಹೆಗ್ಡೇರು, ''ಭಟ್ರೇ ಎಂತ ಮಾಡುದು ?'' ಅಂತ ಕೇಳ್ತಿದ್ದಾರೆ. ಭಟ್ರು ಸ್ವಲ್ಪ ಹೊತ್ತು ಯೋಚನೆ ಮಾಡಿದ್ರು. ಕೂತಲ್ಲೆ ಕುಂಡೆ ಒಂದು ಸೈಡಿಗೆ ಎಬ್ಬಿಸಿದ್ರು. ಕೂಡ್ಲೆ ಹೆಗ್ಡೇರಿಗೆ ಗೊತ್ತಾಯ್ತು ಭಟ್ಟ ಹೂಸಿಗೆ ರೆಡಿಯಾದ ಅಂತ. ಕೂಡ್ಲೆ ಅವ್ರು ಮೂಗಿಗೆ ಟವೆಲ್ ಅಡ್ಡ ಹಿಡ್ಕೊಂಡು ಎರಡ್ಡಿ ಹಿಂದೆ ಹೋದ್ರು. ಈ ಸಾರಿ ಸೌಂಡಿಲ್ಲದೆ ಬಿಟ್ಟು ಭಟ್ರು, ''ಹೆಗ್ಡೇರೆ... ಸುಭಾಸಣ್ಣ ಬರುದು ಯಾವಾಗಾ ?'' ಅಂತ ಕೇಳಿದ್ರು.

''ಕೋಲಕ್ಕೆ ಎರಡ್ಡು ದಿನ ಇರುವಾಗ ಬರ್ತೇನೆ ಅಂತ ಹೇಳಿದ್ದಾನೆ. ಎಂತಕ್ಕೆ ಈಗ ಅವ್ನು ?''

''ಅಲ್ಲ... ಅವ್ರನ್ನು ಇನ್ನೂ ಸ್ವಲ್ಪ ಮುಂಚೆಯೇ ಬರ್‍ಲಿಕ್ಕೆ ಹೇಳಿ. ಸುರೇಶನನ್ನು ಊರಿಗೆ ಬರ್‍ಲಿಕ್ಕೆ ಹೇಳಿ ಕಳಿಸುವಾ. ಎಲ್ರೂ ಒಟ್ಟಾಗಿ ಒಂದು ಮೀಟಿಂಗ್ ಮಾಡುವ. ಸುರೇಶನಿಗೆ, ಅವ್ನ ಅಪ್ಪ ಡೀಕಯ್ಯನಿಗೆ ಎಂತಾದ್ರೂ ಶಾಂತಿ ಮಾಡುವ.''

''ಭಟ್ರೇ... ಆ ಪಾಣಾರ, ನಲಿಕೆ, ಪಂಬದವರಿಗೆಲ್ಲ ಮರ್ಲು ಅಂದ್ರೆ ನಿಮ್ಗೂ ಮರ್ಲಾ ಮಾರ್‍ರೆ ? ಅಲ್ಲ ಹೋಗಿ ಹೋಗಿ ಗುತ್ತಿನ ಗುರ್ಕಾರ, ಬಂಟನ ಮನೆಯ ನಾನು ಅವ್ರತ್ರೆಲ್ಲ ತಾಜ ಮಾಡಿಕೊಳ್ಳುದಾ ?''

''ಅಲ್ಲ ಮಾರ್‍ರೆ... ಪೋಯ್ ಹೆಗ್ಡೇರೆ... ಗರ್ವ ಮಾಡ್ಕೊಳ್ಬೇಡಿ ಮಾರ್‍ರೆ... ನೀವು ಇಲ್ಲಿ ಗುತ್ತಿನವ್ರಾಗಿರ್‍ಬೌದು. ಆದ್ರೆ ಸುರೇಶ ಡಿ.ಸಿ. ಗೀಸೀಂತ ಹೋಗಿದ್ದಾನಂತೆ ಮಾರ್‍ರೆ... ನಿಮ್ಗೆ ಗೊತ್ತಿಲ್ಲ ಮಾರ್‍ರೆ, ಈಗ ಎಲ್ಲ ಕಾನೂನು ಅವ್ರ ಪರವಾಗಿಯೇ ಉಂಟು ಮಾರ್‍ರೆ... ಈ ಮಾತ್ರ ಅಲ್ಲ, ನಿಮ್ಮ ಟೈಂ ಸರಿ ಇಲ್ಲ ಈಗ. ಕುಜದೋಷ ಉಂಟು. ಶನಿ ವಕ್ರವಾಗಿ ನೋಡ್ತಾ ಇದ್ದಾನೆ. ಅದೆಲ್ಲ ಇರ್‍ಲಿ ಬೇಗ ಫೋನ್ ಮಾಡಿ ಸುಭಾಸಣ್ಣನನ್ನು ಬರ್‍ಲಿಕ್ಕೆ ಹೇಳಿ. ಎಲ್ರನ್ನೂ ಕರ್‍ಸಿ ಪಂಚಾತಿಗೆ ಮಾಡುವ. ನಾನು ಹೇಳಿದ ಹಾಗೆ ಮಾಡಿ ನೀವು. ಎಲ್ಲ ಒಳ್ಳೇದಾಗ್ತದೆ'' ಅಂತ ಭಟ್ರು ಹೇಳಿದ್ರು. ಹೆಗ್ಡೇರಿಗೆ ಭಟ್ರ ಗುಟ್ಟೇನು ಅಂತ ರಹಸ್ಯವಾಗಿ ಅವ್ರು ಹೇಳಿದ್ಮೇಲೆ ಗೊತ್ತಾಯ್ತು. ಖುಷಿಯಿಂದ ಮನೆಗೆ ಹೋಗಿ ಸುಭಾಸನಿಗೆ, ''ಕೂಡ್ಲೆ ಹೊರ್‍ಟು ಬಾ,'' ವಿಷಯ ಹೀಗೆ ಹೀಗೆ ಅಂತ ಫೋನು ಮಾಡಿದ್ರು. ಅವ್ರು ಮರು ದಿವ್ಸವೇ ವಿಮಾನದಲ್ಲಿ ಬಂದೇಬಿಟ್ರು.

ಆ ದಿವ್ಸ ಮಾರಿಗುಡಿಯಲ್ಲಿ ದೊಡ್ಡ ಮೀಟಿಂಗು ನಡೀತು. ಸುರೇಶ, ಡೀಕಯ್ಯ ಅವ್ನ ಕಾಲೊನಿಯವ್ರು, ವಾಸ್ದೇವ ಭಟ್ರು, ಹೆಗ್ಡೇರು ಅಣ್ಣ-ತಮ್ಮ ಅವ್ರ ಜಾತಿಯ ಉಳ್ಳ ಲೀಡರ್‌ಗಳು ಹೀಗೆ ಎಲ್ಲ ಒಟ್ಟಗಿದ್ರು. ಗುತ್ತಿನ ಹೆಗ್ಡೇರ ಪರವಾಗಿ ಭಟ್ರೇ ಮಾತಾಡ್ಲಿಕ್ಕೆ ಸುರು ಮಾಡಿದ್ರು. ''ಡೀಕಯ್ಯ... ನಿನ್ನ ಮಗ ಸುರೇಶ ಬಂದಿದ್ದಾನೆ. ನಿಂದು ತುಂಬ ವರ್ಷದಿಂದ್ಲೂ ದೊಡ್ಡ ಹೆಗ್ಗಡ್ರು ನಿನ್ನ ಜಾಗ ಬಿಳ್ಗೆ ಹಾಕಿದ್ದಾರೆ ಅಂತ ಗಲಾಟೆ ಉಂಟು. ಈಗ ನಿನ್ನ ಮಗ ಈ ವರ್ಷ ಮಾರಿಗೆ ಪ್ರಾಣಿ ಬಲಿ ನಡೀಕೂಡ್ದೂಂತ ಮಾಡಿಸ್ತಾನೆ. ತಪ್ಪಲ್ಲವಾನಾ ಇದು ? ಮಾರಿಗೆ ಬಲಿ ಬೇಡಾಂದ್ರೆ ಸಿಟ್ಟು ಬರೂದಿಲ್ಲವಾನಾ ?''

''ಭಟ್ರೇ... ಸಂದೊಂದು ಮಾತುಂಟು. ಬಲಿ ಬೇಕೂಂತ ದೇವಿಯೇನು ಹೇಳ್ಳಿಲ್ಲ, ಎಲ್ಲ ಮನುಷ್ಯರೇ ಹುಟ್ಟಿಸಿದ ಕತೆ. ಪ್ರತೀ ವರ್ಷ ಕುರಿ, ಕೋಳಿ ಬಲಿ ಕೊಡ್ತಿತ್ತು. ಆದ್ರೆ ಈ ಸರ್ತಿ ಕೋಣನ ಬಲಿ ಕೊಡ್ತೇನೆ ಅಂತ ದೊಡ್ಡ ಹೆಗ್ಡೇರು ಮುಂದೆ ಬಂದಿದ್ದಾರೆ. ಗುತ್ತಿನ ಮನೆಯವ್ರ ದರ್ಪ ತೋರಿಸ್ಲಿಕ್ಕೇಂತ ಇದು ನಡೀತಾ ಇರುದು ಗೊತ್ತಾಯ್ತಾ? ಅದಕ್ಕೇ ನಾನು ಇದನ್ನು ವಿರೋಧಿಸ್ತಾ ಇರುದು...''

ಸುಭಾಸ್ ಹೆಗ್ಡೇರಿಗೆ ಅವ್ನ ಮಾತು ಕೇಳಿ ಒಂದೇ ಪೆಟ್ಟಿಗೆ ಕಡ್ಡು ಹಾಕುವಷ್ಟು ಗರ್ವ ಬಂತು. ಆದ್ರೂ ಭಟ್ರು ಕಣ್ಣು ಮಿಟಕಿಸಿದ್ರಿಂದ ಸುಮ್ನೆ ಕೂತ್ರು. ಭಟ್ರು ಮತ್ತೆ ಸುರು ಮಾಡಿದ್ರು, ''ಸುರೇಶಾSSS... ಈಗ ಅದೆಲ್ಲ ಬೇಡ. ಯಾರೂ ಎಂತದೇ ಇರ್‍ಲಿ ಕಟ್ಟು ಕಟ್ಲೆ ಮೀರ್‍ಲಿಕ್ಕೆ ಆಗೂದಿಲ್ಲ. ಈಗ ನೋಡು... ನಿನ್ನ ಜಾತಿ ಯಾವ್ದು? ಭೂತ ಕಟ್ಟುವ ಜಾತಿ. ಆದ್ರೆ ನಿನ್ನ ಅಜ್ಜನ ಕಾಲಕ್ಕೇ ಅದು ನಿಂತುಹೋಯ್ತು. ನಿನ್ನ ಅಪ್ಪ ಅದು ಬಿಟ್ಟ. ಸಾಗುವಳಿ ಮಾಡ್ತೇನೇಂತ ಹೊರ್‍ಟ. ಅನ್ನ ಹಾಕಿದ ಗುತ್ತಿನ ಮನೆಯವ್ರಿಗೇSSS ಎದ್ರು ಮಾತಾಡಿದ. ಇದ್ದ ಜಾಗವೂ ಹೋಯ್ತು. ನೀನು ಮಂಗ್ಳೂರಿಗೆ ಹೋಗಿ ಬೀಯೇ ಮಾಡಿಕೊಂಡು ಉತ್ತರ ದಕ್ಷಿಣ ತಿರ್‍ಗಾಡ್ಕೊಂಡು ಇದ್ದಿ. ಇದ್ರಿಂದ ಎಂತ ಲಾಭ ? ಯಾರಿಗೆ ಲಾಭ ? ಎಂತ ಸುಖವೂ ಇಲ್ಲ.''

''ಅದಕ್ಕೆ ನಾನು ಎಂತ ಮಾಡ್ಬೇಕು ಭಟ್ರೇ ?''

''ಎಂತ ಮಾಡುದೂ ಬೇಡ. ನೀನು ಈ ಸರ್ತಿಯ ಕೋಲದಿಂದ ಭೂತ ಕಟ್ಟು. ನಿನ್ನ ಕುಲ ಕಸುಬು ಮುಂದುವರ್‍ಸು. ನಿಂಗೂ ಎಲ್ಲ ಕಡೆ ಭೂತದ ಪಾತ್ರಿ ಅಂತ ಮರ್ಯಾದೆ ಸಿಗ್ತದೆ. ನಿಮ್ಮ ಜಾಗ ಮೂರು ಸೇಂಟ್ಸ್ ಅಲ್ಲವಾ ? ಅದ್ರ ಬದ್ಲು ಸೆಂಟ್ಸಿಗೆ ಇಷ್ಟು ಅಂತ ಹೆಗಡ್ರು ಕೊಡ್ತಾರೆ. ಸುಮ್ನೆ ಪ್ರತಿಭಟನೆ ಲಂಗು ಲೊಟ್ಟೇಂತ ಮಾತಾಡುದು ಬೇಡ. ನಿಂಗೂ ನಿನ್ನ ಮನೆಯವ್ರಿಗೂ ಒಳ್ಳೇದಾಗ್ತದೆ ಇದ್ರಿಂದ ನೋಡು... ಆಲೋಚ್ನೆ ಮಾಡು'' ಅಂತ ಭಟ್ರು ನೆಗಾಡ್ತಾ ಪಾಯಿಂಟ್ ಇಟ್ರು.

ಸುರೇಶನಿಗೆ ಆಲೋಚನೆ ಸುರುವಾಯ್ತು. ಎಂತ ಮಾಡುದೂಂತ ಎಲ್ರ ಮುಖ ನೋಡಿದ. ಎಲ್ರೂ ಗುಸುಗುಸು ಮಾತಾಡಿಕೊಂಡ್ರು. ಭೂತ ಕಟ್ಟುವ ಕುಲ ಕಸುಬು ಮುಂದುವರ್‍ಸಿದೇ ಸರಿ ಅಂತ ಎಲ್ರೂ ಸುರೇಶನಿಗೆ ಹೇಳಿದ್ರು. ಸುರೇಶ ಒಪ್ಪಿದ. ಎಲ್ರಿಗೂ ಭಾರೀ ಖುಷಿಯಾಯ್ತು. ಕೂಡ್ಲೆ ಭಟ್ರತ್ರ ಪಂಚಾಂಗ ತರ್‍ಸಿ ಮರುದಿವ್ಸದ ಮಾರಿಗೆ ಡೇಟ್ ಫಿಕ್ಸ್ ಮಾಡ್ಸಿದ್ರು.

ಯಾವಾಗ್ಲೂ ಏರ್ಮಾಳು ಗುತ್ತಿನ ಭೂತ ಕಟ್ಟಿದ್ದವ ಢಂಗು. ಈ ಸರ್ತಿ ಸಿಗ್ಬೇಕಾದ್ದು ತಪ್ಪಿಹೋಯ್ತಲ್ಲಾಂತಗ ಸಿಟ್ಟು ಬಂತು. ಆದ್ರೆ ಎಂತ ಮಾಡುದು ? ಉಪಾಯ ಇಲ್ಲ. ಸುರೇಶನಿಗೆ ನಲೀಲಿಕ್ಕೆ ಬೇಕಾದ್ದೆಲ್ಲ ಟ್ರೈನಿಂಗ್ ಕೊಡ್ತಿದ್ದ.

ಹಾಹೂ ಅನ್ನೂದ್ರೊಳಗೆ ಕೋಲ, ಮಾರಿಯ ದಿನ ಬಂತು. ಭಾಳು ಭಂಡಾರ ಬಂತು ಭಾರೀ ಗೌಜಿಯಲ್ಲಿ. ಕೊಂಬು, ಕಹಳೆ, ಕದೋಣಿ, ಗರ್ನಾಲು ಏನುಂಟು ಏನಿಲ್ಲ. ಸುಭಾಸಣ್ಣೆರ್ ವೀಡಿಯೋ ಸಾ ಎರೇಂಜ್‌ಮೆಂಟ್ ಮಾಡಿದ್ರು. ಭೂತ ಕಡೇಯ ಸ್ಥಾನದಲ್ಲಿ ಬೊಂಡ ನೀರು ತಗೊಳ್ಳೇ ಇಲ್ಲ. ಹಾರ್‍ತಾ ಹಾರ್‍ತಾ ಸ್ಥಾನ ಪ್ರವೇಶ ಮಾಡಿತು. ವಾದ್ಯ, ತಾಸೆ ಎಲ್ಲದ್ರ ಸೌಂಡು ಕೈದಾದ ಮೇಲೆ ಭೂತ ಭಟ್ರತ್ರ ಹೆಗ್ಡೇರತ್ತ, ''ಭಟ್ರೇ ಹೆಗ್ಡೇರೇ ಮಾಲಿಂಗೇಶ್ವರಂಗೆ ಮಾಪೂಜೆ ಮಾದೇವಿಗೆ ಮಾರಿ ಪೂಜೆ ಎಲ್ಲ ಕಟ್ಟು ಕಟ್ಲೆ ಪ್ರಕಾರ ಆಗ್ತಾ ಉಂಟಾ ?'' ಅಂತ ಕೇಳಿತು.

ಭಟ್ರು ಮಾಮೂಲಿಯಂತ ಉಂಟು. ಇನ್ನು ಉಳದ್ದು ನಿನ್ನ ಕಾರ್ಣಿಕ ಅಂದ್ರು.

''ಭಟ್ರೇ, ನನ್ನ ಕಾರ್ಣಿಕರ ಮಾತು ಹಾಗಿರ್‍ಲಿ ನಿಮ್ಮ ಪಂಚಾಂಗ ಯಾವುದು ಅಂತ ನನಗೆ ಗೊತ್ತುಂಟು. ಆದ್ರೆ ನನ್ನ ಪಂಚಾಂಗ ನಿಮ್ಗೆ ಗೊತ್ತಾಗ್ಲಿಕ್ಕಿಲ್ಲ'' ಅಂತೆ ಭೂತ ಹೇಳಿದ್ದೇ ಕುಣೀಲಿಕ್ಕೆ ಸುರು ಮಾಡಿತು. ನಂತ್ರ ಭೂತ ಬಿರಿಯಿತು. ಭಟ್ರಿಗೆ ಹೆಗ್ಡೇರಿಗೆ ಭೂತ ಸ್ಥಾನ ಪ್ರವೇಶ ಮಾಡಿದ ಕೂಡ್ಲೆ ಹೀಗೆ ಎಂತಕ್ಕೆ ಮಾತಾಡಿತು ಅಂತ ಮಂಡೆ ಬಿಸಿ ಆಯ್ತು. ಮನೆಗೆ ಹೋಗಿ ರಾತ್ರಿಯ ಊಟ ಮುಗ್ಸಿಕೊಂಡು ಬರುವ ಅಂತ ಭಟ್ರು ವಾಪಾಸ್ ಬರ್ತಿರುವಾಗ ಟೈಟ್ಟಾದ ಢಂಗು ಎದ್ರಿಗೆ ಸಿಕ್ಕಿದ ''ಏ... ಬೋಳೀ ಮಗ ಹೂಸ್ದೇವ ಭಟ್ಟಾ... ಬ್ಯಾವರ್ಸಿ ಈ ಸರ್ತಿ ನಂಗೆ ಭೂತ ಕಟ್ಟುದನ್ನ ತಪ್ಪಿಸಿದ್ಯಾ ? ಭಾರೀ ಬುದ್ಧಿವಂತ ಅಂತ ಸುರೇಶನಿಗೆ ಭೂತ ಕಟ್ಲಿಕ್ಕ ಅವಕಾಶ ಮಾಡಿಕೊಟ್ಯಾ ? ನೋಡು ಅವ ಎಂತ ಮಾಡ್ತಾನೇಂತ. ಕಡೇSSSಯಲ್ಲಿ ಹೆಗ್ಗಡ್ರಿಗೆ ತಿರ್‍ಗಿಸಿ ಮದಿಪು ಹೇಳ್ತಾನೆ ನೋಡು. ಈಗ ಪ್ರವೇಶ ಆದ ಕೂಡ್ಲೆ ಎಂತ ಹೇಳಿದ್ದಾನೆ ಅಂತ ಗೊತ್ತುಂಟಲ್ವಾ ? ನಾನೇ ಕಲಿಸಿದ್ದು ಅದನ್ನು'' ಅಂತ ತೊದಲ್ತಾ ಹೇಳಿದ. ಭಟ್ರು ಗಾಬರಿಯಲ್ಲಿ ಹೆಜ್ಜೆಗೊಂದು ಹೂಸು ಬಿಡ್ತಾ ಹೆಗ್ಡೇರತ್ರ ಬಂದು ಎಲ್ಲ ಹೇಳಿದ್ರು. ಕೂಡ್ಲೆ ಹೆಗ್ಡೇರು ಇಬ್ರೂ ಗುಟ್ಟಲ್ಲಿ ಮಾತಾಡ್ಕೊಂಡು ಒಂದು ಡಿಸೀಷನ್ನಿಗೆ ಬಂದ್ರು.

ರಾತ್ರಿ ಹತ್ತು ಗಂಟೆಯ ಹೊತ್ತು. ಅರ್ದಳ ಹಾಕ್ಕೊಂಡು ಶೃಂಗಾರ ಮಾಡ್ಕೊಂಡು ಭೂತ ಎದ್ದು ನಿಂತಿತು. ಗಗ್ಗರ ನೆಚ್ಚಿ ಎಲ್ಲ ಆಯ್ತು. ನೂರಾರು ಜನ ಸೇರಿದ್ರು. ಆವೇಶ ಬಂದ ಭೂತಕ್ಕೆ ಮಣೆ ಮತ್ತು ಸುಭಾಸ್ ಹೆಗ್ಡೇರು ಅರ್ಪಿಸಿದ ಬೆಳ್ಳಿಯ ಕಡ್ತಲೆಯನ್ನು ಕೊಟ್ರು, ಭೂತ ವಾದ್ಯಕ್ಕೆ ಭಾರೀ ಆವೇಶದಲ್ಲಿ ಕುಣೀಲಿಕ್ಕೆ ಸುರು ಮಾಡಿತು. ಮಣೆ ಬದಿಗಿಟ್ಟು ದೀವಟಿಗೆಯನ್ನು ಎದೆ, ಮುಖದ ಹತ್ರ ಎಲ್ಲ ತಂದುಕೊಂಡು ಕಾರ್ಣಿಕ ತೋರ್‍ಸಿತು. ಆಗ ಹೆಗ್ಡೇರು, ''ವರ್ಷಕ್ಕೊಂದು ಸಲ ಮಾಡುವ ಸೇವೆ. ನಾವು ಮನುಷ್ಯ ಮಾತ್ರ, ಏನಿದ್ರೂ ವಿಷ ಇಟ್ಟುಕೊಂಡು ಅಮೃತ ಕೊಡ್ಬೇಕು'' ಅಂತ ಹೇಳಿದ್ರು. ಭೂತ ಮತ್ತೆ ಕುಣೀಲಿಕ್ಕೆ ಸುರು ಮಾಡಿತು. ಬೆಳ್ಳಿಯ ಕಡ್ತಲೆಯನ್ನು ಎದೆಗೆ ಒತ್ತಿ ಹಿಡ್ಕೊಂಡು ಮತ್ತೆ ಹೆಗ್ಡೇರ ಹತ್ರ ಬಂತು. ಅವ್ರು ಆ ಕಡ್ತಲೆಯನ್ನು ಸರಿಯಾಗಿ ಹಿಡ್ಸಿ ಹಿಂದೆ ಹೇಳಿದ ಹಾಗೆಯೇ ಹೇಳ್ಕಿತ್ತು. ಆದ್ರೆ ಆ ಕಡ್ತಲೆಯನ್ನು ಎಳೆಯುವ ಹಾಗೆ ಮಾಡಿ, ಕೂಡ್ಲೆ ಎದೆಗೆ ಒತ್ತಿಬಿಟ್ರು. ವಾದ್ಯ, ಗರ್ನಾಲುಗಳ ಗಲಾಟೆಯಲ್ಲಿ ಯಾರಿಗೂ ಎಂಥದೂ ಗೊತ್ತಾಗ್ಲಿಲ್ಲ. ರಕ್ತ ಜಿಲ್ ಅಂತ ಚಿಮ್ಮಿ ಜುಮಾದಿ ಅಲಿಯಾಸ್ ಸುರೇಶ್ ಬಿದ್ದವ ಮತ್ತೆ ಏಳ್ಲೇ ಇಲ್ಲ.

'ಪಾತ್ರಿಯನ್ನೇ ಬಲಿ ತೆಗೆದುಕೊಂಡ ದೇವಿ' ಅಂತ ಮರುದಿವ್ಸದ ಲೋಕಲ್ ಪೇಪರುಗಳಲ್ಲಿ ಹೆಡ್ಡಿಂಗಿತ್ತು.

ಪಿ. ಬಿ. ಪ್ರಸನ್ನ
ನಂ. ೪, ೧೧ನೇ ಮುಖ್ಯರಸ್ತೆ, ಜೆ.ಪಿ.ನಗರ 'ಡಿ' ಬ್ಲಾಕ್, ಮೈಸೂರು - ೫೭೦ ೦೦೮

# ಮತಾಂತರ

ಕಲಿಗಣನಾಥ ಗುಡದೂರು

**ಊ**ರಿನ ಪ್ರತಿ ದೇವಸ್ಥಾನದ ಗೋಪುರ, ಲೈಟಿನ ಕಂಬ, ಕಮಾನು, ಅಗಸಿ ಬಾಗಿಲ ಮ್ಯಾಲ ಕೇಸರಿ ಧ್ವಜಗಳು ಹಾರಾಡತೊಡಗಿದವು. ಬಸ್‌ಸ್ಟ್ಯಾಂಡಿನ ಸಮೀಪ ರೋಡಿನ ಎರಡೂ ಕಡೆಗೆ ದೊಡ್ಡ ದೊಡ್ಡ ಕಟೌಟ್‌ಗಳನ್ನು ನಿಲ್ಲಿಸಲಾಗಿತ್ತು. ವಿವಿಧ ಮಠಗಳ ಸ್ವಾಮಿಗಳು ಡಿಜಿಟಲ್ ಕಟೌಟ್‌ಗಳಿಂದ ಎದ್ದು ಬರುವಂತಿದ್ದರು. ಕೇಸರಿ ಬಣ್ಣದ ಹತ್ತಾರು ಅಡಿ ಉದ್ದದ ಬ್ಯಾನರ್‌ಗಳು ಎಲ್ಲೆಂದರಲ್ಲಿ ಸೀರೆ, ಧೋತರ ಇಳಿಬಿಟ್ಟಂತೆ ಕಾಣುತ್ತಿದ್ದವು. ಬಹುತೇಕ ಮನೆಗಳ ಮುಂದೆ ಮಹಿಳೆಯರು ರಂಗೋಲಿ ಹಾಕಿ ಕೇಸರಿ ಬಣ್ಣದಿಂದ 'ಜೈ ಹಿಂದ್' ಬರೆದಿದ್ದು ವಿಶೇಷವೆನಿಸಿತು. ಊರ ಹೊರಗಿದ್ದ ಹರಿಜನ ಕೇರಿಯ ನಾಲ್ಕಾರು ಮನೆಗಳು, ದುರುಗಮ್ಮ, ಸುಂಕ್ಲಮ್ಮ ದೇವರ ಗುಡಿ ಕಳಶದ ಮ್ಯಾಲೂ ಕೇಸರಿ ಬಾವುಟಗಳು ಗಾಳಿಪಟದಂತೆ ಹೊಯ್ದಾಡುತ್ತಿದ್ದವು.

ಊರಲ್ಲಿ ಅಂಗೈಯಷ್ಟು ಬಿಳಿ ಗೋಡೆ ಕಾಣಲಾರ್ದಂಗ ಕೇಸರಿ ಬಣ್ಣದಲ್ಲಿ ಬಂಡಿಗಾಲಿಯಂತಾ ಅಕ್ಷರಗಳನ್ನ ಬರೆಯಲಾಗಿತ್ತು. ಸಾಲಿ ಕಲಿಯೋ ಮಕ್ಳು ದೂರದಿಂದ ನಿಂತು ಅಕ್ಷರಗಳನ್ನು ಕೂಡಿಸಿ ಓದಿದರು, 'ಹಿಂದೂಗಳೇ ಒಂದಾಗಿ', 'ಹಿಂದೂ ರಾಷ್ಟ್ರ ನಮ್ಮ ಸಂಕಲ್ಪ', 'ಹಿಂದೂ ವೀರರೇ ಎದ್ದೇಳಿ, ಪ್ರಾಣ ತೆತ್ತಾದರೂ ಹಿಂದೂ ಧರ್ಮ ಉಳಿಸಿಕೊಳ್ಳಿ', 'ಮತಾಂತರಿಗಳಿಗೆ ತಕ್ಕ ಪಾಠ ಕಲಿಸಲು ಮುಂದಾಗಿ' 'ಹಿಂದೂ ದ್ರೋಹಿಗಳಿಗೆ ದೇಶದಲ್ಲಿ ಜಾಗವಿಲ್ಲ'. ವಿವಿಧ ಓಣಿಯಿಂದ ಬಂದಿದ್ದ ಶೀನ, ಅಕ್ಬರ್, ಹುಸೇನಿ, ಡೇವಿಡ್, ರಾಮು ಪರಸ್ಪರ ಕೈ ಕೈ ಹಿಡಕಂಡು ಗಟ್ಟಿಯಾಗಿ ಓದಿ ತಮ್ಮ ಜಾಣತನ ಪರೀಕ್ಷಿಸಿಕೊಂಡರು.

ಮೊನ್ನೆ ರಾತ್ರಿಯಿಂದನ ತಳವಾರ ಯಮುನ ಡಂಗುರ ಸಾರಿದ್ದ ''ಕೇಳ್ರಪೋ... ಕೇಳ್ರಿ... ನಾಡಿದ್ದು, ಸೋಮವಾರ ಮುಂಜಾನಿ ಪೂಜಾವರ ಮಠದ ಸ್ವಾಮಿಗಳು, ವಿವಿಧ ಮಠಾಧೀಶರು, ಹಿಂದೂ ಸೇನೆ ಮುಖಂಡರು ಊರಿಗೆ ಬರ್ತಾರ. ಹೋದ ವರ್ಷ ಕ್ರಿಶ್ಚಿಯನ್ ಧರ್ಮಕ್ಕ ಮತಾಂತರ ಆಗ್ಯಾರಲ್ಲ ಅವರನ್ನ ಒಳ್ಳಿ ಹಿಂದೂ ಧರ್ಮಕ್ಕ ಕರ್ಕಂಡು ದೀಕ್ಷಾ ಕೊಡ್ತಾರಂತ... ಹೈಸ್ಕೂಲ್ ಗ್ರೌಂಡಿಗೆ ಎಲ್ಲರೂ ಬರ್ಬಕು... ಕೇಳ್ರಪೊ... ಕೇಳ್ರಿ...'' ಅಂತ ಕೂಗಿದಾಗ ಸಮೀಪದ ಗುಡ್ಡದಿಂದ ಪ್ರತಿಧ್ವನಿ ಕೇಳಿ ಬರ್ತಿತ್ತು. ಮೊನ್ನಿಯಿಂದನ ಊರಿನ ಲೋಕಲ್ ಚಾನಲ್‌ನಲ್ಲಿ ಕಾರ್ಯಕ್ರಮ ಕುರಿತ ಮಾಹಿತಿ ತೋರಿಸ್ತಿದ್ರು.

ಊರಿಗೆ ವಿಶೇಷ ಕಳೆ ಬಂದಿತ್ತು. ಸಾಕ್ಷಾತ್ ರಾಮದೇವನ ಬರ್ತಾನೇನು ಅಂಬಂಗ ಬ್ರಾಂಬ್ರು ಓಣಿ, ಶೆಟ್ರು ಓಣಿ, ಮಾರ್ವಾಡೇರ ಓಣಿಯ ಪ್ರತಿ ಮನೆಯ ಬಾಗಿಲಿಗೆ ಮಾವಿನ ತೋರಣ, ಬಾಳೆ ದಿಂಡು ಕಟ್ಟಿ ಸಿಂಗರಿಸಲಾಗಿತ್ತು. ಈ ಓಣಿಗಳ ಅಂಗಳಗಳಲ್ಲಿ ಆಕಳ ಸೆಗಣಿಯಿಂದ ಸಾರಿಸಿ ಹಾಕಿದ್ದ ರಂಗೋಲಿ, ಎಡಕ್ಕ ಬಲಕ್ಕ 'ಜೈ ಶ್ರೀರಾಮ್' ಅಂತ ಬರೆಯಲಾಗಿತ್ತು. ಊರಾಗ ಕೆಲವು ವರ್ಷಗಳಿಂದ ಆಕಳ ಸೆಗಣಿ ಬಂಗಾರ ಆದಾಂಗ ಆಗಿತ್ತು. ಪಿಂಜಾರ ಇಮಾಮ್‌ಸಾಬ್, ಮೌಲಾಲಿ, ಬ್ಯಾಗಾರ ಬಸಪ್ಪ, ತಳವಾರ ತಿಮ್ಮಪ್ಪ, ಕುರುಬರ ಶಿವಪ್ಪನ ಮನ್ಯಾಗ ಬುಟ್ರ ಬ್ಯಾರೆ ಕಡೆ ಆಕಳಗಳೇ ಇರ್ಲಿಲ್ಲ. ಎಲ್ಲರ ಮನ್ಯಾಗ ಎಮ್ಮಿ, ಎತ್ತು ಸಾಕಲಾಗಿತ್ತು.

ಎರಡು ದಿನ ಮೊದ್ಲೆ ಈ ಮೂರು ಓಣಿಗಳ ಮಂದಿ ಮಾದರ ದುರುಗಪ್ಪನಿಗೆ ಆಕಳ ಸೆಗಣೀನ ತಪ್ಪದ ತರಬಕು. ಸೆಗಣಿ ತಂದುಕೊಟ್ರ ನಿನ್ನ ಜಲ್ಮ ಸಾರ್ಥಕ. ಸ್ವಾಮಿಗಳಿಗೆ ಸೇವಾ ಮಾಡಿದಷ್ಟು ಪುಣ್ಯ ಬರುತ್ತ ಅಂತ ಶಾಮಾಚಾರಿ ಜೋಷಿ ಹೇಳಿದ್ದು ದುರಗಪ್ಪ ನೆನಿಸಿಗೆಂಡು ಆಕಳ ಇದ್ದೋರು ದನದ ಅಂಕಣ ಕಸ ಬಳಿಯಾಕಿನ ಮೊದ್ಲಾ ಹೋಗಿ ತಾನಾ ಸೆಗಣಿ ಬಳಕಂಡು ತಂದಿದ್ದ. ಶರಣಪ್ಪಗೌಡ, ಬಸನಗೌಡನ ಮನಿ ಗೌಡಶ್ಯಾನೇರೂ ಬ್ರಾಂಬ್ರು ಓಣಿ ಹೆಣ್ಮಕ್ಕಳನ್ನ ನೋಡಿ ತಮ್ಮ ಸಿಮೆಂಟ್ ಅಂಗಳದಲ್ಲಿ ಆಕಳ ಸೆಗಣಿ ನೀರನ್ನ ಜಗ್ಗು ಹೊಡೆದು ರಂಗೋಲಿ ಹಾಕಿದ್ದನ್ನ ನೋಡಿಕೆಂತ ದುರುಗಪ್ಪ ಮನ್ಸಿನ್ಯಾಗ ನಕ್ಕಂತ ಕೇರಿಕಡೆ ಹೊಂಟ.

ಊರ ಹೊರಗಿನ ಹನುಮಪ್ಪನ ಗುಡಿಯ ದೊಡ್ಡ ಬೇವಿನ ಗಿಡದ ಕೆಳಗೆ ಊರಿನ ನಲವತ್ತೈವತ್ತು ಮಂದಿ ಯುವಕರು ಖಾಕಿ ಚಣ್ಣ, ಚೂಪನು ಟೋಪಿಗಿ ಹಾಕ್ಕೆಂಡು, ಕೈಯಾಗೊಂದು ಬಿದಿರಿನ ಉದ್ದನು ಕೋಲು ಹಿಡ್ಕಂಡು ಕವಾಯತು ಮಾಡುತ್ತಿದ್ದುದನ್ನು ದುರಗಪ್ಪ ದೂರದಿಂದ ನೋಡಿದ. ಹತ್ತಾರು ವರ್ಷಗಳಿಂದ ಬ್ರಾಂಬ್ರು, ಶೆಟ್ರು, ಮಾರ್ವಾಡೇರ ಓಣಿ ನಾಲ್ಕೈರು ಹುಡಗ್ರು ಶಾಮಾಚಾರಿ ಜೋಷಿ ಹೇಳಿದಂತೆ ಘೋಷಣೆ ಕೂಗಿತಿದ್ರು. ಸಾಲಿ ಹುಡಗ್ರಂತೆ ಪ್ರಾರ್ಥನಾ ಮಾಡ್ತಿದ್ರು. ಮುಂಬೈಯಾಗ ಓದಿ ಆರು ತಿಂಗಳ ಹಿಂದಷ್ಟ ಬಂದಿದ್ದ ಮಾರ್ವಾಡಿ ಧಣಿ ಮಹಾವೀರಚಂದ್ ಮಗ ರಾಜೇಶಚಂದ್ ಮಂತ್ರ ಘೋಷಣೆ ಜೊತಿಗಿ ಬಿದಿರು ತಿರುಗಿಸೋದು ಹೇಳಿ ಕೊಡ್ತಿದ್ದ. ''ಇದನ್ನೆಲ್ಲಾ ನಮ್ ರಕ್ಷಣೆಗೆ ಕಲಿಬಕು. ನಮ್ ವೈರಿಗಳಿಂದ ನಮ್ ಧರ್ಮ, ಜಾತಿ ಉಳಿಸಿಕೊಳ್ಳಾಕ ಇಷ್ಟಾದ್ರೂ ನಾವು ಕಲಿಬಕು'' ಅಂತ ಊರ ಹುಡಗರಲ್ಲಿ ಹುರುಪು ತುಂಬುತ್ತಿದ್ದ.

ಇತ್ತೀಚೆಗೆ ಕುರುಬ್ರು, ಬ್ಯಾಡ್ರು, ನಿಂಗಾತ್ರು, ವಕ್ಕಲಿಗೇರು ಹುಡಗ್ರು, ಕೂಲಿ ಮಾಡಿಕೆಂಡು ತಿನ್ನೊ ಹುಡಗ್ರು ಮೊದ್ಲುಮಾಡಿ ಹನುಮಂತ ದೇವ್ರ ಗುಡಿಗಿ ಮುಂಜಾನಿ ಸಂಜಿಕಿ ಭೇಟಿ ಕೊಡಾಕ ಹತ್ತಿದ್ರು. ನಿನ್ನಿ ರಾತ್ಯಾಗ ಕೇರಿಯಾಗಿನ ಪ್ರತಿಯೊಬ್ಬರ ಮನಿಗಿ



ಚಿನ್ನೂರಾಗ ಇರೋ ಸಂಘದ ಹುಡಗ್ರಾದ ಲಿಂಗಪ್ಪ, ಪಂಪಾಪತಿ ಬಂದು, ''ಊರಾಗಿನ ದೊಡ್ಡೋರು ಅನಿಸೆಗಂಡೋರು ಮಾತು ನಂಬಿ ಹಾಳಾಗಬ್ಯಾಡ್ರಿ. ಸಾವಿರಾರು ವರ್ಷಗಳಿಂದ ನಮ್ಮನ್ನ ಪ್ರಾಣಿಗಳಿಗಿಂತ ಕಡೆಯಾಗಿ ನೋಡಿದ ಮಂದಿ ನಮ್ಮನ್ನ ಮನಿಸೇರುಗತೆ ನೋಡ್ತಾರ ಅಂಬದು ಕನಿಸನ ಮಾತು. ಅವ್ರೆಷ್ಟೆ ಒತ್ತಾಯ ಮಾಡಿದ್ರೂ ಮರು ಮತಾಂತರ ಆಗ್ಬಾಡ್ರಿ...'' ಅಂತ ಹೇಳಿಹೋಗಿದ್ದು ನೆನಪಾಯಿತು.

ದುರುಗಪ್ಪ ಕೇರಿ ಪ್ರವೇಶಿಸುತ್ತಿದ್ದಂತೆ ತಾನು ಯಾವುದೋ ಹೊಸ ಊರು ಪ್ರವೇಶಿಸುತ್ತಿದ್ದಂತೆ ಅನ್ನಿಸಿತು. ಕೇರಿಯ ಹತ್ತಾರು ಗುಡಿಸಲುಗಳ ಮುಂದ ರಂಗೋಲಿ ಹಾಕಿದ್ದು ಕಂಡಿತು. ಕೆದರಿದ ತಲೆಗೂದಲು ಬಾಚಿಕೊಳ್ಳಾಕ ಬಾರದ ಕೇರಿ ಹೆಣ್ಮಕ್ಳು ಚುಕ್ಕಿಗಳಲ್ಲಿ ಸೂರ್ಯ ಚಂದ್ರರನ್ನು ಹಾಕಿದ್ದರು. ದುರುಗ ತನ್ನ ಗುಡಿಸಲು ಹೊಕ್ಕು ಸುತ್ತ ಕಣ್ಣಾಡಿಸಿದ. ತನ್ನ ಆರಾಧ್ಯ ಯೇಸುಸ್ವಾಮಿ ಶಿಲುಬೆಗೇರಿಸಿದ ಚಿತ್ರವುಳ್ಳ ಫೋಟೋ ಕಾಣಲಿಲ್ಲ. ನಿತ್ಯವೂ ಅದರ ಮುಂದ ಒಂದೆರಡು ನಿಮಿಷ ಮೊಣಕಾಲು ಊರಿ ತಲೆ ಬಗ್ಗಿಸಿ ನಮಸ್ಕಾರ ಮಾಡೋದು ಆತನ ನಿತ್ಯದ ಕ್ರಮವಾಗಿತ್ತು. ಮನ್ಯಾಗ ಮಾತ್ರ ಯೇಸುವಿನ ಭಕ್ತನಾಗಿದ್ದ. ಹೊರಗ ಮಾತ್ರ ತಾನು ಮಾದರ ದುರುಗ.

ಹಸ್ಮಕಲ್ ಗುಡ್ಡದಾಗಿರೋ ಆ ಚರ್ಚಿನ ಫಾದರು ಮಿನೇಜಸಪ್ಪ ಸಾಕ್ಷಾತ್ ಯೇಸುಸ್ವಾಮಿ ಇದ್ದಂಗ. ಊರಾಗಿನ ಮಂದಿ ಮುಟ್ಸಿಕೊಳ್ಳಾಕೂ ಹಿಂದ ಮುಂದ ನೋಡೋ ಹೊತ್ತಿನ್ಯಾಗ... ಬ್ರಿಟಿಷರು ದೇಶ ಬಿಟ್ಟುಹೋಗಿ ಅರವತ್ತು ವರ್ಷ ಆಗಾಕ ಬಂದ್ರೂ ಊರ ಬಾವಿ, ದೇವ್ರ ಗುಡಿ, ಹೋಟ್ಲದಾಗ ಹೋಗಾಕ ಅವಕಾಶ ಕೊಟ್ಟಿಲ್ಲಂದ್ರೂ, ಮಿನೇಜಸಪ್ಪ ತಮ್ಮ ಮನಿಗೆ ನಮ್ಮನ್ನ ಕರ್ಕಂಡು ಹೋಗಿ ತನ್ನ ಕೈಯಾರೆ ನಮಗೆ ಉಣ್ಣಾಕ ನೀಡಿದ್ದು, ಗುಬ್ಬಿಗತೆ ಮುದುರಿ ದೂರ ನಿಂತಿದ್ದ ತನ್ನನ್ನ ತಾಯಿ ಮಗುವನ್ನ ಅಪ್ಪಿ ಕೆಂಡಂಗ ಅಪ್ಪಿಕೊಂಡಿದ್ದು. ಆಗ ದುರುಗಪ್ಪನ ಕಣ್ಣಾಗಿನಿಂದ ದಳಾ ದಳಾ ಕಣ್ಣೀರು ಉದ್ರಿದ್ವು. ಮಾತಾಡಾಕ ಬರ್ಲಾರ್ದ ಬಿಕ್ಕಿ ಬಿಕ್ಕಿ ಅತ್ತಿದ್ದ. ತನ್ನ ಹೆಂಡತಿ, ನಾಲ್ವರು ಮಕ್ಕಳಿಗೆ ಹೋದ ಕ್ರಿಸ್‌ಮಸ್‌ಗೆ ಹೊಸ ಬಟ್ಟೆ ಕೊಡಿಸಿದ್ದು ಎಲ್ಲ ನೆನಪಾದವು. ಗುಡಿಸಲೆಲ್ಲಾ ಹುಡುಕಾಡಿದ.

''ಡೇವಿಡ್, ಏ ಮೇರಿ ನಿಮ್ಮವ್ವ ಎಲ್ಲಿ ಹೋಗ್ಯಾಳ? ಯೇಸುಸ್ವಾಮಿದು ಫೋಟೋ ಎಲ್ಲಿ ಹೋಯ್ತು'' ಅಂತ ಕೂಗಿದ. ದುರುಗಮ್ಮನ ಗುಡಿ ಮುಂದ ಆಡುತ್ತಿದ್ದ ಆರು ವರ್ಷದ ಡೇವಿಡ್, ನಾಲ್ಕು ವರ್ಷದ ಮೇರಿ ಓಡಿ ಬಂದರು. ''ಯಪ್ಪಾ... ಇವತ್ತೊಂದು ದಿವ್ಸ ನೀ ನಮ್ಮನ್ನ ಹೊಸ ಹೆಸರಿನಿಂದ ಕರಿಬಾರ್ದಂತ... ಮೊದ್ಲಿನಗತೆ ಬಸುವ, ಲಚುಮಿ ಅಂತ ಕರಿಬಕು. ನಿನ್ನ ಹೆಸರನ್ನೂ ಅಂಥೋನಪ್ಪ ಅಂತ ಹೇಳಬಾರ್ದಂತ...'' ಡೇವಿಡ್‌ನ ಮಾತು ದುರಗನಿಗೆ ಅರ್ಥವಾಗಲಿಲ್ಲ. ಮಕ್ಕಳನ್ನೇ ದಿಟ್ಟಿಸಿ ನೋಡಿದ. ''ಅದಕಂತ ಅವ್ವ ಯೇಸುಸ್ವಾಮಿ ಫೋಟಾನ ಹಳೆ ಟ್ರಂಕಿನಾಗ ಬಚ್ಚಿಟ್ಟು ಹೋಗ್ಯಾಳ. ಅದನ್ನ ಹೊರಗ ತೆಗಿಬಾರ್ದಂತ'' ಮೇರಿ ತೊದಲುತ್ತಾ ಹೇಳಿದಳು. ''ಮುಂಜಾನಿ ನೀ ಹೆಂಡಿ ಬಳಿಯಾಕಂತ ಹೋದಾಗ ಕೆಂಪನು ರಿಬ್ಬನು ಹಣೆಗೆ ಕಟ್ಟಿಕೊಂಡ ಹತ್ತಾರು ಮಂದಿ ಕೇರಿ ದಾರ್‍ಯಾಗ ನಿಂತ್ಗಂಡು ಹೇಳಿ ಹೋಗ್ಯಾರ. ನಮ್ಮೆಲ್ಲರಿಗೆ ದೊಡ್ ಸ್ವಾಮೇರು ಬಂದು ದಕ್ಸಾ ಕೊಡ್ತಾರಂತ.''

''ದಕ್ಸಾ ಅಲ್ಲ.. ದೀಕ್ಸಾ ಅದು.'' ಡೇವಿಡ್ ತಾನು ತಂಗಿಗಿಂತ ಶ್ಯಾಣ್ಯಾ ಅಂಬಂತೆ ಮಾತಾಡಿದ. ''ದಿಕ್ಸಾ ಅಂದ್ರ ಏನಪ?'' ಮೇರಿ ಸಣ್ಣ ದನಿಯಲ್ಲಿ ಕೇಳಿದಳು. ''ನಿಮುಗ ಅರ್ಥ ಆಗಂಗಿಲ್ಲ. ಮತ್ತೆ ಹಿಂದೂ ಧರ್ಮಕ್ಕ ಸೇರಿಸಿ ಕೊಳ್ತಾರಂತೆ.'' ''ಈಗ ನಾವ್ ಯಾವ ಧರುಮದಾಗ ಅದೀವಿ.'' ಡೇವಿಡ್ ಕೇಳಿದ. ''ಅಪ್ಪಾಜಿ... ಆ ದೊಡ್ ಸ್ವಾಮೇರು... ಚರ್ಚಿನ ಫಾದರ್‍ಗಿಂತ ಒಳ್ಳೇರೇನು?'' ಮೇರಿ ತನ್ನ ಬಟ್ಟಲಗಣ್ಣು ಅರಳಿಸುತ್ತಾ ಕೇಳಿದಳು. ದುರುಗ ಏನೋ ಹೇಳಬೇಕೆಂದು ಬಾಯಿ ತೆರೆದ. ತನ್ನ ಮಾತು ಮಕ್ಕಳಿಗೆ ಅರ್ಥ ಆಗ್ಬೇಕಲ್ಲ ಅಂತ ಹಂಗೆ ಬಾಯಿ ಮುಚ್ಕಂಡ.

ಹಳೆ ಟ್ರಂಕಿನಲ್ಲಿ ಬಚ್ಚಿಟ್ಟಿದ್ದ ಯೇಸುಸ್ವಾಮಿ ಫೋಟೋ ಹೊರತೆಗೆದ ದುರುಗ ತನ್ನ ಹೆಗಲಮ್ಯಾಲಿದ್ದ ಹಳೆ ಟವೆಲ್ಲಿನಿಂದ ದೂಳು ಒರೆಸಿದ. ತನ್ನ ಜೀವವೆಂಬಂತೆ ಎದೆಗೆ ಗಟ್ಟಿಯಾಗಿ ಹಿಡಿದು ಎರಡ್ಮೂರು ನಿಮಿಷ ಕಣ್ಮುಚ್ಚಿ ಎದ್ದು ನಿಂತ. ಮಕ್ಕಳೂ ಚರ್ಚಿನಲ್ಲಿ ರವಿವಾರದ ಪ್ರಾರ್ಥನೆಯಲ್ಲಿ ನಿಲ್ಲುವಂತೆ ಅಪ್ಪನ ಮುಂದೆ ನಿಂತರು. ''ಅವ್ವ ಹೈಸ್ಕೂಲ್‌ಗೆ ಹೋಗೋ ದಾರಿ ಕಸ ಬಳಿಯಾಕ ಕೇರಿ ಹೆಣ್ಮಕ್ಳ ಕುಡ ಹೋಗ್ಯಾಳ. ಸ್ವಾಮೇರು ಬರೀ ನೆಲದ ಮ್ಯಾಲ ನಡಿಯಾಕಿಲ್ಲಂತಪೋ'' ಡೇವಿಡ್ ಗಾಬರಿಯಿಂದ ಹೇಳಿದ. ಅಣ್ಣನ ಮಾತು ಕೇಳಿದ ಮೇರಿ ಕೆಳಗ ಕುಂತು ತನ್ನ ಪುಟ್ಟ ಅಂಗಾಲುಗಳನ್ನು ಅಂಗೈಯಿಂದ ಸವರಿಕೊಂಡು ದಿಟ್ಟಿಸಿ ನೋಡಿಕೊಂಡಳು.

''ಸ್ವಾಮೇರು ಬರೋ ದಾರ್‍ಯಾಗ ರೇಷ್ಮಿ ಬಟ್ಟಿ ಹಾಸ್ತಾರಂತ...'' ಅಂತ ಹೇಳುತ್ತಾ... ಡೇವಿಡ್ ಅಪ್ಪನ ಹರಿದ ಬನೀನ, ತನ್ನ ಅಂಗಿ, ತಂಗಿಯ ಮಿಡಿ ನೋಡಿದ. ಹರಿದ ಬಟ್ಟೆಯಲ್ಲಿ ವಿವಿಧ ದೇಶಗಳ ನಕಾಶೆಗಳು ರೂಪು ಪಡೆದಿದ್ದವು. ಹೊರಗ ಕಸಬರಿಗೆ ನೆಲಕ್ಕ ಒಗೆದ ಸದ್ದಾಯ್ತು. ಅವ್ವ ತೇರೆಸಾ (ಪಿಡ್ಡವ್ವ) ಬಂದಳು. ''ಗಾ ನೋಡ್ರಿ, ಊರಾಗಿನ ಮಂದಿ ಕೇರಿ ಮಂದಿ ಮ್ಯಾಲ ಸಿಟ್ಟಾಗ್ಯಾರ. ಹೊರಗ ನಮ್ ಹೊಸ ಹೆಸ್ರು, ಹೊಸ ಧರುಮ ಹೇಳ್ಬಾರ್ದು. ಹೇಳಿದ್ರ ಬೇಸಲ್ಲ ಅಂತ ಮುಂಜಾನಿ ಬಂದ ಹುಡಗ್ರು ಬಡಿಗಿ ತಿರುಗಿಸಿ ಹೇಳಿಹೋಗ್ಯಾರ. ಮಾರಾಯ ನಿನ್ ಕಾಲು ಹಿಡ್ಕಂಡು ಬೇಡಿಕೆಂತಿನಿ. ಊರಾಗ ಇರ್ಬಕು ಅಂದ್ರ ದೊಡ್ಡ ಮಂದಿ ಹೇಳಿದಂಗ ಕೇಳಿಕಂತ ಇರ್ಬಕು. ಚರ್ಚಿನ್ಯಾಗ ಫಾದರ್ ಇಟ್ಟ ಹೆಸರನ್ನ ಯಾರಿಗೂ ಹೇಳ್ಬ್ಯಾಡ. ದೊಡ್ಡ ಮಕ್ಳಿಬ್ರು ಬಳ್ಳಾರಿ ಚರ್ಚಿನ ಸಾಲ್ಯಾಗ ಓದಾಕ ಹಚ್ಯಾರಂತ ಹೇಳೋದು ಬ್ಯಾಡ.'' ಮಾತಿಗೊಮ್ಮೆ ಹೊರಗ ಬಾಗ್ಲಿ ಕಡೆ ನೋಡುತ್ತಾ ಪಿಡ್ಡವ್ವ ಹೇಳಿದಳು.

''ಸ್ವಾಮೇರು ನಮ್ಮನ್ನ ಕರ್ದಾಗ ಅಲ್ಲಿಗೆ ಹೋಗ್ಬಕಂತ. ನಮ್ಮನ್ನ ಮತ್ತೆ ಹಿಂದೂ ಧರ್ಮಕ್ಕ ಕರ್ಕಳಂತ್ಹಾರಂತ. ನಮ್ ಮ್ಯಾಲ ಗಂಗಾನದಿ ನೀರು ಹಾಕಿ ಶುದ್ಧ ಮಾಡ್ತಾರಂತ. ನಾವೆಲ್ಲಾ ಚರ್ಚಿನ ಫಾದರು ಒತ್ತಾಯಕ್ಕ ಬ್ಯಾರೆ ಧರ್ಮಕ್ಕ ಸೇರಿವಂತ. ಚರ್ಚಿನ ಫಾದರು ಈ ಊರಿನ ಧರ್ಮ ಹಾಳು ಮಾಡ್ಯಾರಂತ ಊರಾಗಿನ ಮಂದಿ ಮಾತಾಡಕ ಹತ್ಯಾರ. ಆವತ್ತು ಚರ್ಚಿನ್ಯಾಗ ಬ್ಯಾರೆ ಧರ್ಮಕ್ಕ ಸೇರಿದ ಎಲ್ಲ ಮಂದಿ ಅಲ್ಲಿಗೆ ಹೋಗ್ಬಕಂತ. ಸ್ವಾಮಿಗಳು, ಎಮ್ಮೆಲ್ಲೆಗಳದು ಭಾಷಣ ಮುಗದ ಮ್ಯಾಲ... ಎಲ್ಲರಿಗೂ ಉಣ್ಣಾಕ ಕೊಡ್ತಾರಂತ...'' ಪಿಡ್ಡವ್ವ ಅವರಿವರ ಬಾಯಿಯಿಂದ ಕೇಳಿದ ಮಾತು ಹೇಳಿದಾಗ ಮಕ್ಕಳಿಬ್ಬರು ತಮ್ಮ ಹೊಟ್ಟೆಯನ್ನೊಮ್ಮೆ ನೋಡಿಕೊಂಡು, ತುಟಿಮ್ಯಾಲ ನಾಲಿಗಿ ಆಡಿಸಿಕೊಂಡರು. ಹೊರಗ ಕೇರಿಯಲ್ಲಿದ್ದ ನಾಯಿಗಳು ಒಂದೇ ಸವನೇ ಒದರಿದವು...

* * *

ಬಸ್‌ಸ್ಟ್ಯಾಂಡಿನ ಕಡೆಯಿಂದ ಡೊಳ್ಳು, ಹಲಗೆ, ಹಾಡು, ಕುಣಿತ, ಕೇ ಕೇ ಸದ್ದು ಮುಗಿಲು ಮುಟ್ಟುವಂತೆ ಕೇಳಿತು. ಉಜ್ಜಯಿನಿ ಮಠದಿಂದ ತರಿಸಿದ ಆನಿ ಮ್ಯಾಲ ರಾಮದೇವರ ಫೋಟೋ ಇಡಲಾಗಿತ್ತು. ಅದರ ಮ್ಯಾಲ ಮಿಂಚೋ ಬಟ್ಟೆಯಿಂದ ಮಾಡಿದ ಛತ್ರಿ ಕಟ್ಟಲಾಗಿತ್ತು. ಹತ್ತಾರು ಸ್ವಾಮಿಗಳ ನಡುವೆ ತೆಳ್ಳನೆಯ ವಯಸ್ಸಾದ ಬರಿಮೈಮೇಲೆ ಹೊರಟಿದ್ದ ಸ್ವಾಮಿಗಳನ್ನೇ ಪೂಜಾವರ ಮಠದ ಸ್ವಾಮಿಗಳೆಂದು ದುರುಗಪ್ಪ ಗುರ್ತು ಹಿಡಿದ. ಊರಿನ ರೋಡಿನ ಮ್ಯಾಲ ಮೆರವಣಿಗೆ ಹೊರಟಿತು. 'ಹಿಂದು... ಹಿಂದು... ನಾವೆಲ್ಲಾ ಒಂದು', 'ಪೂಜಾವರ ಸ್ವಾಮಿಗಳಿಗೆ ಜಯವಾಗಲಿ', 'ಹಿಂದೂ ಧರ್ಮದಿಂದಲೇ ವಿಶ್ವಕ್ಕೆ ಶಾಂತಿ', 'ಹಿಂದೂ ಸೇನೆಗೆ ಜಯವಾಗಲಿ', 'ಹಿಂದೂ ಸೇನೆಯ ಹುಲಿ ರಾಮವೀರಸೇನ್‌ಗೆ ಜೈ...' ಅಂತ ಸುತ್ತ ನಾಲ್ಕು ದಿಕ್ಕಿಗೂ ಕೇಳುವಂತೆ ಊರಿನ ಹಿಂದೂ ಸೇನೆ ಹುಡಗ್ರು ಗಂಟಲು ಹರಿಯುವಂತೆ, ಕೇಳೋರ ಕಿವಿ ತೂತು ಬೀಳುವಂತೆ ಕೂಗುತಿದ್ರು...

ನಾಲ್ಕು ವರ್ಷದ ಹಿಂದೆ ಹಿಂದೂ ಸೇನೆ ಮುಖಂಡ ರಾಮವೀರಸೇನ್ ಜತೆ ಊರಿಗೆ ಬಂದಿದ್ದ ಪೂಜಾವರ ಸ್ವಾಮಿಗಳು ಖಾನಸಾಬ ತಾತನ ಉರುಸು ಮಾಡಬಾರ್ದಂತ ಹೇಳಿದ್ದು, ಈಶ್ವರ ಗುಡಿಗಿ ಹತ್ತಿಕೊಂಡಿರೋ ಮಸೀದಿ ಜಾಗ ಗುಡಿಗೆ ಸೇರಿದ್ದು, ಮಸೀದಿ ಜಾಗದಾಗ ರಾಮದೇವರ ಗುಡಿ ಕಟ್ಬೇಕು. ಅದಕ್ಕ ಊರಾಗಿನ ಹಿಂದೂ ಭಕ್ತಾದಿಗಳು ಶಕ್ತಿ ಮೀರಿ ದಾನ ಕೊಡ್ಬಕು ಅಂತ ಕೇಳಿದ್ದು, ರಾಮದೇವರ ಗುಡಿ ಕಟ್ಟೋದೇ ತಮ್ಮ ಗುರಿ; ಈ ಊರಾಗ ರಾಮದೇವರ ಗುಡಿ ಕಟ್ಟಿದ್ರನ ಹಿಂದೂ ಧರ್ಮದಾಗ ಒಗ್ಗಟ್ಟು ಐತಿ ಅಂಬದು ತೋರಿಸ್ದಂಗ ಅಂತ ರಾಮವೀರಸೇನ್ ಗುಡುಗಿದ್ದು ನೆನಪಾಯ್ತು. ಊರ ಕಡೆ ಮೆರವಣಿಗೆ ನಿಧಾನವಾಗಿ ಸಾಗಿತು...

''ಕಾಲು ಕೆದರಿ ಜಗಳ ಆಡೋದು ಅಂದ್ರ ರಾಮವೀರ ಸೇನಗ ಹಾಲು ಸಕ್ಕರಿ ಕುಡದಂಗ'' ಅಂತ ಪಕ್ಕದಾಗ ನಿಂತ ಪಿಂಜಾರ ಹುಸೇನಸಾಬ ಹೇಳಿದ. ''ಚರ್ಚ್ ಕಟ್ಟಿದಂಗ ಊರು ಬಿಟ್ಟು ದೂರ ರಾಮದೇವ್ರ ಗುಡಿ ಕಟ್ಟಿದ್ರ ಬರಂಗಿಲ್ಲೇನು? ಮಸೀದಿ ಜಾಗನ ಆಗ್ಬೇಕನು?'' ದುರುಗಪ್ಪ ಕೇಳಿದ. ''ರಾಜ್ಯನ ಒಲ್ಲೆ ಅಂತ ವನವಾಸಕ್ಕೆ ಹೋದ ರಾಮಗ ಮಂದಿರ ಕಟ್ತಾರಂತ. ನಾವೂ ಹಿಂದೂಗಳಲ್ಲೇನು. ಹುಟ್ಟಿನಿಂದ ಗುಡಿಸಾಲಾಗ ಸಾಯಾಕ ಹತ್ತೀವಿ. ನಮ್ಮಂತಾ ಬಡವರಿಗೆ ಇರಾಕ ಮನಿ ಯಾಕ ಕಟ್ಟಿಸಿಕೊಡಬಾರ್ದು. ಆ ಮಂದಿರ ಕಟ್ಟಿ ಊರಿನ ನೆಮ್ಮದಿ ಹಾಳು ಮಾಡೋದು ಯಾರಿಗಿ ಬೇಕಾಗೈತಿ?'' ಹೊಲೇರ ರಾಮು ಕೇಳಿದ. ''ನಮಗ ಪೂಜಿ ಮಾಡಾಕ ಈಶ್ವರ ಗುಡಿ ಒಳಗ ಬುಡಲಾರ್ದವ್ರು, ನಾವು ಕ್ರಿಶ್ಚಿಯನ್ ಧರ್ಮಕ್ಕ ಸೇರಿದ್ದಕ್ಕ... ಹಿಂದೂಗಳ ಸಂಖ್ಯೆ ಕಡಿಮೆ ಆಗುತ್ತಂತ ಹೊಯ್ಕೊಳ್ಳಾಕ ಹತ್ಯಾರ...'' ದುರುಗಪ್ಪ ಸಿಟ್ಟಲಿಂದ ಮಾತಾಡಿದ. ''ನಮ್ಮ ಮಕ್ಕಳಿಗೆ ಬ್ರಾಂಬ್ರು ಹಾಸ್ಟೆಲ್ಲಾದಾಗ ಜಾಗ ಕೊಡ್ತಾರೇನು. ನಾವು ಹಿಂದೂಗಳಲ್ಲ... ಯಾಕ ಸೇರ್‍ಸಿಕೊಳ್ಬಾರ್ದು'' ರಾಮು ಕೇಳಿದ. ಕೇರಿಯ ನಾಲ್ಕಾರು ಮಂದಿ ಬಂದು ಇವ್ರ ಸುತ್ತ ನಿಂತರು. ''ಸಾವಿರಾರು ವರ್ಷಗಳಿಂದ ನಮ್ ಮಂದಿಗಿ

ಅಕ್ಷರ ಹೇಳಿಕೊಡಲಾರ್ದವ್ರು... ಊರ ಹೊರಗ ಇಟ್ಟೋರು... ಕುಡಿಯೋ ನೀರು ಬಾವಿಗಿ ಬುಡಲಾರ್ದವ್ರು, ಊರಾಗಿನ ದೇವ್ರ ಗುಡಿ ಒಳಗ ನಮ್ಮನ್ನ ಕರ್ದುಕೊಳ್ಳಲಾರ್ದವ್ರು... ಇಂತೋರಿಗೆ ನಮ್ ಮ್ಯಾಲ ಒಮ್ಮಿಂದೊಮ್ಮೆಲೆ ಪಿರೂತಿ, ದಯಾ ಉಕ್ಕಿ ಹರಿಯಾಕ ಹತ್ತೈತಿ... ಅಂದ್ರ ನಾವ್ ಕುಂಡಿಲಿಂದ ನಗಂಗ ಆಗ್ಯೈತಿ'' ರಾಮು ಕಡಕ್ ಆಗಿ ಮಾತಾಡಿದ. ''ನಾವೂ ಹೋರಾಟ ಮಾಡಿದ್ರೂ, ಇಲ್ಲ, ಏನಿಲ್ಲ. ಪೊಲೀಸ್ನೋರು, ಎಮ್ಮೆಲ್ಲೆ, ಎಂಪಿಗಳ ಮುಂದ ನಮಗ ದಲಿತರ ಬಗ್ಗಿ ಗೌರವ ಐತಿ ಅಂತ ಮಾತಾಡೋದು... ಅವ್ರು ಹೋದಮ್ಯಾಲ ಮೊದಲಿನಂಗ ಇದ್ದುಬುಡದು...'' ಕೆದರಿದ ಕೂದಲು ಹೊಂದಿದ್ದ ಕಪ್ಪು ಮುಖದ ಯುವಕ ಹೇಳಿದ. ''ಇದೆಲ್ಲಾ ನಾಟಗ ತಮ್ಮಾ... ಬಡಿಗಿ ತೋರ್ಸಿದ್ರ ಮಂದಿ ಅಂಜಿಕೆಂತಾರ ಅಂತ ತಿಳಿದಾರ.'' ೫೦ರ ಆಸುಪಾಸಿನ ವ್ಯಕ್ತಿ ನುಡಿದ. ''ಎಲ್ಲಾ ಪಕ್ಷದ ರಾಜಕಾರಣಿಗೊಳು ಮೇಲ್ವರ್ಗದ ಮಂದಿಗತೆ ಮಾತಾಡ್ತಾರ... ಎಲೆಕ್ಷನ್ ಬಂದಾಗಷ್ಟ ನಾವ್ ನೆನಪಾಗ್ತೀವಿ... ನಮ್ ಉದ್ಧಾರ ಮಾಡೋ ಸೋಗು ಹಾಕಿ ಬರ್ತಾರ...'' ಅಂದ ರಾಮು.

ಊರ ಹೊರಗಿನ ಹೈಸ್ಕೂಲ್ ಮೈದಾನದಾಗ ಕಟ್ಟಿದ್ದ ಮೈಕಿನಿಂದ... ''ಸ್ವಾಮಿಗಳು ಇನ್ನೇನು ಕೆಲವೇ ನಿಮಿಷದಾಗ ಇಕ್ಕಡಿ ಬರ್ತಾರ... ಊರಿನ ಸಮಸ್ತ ಮಂದಿ ವೇದಿಕೆ ಕಡೆ ಬರ್ಬಕು...ಕ್ರಿಶ್ಚಿಯನ್ ಧರ್ಮಕ್ಕ ಸೇರಿದ ದಲಿತ ಮಂದಿ ಬಂದು ಸ್ವಾಮಿಗಳಿಂದ ಹಿಂದೂ ಧರ್ಮದ ದೀಕ್ಷಾ ತಗಳ್ಬಕು...'' ಅಂತ ಹಿಂದೂ ಸೇನೆಯ ಮುಖಂಡ ಜಯಾನಂದಯ್ಯ ಮಾತಾಡಿದ. ''ನಾವೆಲ್ಲ ಹಿಂದು... ನಾವೆಲ್ಲಾ ಒಂದು... ಹಿಂದು ರಾಷ್ಟ್ರ ಕಟ್ಟುವಾ ನಾವೆಲ್ಲಾ ಕೂಡಿ... ರಾಷ್ಟ್ರದ್ರೋಹಿಗಳಿಗೆ ಪಾಠ ಕಲಿಸುವಾ ಹರಿಸಿಯಾದ್ರೂ ರಕ್ತದಾ ಕೋಡಿ...'' ಮೈಕಿನಿಂದ ಹಾಡು ಕೇಳಿಬಂತು. ''ರಕ್ತ ಹರಸ್ತಾರಂತ... ಬ್ಯಾಸಿಗಿ ದಿವಸ್ಕ ನಮ್ ಬಾಯಿಗಿ ನೀರು ಕೊಟ್ರ ದೊಡ್ಡ ಪುಣ್ಯ...'' ದುರಗಪ್ಪ ಹೇಳಿದ್ದನ್ನ ಕೇಳಿ ಎಲ್ಲರೂ ನಕ್ಕರು.

''ನಡಿರಪೊ... ಅವ್ರು ಕೆಟ್ ಮಂದಿ... ಏನ್ ಮಾಡಾಕೂ ಹೇಸೊ ಮಂದಿಯಲ್ಲ! ಸ್ವಾಮಿಗಳಿಂದ ನಾವೂ ದೀಕ್ಷಾ ತಗಳಂಬ್ರಿ... ನಮ್ಮ ಮನಿಸ್ಯಾಗ ಇರೊ ದೇಪ್ರಸ್ನ ಧರ್ಮಾನ ಕಸ್ಗಳಾಗ ಯಾರಿಂದ ಸಾಧ್ಯ ಇಲ್ಲ...'' ರಾಮು ಹೇಳಿದ. ಹುಸೇನ್‌ಸಾಬನೂ ಅವ್ರ ಹಿಂದ ಹೊರಟ... ಹೈಸ್ಕೂಲ್ ಸಮೀಪಿಸುತ್ತಿದ್ದಂತೆ ಭಾಷಣ ಕೇಳತೊಡಗಿತು.

''ಹಿಂದೂ ಧರ್ಮಕ್ಕ ಇವತ್ತು ಆಪತ್ತು ಬಂದೈತಿ. ಧರ್ಮದ ಉಳಿವಿಗೆ ಎಲ್ಲರೂ ಕಂಕಣ ತೊಡಬೇಕು. ಕೈಯಾಗ ತ್ರಿಶೂಲ, ಲಾಠಿ ಹಿಡಿದು ಹಿಂದೂ ಧರ್ಮದ ವಿರೋಧಿಗಳನ್ನ ದೇಶಬಿಟ್ಟು ಓಡಿಸ್ಬೇಕು. ಇನ್ಮೇಲೆ ನಿಮ್ಮ ಹುಡುಗಾಟ ನಡೆಯಂಗಿಲ್ಲ... ಆಟ ಹಚ್ಚಿರೇನು... ಹಿಂದೂ ಧರ್ಮದ ಮುಗ್ಧ ಜನರಿಗೆ ಆಸಿ ತೋರ್ಸಿ ಮತಾಂತರ ಮಾಡ್ತಿರೇನು... ನಿಮ್ ಬಾಯಾಗ... ಹುಷಾರ್...!'' ರಾಮವೀರಸೇನ್‌ನ ಗುಡುಗಿದಂತಾ ಮಾತು ಕೇಳಿ ಹಿಂದೂ ಸೇನೆ ಹುಡಗ್ರು ಕೇ ಕೇ, ಶಿಳ್ಳೆ ಹಾಕಿ, ಕುಣಿದು ಕುಪ್ಪಳಿಸಿದರು. ಕೈಯಲ್ಲಿದ್ದ ಕೇಸರಿ ಬಾವುಟಗಳನ್ನ ಅಕ್ಕಡಿ ಇಕ್ಕಡಿ ಆಡಿಸಿದ್ರು...

''ದೀಕ್ಷಾ ತೊಗಳಾಕ ಬಂದ ದಲಿತ ಮಂದಿ ವೇದಿಕೆ ಮುಂಭಾಗಕ್ಕೆ ಬಂದು ಒಂದ್ಕಡಿ ನಿಂತ್ಗಬಕು... ಪೂಜಾವರ ಸ್ವಾಮಿಗಳು ದೀಕ್ಷಾ ಭೋದಿಸ್ತಾರ... ಎಲ್ಲರೂ ಶಾಂತರಾಗ ಬೇಕು...'' ಅಂತ ಹೇಳಿ, ಹಿಂದೂ ಧರ್ಮಕ್ಕೆ... ಪೂಜಾವರ ಸ್ವಾಮಿಗಳಿಗೆ... ರಾಮವೀರ ಸೇನ್‌ಗೆ... ಹಿಂದೂಸೇನೆಗೆ... ಅಂತ ಕೂಗಿ ಜನರಿಂದ ಜೈಕಾರ ಹೇಳಿಸಿದ. ಕೇರಿಯ ಐವತ್ತರವತ್ತು ಮಂದಿ ಹೆಣ್ಮಕ್ಳು... ಹುಡಗ್ರು, ಗಣಮಕ್ಳು ವೇದಿಕೆ ಮುಂದ ಅಂಜುತ್ತಲೆ ಬಂದು ತಲಿ ತಗ್ಗಿಸಿ ನಿಂತರು... ವೇದಿಕೆ ಕಟ್ಟೆ ತುದಿಗೆ ಬಂದು ನಿಂತ ಪೂಜಾವರ ಸ್ವಾಮಿಗಳು... ಕೈಯಾಗ ಮೈಕ್ ಹಿಡ್ಕಂಡು 'ಸಂಗಚ್ಚಧ್ವಮ್ ಸಮ್‌ವದಧ್ವಮ್ ಸಮ್ ವೋ ಮನಾಮ್ಸಿ ಜಾನತಾಮ್... ಸಮಾನೋ ಮಂತ್ರಃ ಸಮಿತಿಃ ಸಮಾನೀ ಸಮಾನಮ್ ಮನಃ ಸಹ ಚಿತ್ತಮೇಷಾಮ್... ಸಮಾನೀ ವ ಆಕೂತಿಃ ಸಮಾನಾ ಹೃದಯಾನಿ ವಃ... ಸಮಾನಮಸ್ತು ವೋ ಮನೋ ಯಥಾ ವಃ ಸುಸಹಾಸತೀ...'' ಅಂತ ಮಕ್ಳು ಮಗ್ಗಿ ಹೇಳಿದಷ್ಟೇ ಸಲೀಸಾಗಿ ಹೇಳಿದರು.

ಪೂಜಾವರ ಸ್ವಾಮಿಗಳು ಪಕ್ಕದಲ್ಲಿ ನಿಂತಿದ್ದ ಬೇರೆ ಮಠಗಳ ಸ್ವಾಮಿಗಳು ಹೂವಿನ ಹಾರ... ಕುಂಕುಮ, ರಾಮನ ಫೋಟೋ... ರುದ್ರಾಕ್ಷಿ ಸರ ಹಿಡಿದು ನಿಂತಿದ್ರು... ಜಯಾನಂದ ಒಬ್ಬೊಬ್ಬರ ಹೆಸ್ರು ಕೂಗಿದ. ''ಮೊದಲಿಗೆ ದುರಗ... ಅಲ್ಲಲ್ಲ ದುರುಗಪ್ಪ... ಮುಂದಕ್ಕೆ ಬರ್ಬಕು...'' ಅಂದ. ದುರಗಪ್ಪ ಮನಸ್ಸಿಲ್ಲದ ಮನಸ್ಸಿನಿಂದ ಪೂಜಾವರ ಸ್ವಾಮಿಗಳ ಮುಂದ ಬಂದು ನಿಂತ. ಜೆಡಿಎಸ್ ಪಕ್ಷದ ಎಮ್ಮೆಲ್ಲೆ ಬಸನಗೌಡ, ಕಾಂಗ್ರೆಸ್ ಪಕ್ಷದ ಎಂಪಿ ಈಶ್ವರಪ್ಪ, ಬಿಜೆಪಿ ಪಕ್ಷದ ಜಿ. ಪಂ. ಅಧ್ಯಕ್ಷ ರಮಣರೆಡ್ಡಿ ಸ್ವಾಮಿಗಳ ಹಿಂದ ನಿಂತಿದ್ರು. ಅವರ ಹಣಿ ಮ್ಯಾಲ ದುರುಗಮ್ಮದೇವಿ ಚಾಚಿದ ನಾಲಿಗಿಗತೆ ಕೆಂಪನು ನಾಮ ಎದ್ದುಕಾಣ್ತಿತ್ತು. ಹೆಗಲಿಗೆ ಕೇಸರಿ ಜರತಾರಿ ಹೆಗಲಪಟ್ಟಿ ಹಾಕ್ಕಂಡಿದ್ರು.

''ಯಾರದೋ ಒತ್ತಾಯಕ್ಕ ಬ್ಯಾರೆ ಧರ್ಮ ಸೇರಿರಿ. ನಿಮ್ಮ ಸ್ವಂತ ಧರ್ಮಕ್ಕ ಮತ್ತೆ ಬರಾಕ ಹಚ್ಚೀರಿ. ಜಗತ್ತಿನ್ಯಾಗ ಹಿಂದೂ ಧರ್ಮದಂತಾ ಶ್ರೇಷ್ಠ ಧರ್ಮ ಮತ್ತೊಂದಿಲ್ಲ. ನಮ್ ರಾಷ್ಟ್ರ ಧರ್ಮ ಹಿಂದೂ ಧರ್ಮ. ನಮ್ ರಾಷ್ಟ್ರ ಹಿಂದೂಸ್ತಾನ. ಧರ್ಮದ ರಕ್ಷಣೆಗೆ ನೀವು ದೀಕ್ಷಾ ತಗೊಳಾಗ ಹತ್ತೀರಿ... ದಿವ್ಸಾ ಮುಂಜಾನೆ ರಾಮಧ್ಯಾನ ಮಾಡಬೇಕು... ಮೂರೊಪ್ಪತ್ತು ದೇವರ ಪೂಜೆ ಮಾಡ್ಬೇಕು... ಮತ್ತೆಂದೂ ಅನ್ಯ ಧರ್ಮದ ದೇವರನ್ನ ಕಣ್ಣೆತ್ತಿ

## ಈ ಬೇಂದ್ರೆ



**ಬೇಂ**ದ್ರೆಯ ನೋಡಲಿಕ್ಕೇನಿದೆ ?
ಕಾಮನ ಕಟ್ಟಿ ಸಾಧನಕೇರಿ ಅತ್ತಿಕೊಳ್ಳ ಕೆಲಗೇರಿ
ಸುತ್ತು ಹಾಕಿದರೆ ಸಾಲದೆ ?
ಶಾಲ್ಮಲೆಯ ಗುಂಟ ಸಾಗಿದರೆ ಆಗದೆ ?

ಔದುಂಬರ ಪೇರಲ ಕಲಮಿ ಮಾವು
ಹೂತ ಹುಣಸಿಯ ಮುತ್ತಿಕ್ಕಿದರೆ...
ಹುಣವಿ ನಗೆಯ ಹಿಡಿದು ಹಾಡ ಕಟ್ಟಿದರೆ...
ಅಂಬಿಕಾತನಯ ದಕ್ಕುವುದಿಲ್ಲ;

ಸರ್ವಜ್ಞ ಲಕ್ಷ್ಮೀಶ ಮಾತಾರವಿಂದರ ಖುದ್ದು ಕಾಣಬೇಕು
ಗೋಕಾಕ ಮುಗಳಿ ಸಿಂಪಿ ಚೆನ್ನರ ಕೂಡ ಒಡನಾಡಬೇಕು
ಗೆಳೆಯರ ಗುಂಪ ಕಟ್ಟಿ ಹಾಡಿ ಆಡಬೇಕು
ಸಖ್ಯಗೀತದ ಶಿಖರ ಏರಬೇಕು;

ಮಾಳಮಡ್ಡಿಯ ಎನ್ಕೆ ಶ್ರೀನಗರದ ಕೀರ್ತಿ
ಕಲ್ಯಾಣ ನಗರದ ಕಣವಿ
ಮಗ ವಾಮನ–ಪುಣೇಕರ–ಆಮೂರರ ಎಡತಾಕಬೇಕು
ನಾಡಿಗರ ನಾಡಿ ಹಿಡಿಯಬೇಕು
ಪಟ್ಟಣಶೆಟ್ಟರ ಸುತ್ತ ಸುಳಿಯಬೇಕು
ಕಲಬುರ್ಗಿಯ ಬಳಿ ಸಾರಬೇಕು
ಶಂಬಾ ಚಂಪಾ ರಂಪ ರಾಮಾಯಣವ ತೆರೆಯಬೇಕು;

ಪಾತಾಳ ಗರಡಿಯಾಗಬೇಕು
ಕಾವಿಯುಡಬೇಕು ಮುನಿಯಾಗಬೇಕು
ಮಿಗಿಲಾಗಿ ದೃಷ್ಟಿ ಬೇಕು

ಇನ್ನೂ ಇನ್ನಷ್ಟು ಧಾರಾನಗರಿಯ
ಉಬ್ಬು ತಗ್ಗುಗಳ ಏರಿ ಇಳಿಯಬೇಕು
ಬೆವರಿಳಿಯಬೇಕು ಬೇಯಬೇಕು ನೋಯಬೇಕು
ಮತ್ತೆ ಸಾಧನಕೇರಿಗೆ ಬರಬೇಕು
ಸಕ್ಕರೆ ತಿಂದು ನೀರು ಕುಡಿಯಬೇಕು
ನಿಟ್ಟುಸಿರು ಬಿಟ್ಟ ಮೇಲೂ...
ಬೇಂದ್ರೆ ನಿಲುಕುವುದಿಲ್ಲ.

ಮುರುಕು ಛತ್ರಿಯ ತೂತ ಬೆಳಕಿಗೆ ಕಣ್ಣು ಕೂಡಿಸಬೇಕು
ಹರಕು ಕೋಟನು ಹೊದ್ದು ಮೌನದಲಿ ಧೇನಿಸಬೇಕು
ಟೊಪ್ಪಿಗೆ ರುಮಾಲುಗಳ ಗೂಡ ಸೇರಿ ನಿಗೂಢವಾಗಬೇಕು

ಆಗ

ಎಲ್ಲೋ ಒಂದಿಷ್ಟು ಮಸಮಸಕು ಚಿತ್ರ
ನಿಧಾನ ಅರಳಿಕೊಳ್ಳುತ್ತದೆ; ಬೆರಳು ತೋರುತ್ತದೆ
ಆದರೂ
ಬೇಂದ್ರೆ ಬೇಕೆನಿಸಿದ ಹಾಗೆ ಎಟಕುವುದಿಲ್ಲ,
ಕುಟುಕುತ್ತಾನೆ,
ನಂಜೇರುವುದಿಲ್ಲ!

ವಿಜಯಕಾಂತ ಪಾಟೀಲ
ಚಿಕ್ಕಾಂಶಿ, ಹೊಸೂರು - ೫೮೧ ೧೦೪, ಹಾವೇರಿ ಜಿಲ್ಲೆ

ನೋಡಬಾರ್ದು...'' ಉಪದೇಶ ಮಾಡಿದಲ ಪೂಜಾವರ ಸ್ವಾಮಿಗಳು ಕೈಯಲ್ಲಿ ಹಿಡಿದ ಬಂಗಾರದ ಬಣ್ಣದ ಕಮಂಡಲದಿಂದ ನಾಲ್ಕಾರು ಹನಿ ಬಗ್ಗಿಸಿಕೊಂಡು ವೇದಿಕೆ ಕೆಳಗ ನಿಂತಿದ್ದ ಮಂದಿಗೆ ಉಗ್ಗಿದರು... ಬಗ್ಗಿದ ತಲೆಗೆ ಎತ್ತಿನ ಕೋಡಿಗೆ ಒಗೆದಂತೆ ಹೂವಿನಹಾರ ಎಸೆದರು. ಕೆಳಗ ಬೀಳುತ್ತಿದ್ದ ಹಾರವನ್ನ ದುರುಗಪ್ಪ ಕೊಳ್ಳಾಗ ಹಾಕ್ಕೆಂಡ. ಅವರು ಕೆಳಗೆ ಒಗೆದ ಶ್ರೀರಾಮನ ಫೋಟೋ, ಕುಂಕುಮ ಡಬ್ಬಿ, ರುದ್ರಾಕ್ಷಿ ಸರಾನ್ನ ದೋತ್ರದ ಸೆರಗಿನಲ್ಲಿ ಇಸಿದುಕೊಂಡ... ಪೂಜಾವರ ಸ್ವಾಮಿಗಳ ಪಾದ ಮುಟ್ಟಿ ನಮಸ್ಕಾರ ಮಾಡ್ಬಕು ಅಂತ ಮುಂದಕ್ಕ ಬಗ್ಗಿದ. ಹಲ್ಲಿ ಮೈಮ್ಯಾಲ ಬಿದ್ದೋರಗತೆ ಸ್ವಾಮಿಗಳು ಹಿಂದಕ್ಕ ಸರಿದರು. ''ಸ್ವಾಮಿಗಳು ಮಡಿಲಿಂದ ಅದ್ಯಾರ... ದೂರದಿಂದ ನಮಸ್ಕಾರ ಮಾಡಿದ್ರೂ ಸಾಕು... ಅವ್ರಿಗೆ ಮುಟ್ಟುತ್ತ...'' ಮೈಕಿನಲ್ಲಿ ಜಯಾನಂದಯ್ಯ ಕೂಗಿದ.

ಒಬ್ಬರಾದ ನಂತರ ಒಬ್ಬರಿಗೆ ದೀಕ್ಷೆ ನೀಡಿದ ಸ್ವಾಮಿಗಳು ಹತ್ತಾರು ಬಾರಿ ಜಯಕಾರ ಹಾಕಿಸಿದರು. ''ಎಲ್ಲರೂ ಊಟ ಮಾಡಿಕೆಂಡು ಹೋಗ್ರಿ. ದಿನಾಲು ದೇವ್ರ ಗುಡಿಗೆ ಹೋಗಿ ಪೂಜೆ ಸಲ್ಲಿಸ್ಬಕು. ಬರೋ ವರ್ಷದೊಳಗ ನಿಮ್ಮೂರಾಗ ರಾಮದೇವ್ರ ಗುಡಿ ಕಟ್ಟಾಕ ಸಹಾಯ ಮಾಡ್ಬಕು. ಎಲ್ಲರೂ ಪ್ರಸಾದ ತಗಂಡು ಹೋಗ್ಬಕು... ಹಿಂದೂಗಳೆಲ್ಲಾ ಒಂದಾಗಿ ಬದುಕ್ಬಕು. ಅನ್ಯ ಧರ್ಮಕ್ಕ ನಮ್ಮ ಶಕ್ತಿ ತೋರ್ಸಬಕು...'' ''ಸರ್ವೇ ಭವಂತು ಸುಖಿನಃ, ಸರ್ವೆ ಸಾಂತು ನಿರಾಮಯಾಃ ಸರ್ವೇ ಭದ್ರಾಣಿ ಪಶ್ಯಂತು, ಮಾ ಕಶ್ಚಿದ್ದುಃಖ ಭಾಗ್ಭವೇತ್... ಶಾಂತಿಃ ಶಾಂತಿಃ ಶಾಂತಿಃ !... ಜೈ ಶ್ರೀರಾಮ'' ಎನ್ನುತ್ತಾ ವೇದಿಕೆ ಇಳಿದುಹೋದರು. ಅವರ ಹಿಂದೆ ಹಿಂದೂ ಸೇನೆ ಯುವಕರು ಜಯಘೋಷ ಹಾಕತ್ತಾ ಸಾಗಿದರು.

ಸ್ವಾಮಿಗಳು, ರಾಜಕಾರಣಿಗಳು ಹೋದ ಮ್ಯಾಲ ಜಯಾನಂದಯ್ಯ ಮೈಕಿನಲ್ಲಿ ಹೇಳಿದ, ''ಮೊದಲಿನ ಪಂಕ್ತ್ಯಾಗ... ಬ್ರಾಹ್ಮಣರು, ಅಯ್ನೋರು ಊಟಕ್ಕ ಕೂಡ್ಲಿ. ನಂತರ ಲಿಂಗಾತ್ರು, ವಕ್ಕಲಿಗೇರು... ಕೊನಿಗಿ ಕೇರಿ ಮಂದಿ ಬರ್ಬಕು... ಬರೋ ಮುಂದ ನಿಮ್ಮ ಮನಿಯಾಗಿನಿಂದ ತಂಬಿಗಿ ಗಂಗಾಳ ತರ್ಬಕು'' ಅಂತ ಸೂಚನಾ ನೀಡಿದ. ದುರಗಪ್ಪನಿಗೆ ಕೈಯಾಗಿದ್ದ ಹೂವಿನ ಹಾರನ್ನ ಕಾಲಾಗ ಹಾಕ್ಕೆಂಡು ತುಳಿಬಕು. ಸ್ವಾಮಿಗಳು ಕೊಟ್ಟ ಫೋಟೊ, ಕುಂಕುಮ, ರುದ್ರಾಕ್ಷಿ ಸರಾನ್ನ ತಿಪ್ಪಿಗೆ ಒಕ್ಕಡಬಕು ಅಂತ ಅನ್ನಿಸಿತು... ಊಟ ಮಾಡದೇ ಮನೆಗೆ ಮರಳಿದ...

*  *  *

ಹೊತ್ತು ಮುಳುಗಿದ್ರೂ ಊರ ನಡುವಿದ್ದ ಮಸೀದಿ ಮೈಕ್‌ನಿಂದ 'ಅಲ್ಲಾಹು ಅಕ್ಬರ್' ಅಂತ ಕೂಗಲಿಲ್ಲ. ಗುಡ್ಡದ ಮ್ಯಾಗಿನ ಚರ್ಚಿನಿಂದ ಯೇಸುಸ್ವಾಮಿ ಹಾಡು ಕೇಳ್ಲಿಲ್ಲ... ಊರ ಅಗಸಿ ಸಮೀಪದ ಈಶ್ವರ ಗುಡಿ ಮೈಕಿನಿಂದ ಬಸವಣ್ಣನವರ ವಚನಗಳು ಕೇಳಿಬರುತ್ತಿದ್ದವು. ''ಕಳಬೇಡ, ಕೊಲಬೇಡ; ಹುಸಿಯ ನುಡಿಯಲುಬೇಡ; ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ...'' ಕೇಳಿದಾಗ ಗುಡಿಸಲಿ ಒಳಗ ಕುಂತಿದ್ದ ದುರುಗಪ್ಪ ಹೊರಗ ಬಂದ. ಅಕ್ಕಡಿ ಇಕ್ಕಡಿ ಓಡಾಡಿ ದಣಕಂಡಿದ್ದ ಮಗಳು ಮೇರಿ ಅಪ್ಪನ ತೊಡಿ ಮ್ಯಾಲ ತಲಿಯಿಟ್ಟು ಮಲಗಿದಳು. ಮಗ ಡೇವಿಡ್ ಯೇಸುಸ್ವಾಮಿ ಫೋಟೋ ಮುಂದ ಕುಂತ್ಗಂಡು ಪ್ರಾರ್ಥನೆ ಮಾಡಿ. 'ಆಮೇನ್' ಅಂದ.

ಕೇರಿಯ ಹತ್ತಾರು ಯುವಕರು ಕೈಯಾಗ ಎಣ್ಣೆ, ಬತ್ತಿ, ತೆಂಗಿನಕಾಯಿ, ವಿಭೂತಿ ಉಂಡಿ, ಕುಂಕುಮ, ಬಿಲ್ಪತ್ರಿ, ಊದಿನಕಡ್ಡಿನ ಹಿಡಕಂಡು ದುರುಗಪ್ಪನ ಮನಿ ಮುಂದ ನಿಂತರು. ''ದುರುಗಪ್ಪಣ್ಣ, ಮಧ್ಯಾಹ್ನ ದೊಡ್ಡ ಸ್ವಾಮೇರು ಹೇಳಿಲ್ಲೇನು ? ಎಲ್ಲ ಹಿಂದುಗಳು ಒಂದಾಗಿರ್ರಿ ಅಂತ. ಗುಡಿಗೆ ಹೋಗಿ ಪೂಜಾ ಮಾಡ್ರಿ ಅಂತ ಹೇಳಿಲ್ಲೇನು ? ನಾವು ಇವತ್ತು ಈಶ್ವರನ ಗುಡಿ ಒಳಗ ಹೋಗಿ ಪೂಜೆ ಮಾಡ್ತೀವಿ. ದೀಪ ಮುಡಿಸಿ, ಊದಿನಕಡ್ಡಿ ಬೆಳಗಿ, ಕಾಯಿ ಒಡ್ಕಂಡು ಬರ್ತೀವಿ. ನಮಗ ದೇವಸ್ಥಾನ, ಬಾವಿ, ಹೋಟ್ಲದೊಳಗ ಹೋಗಾಕ ಬುಟ್ರ... ಹಿಂದೂ ಧರ್ಮಕ್ಕ ಸೇರಿವಿ ಅಂತ ಅರ್ಥ. ಇಲ್ಲಕ್ಕಂದ್ರ ಯೇಸುಸ್ವಾಮಿನ ನಮಗ ದೇವ್ರು.'' ರಾಮು, ಬಸ್ಯಾ, ಲಚುಮ, ಸ್ಟ್ಯಾನ್ಲಿ, ಪೀಟರ್, ಲೂಯಿಸ್, ಜೋರ್ಡನ್, ಜಾರ್ಜ್ ಮತ್ತಿತರ ಯುವಕರು ಈಶ್ವರ ಗುಡಿ ಕಡೆ ಹೆಜ್ಜೆಹಾಕಿದರು. ''ಜೇನಿನ ಗೂಡಿಗೆ ಕಲ್ಲು ಒಗೇದು ಬ್ಯಾಡ... ಹಂಗ ಅಷ್ಟುದ್ದ ಭಾಷಣ ಮಾಡಿದ ದೊಡ್ಡ ಸ್ವಾಮಿ ನಮ್ಮಿಂದ ಒಬ್ರ ಕುಡಾನ ಕಾಲು ಮುಗ್ಸಿಕೊಂಡ್ನೇನು ? ಅವ್ರು ಶಾಸ್ತ್ರ ಹೇಳೋ ಮಂದಿ. ಅವ್ರ ಮಾತು ಕೇಳೋದು ಬ್ಯಾಡ'' ಅಂತ ದುರುಗಪ್ಪ ಅವರಿಗೆ ತಿಳಿಸಿ ಹೇಳಿದ. ತನ್ನ ಮಾತು ಕೇಳ್ಲಿಲ್ಲ ಅಂತ ಗೊತ್ತಾತು... ಮಗಳನ್ನ ಗುಡಿಸಲಿ ಒಳಗ ಮಲಗಿಸಿ ಆಕಿ ಮ್ಯಾಲ ಹಳೆ ಸೀರಿ ಹೊದಿಸಿ ಬಂದ. ಅವ್ರ ಹಿಂದನ ಓಡಿಹೋದ. ಪಿಡ್ಡವ್ವ ಒಳಗ ಅನ್ನ ಮಾಡದು ಬುಟ್ಟು ಹೊರಗ ಬಂದು ಕೇರಿ ಮಂದಿ ಹೋದ ದಿಕ್ಕಿಗೆ ನೋಡಿದಳು. ಸಮಾಧಾನವಾಗಲಿಲ್ಲ. ಹೊರಗೆ ಆಡುತ್ತಿದ್ದ ಮಗ ಡೇವಿಡ್‌ನ್ನ ಸನ್ನೆ ಮಾಡಿ ಒಳಕರೆದಳು... ಮಗನನ್ನ ಅಪ್ಪಿಕೊಂಡೆ ಗುಡಿಸಲು ಒಳಗ ಹೋದಳು...

ಕೇರಿ ಮಂದಿ ಗುಡಿ ಸಮೀಪಿಸುತ್ತಿದ್ದಂತೆ ಮೈಕಿನಿಂದ, ಬಸವಣ್ಣನವರ ''ಇವನಾರವ... ಇವನಾರವ ಇವನಾರವ ನೆಂದೆನಿಸದಿರಯ್ಯ... ಇವ ನಮ್ಮವ ಇವ ನಮ್ಮವ ಇವ ನಮ್ಮವನೆಂದೆನಿಸಯ್ಯ'' ಎಂಬ ಹಾಡು ಸುಶ್ರಾವ್ಯವಾಗಿ ಕೇಳಿ ಬಂತು. ಅಗಸಿ ದಾಟಿ ಹೋಗುತ್ತಿದ್ದ ಕೇರಿ ಮಂದೀನ ದುಗುಡದಿಂದ ನೋಡಿದ ಅಗಸಿಕಟ್ಟೆಗೆ ಕುಂತ ಊರ ಮಂದಿ... ''ಏನ ಅನಾಹುತ ಮಾಡದಕಂತ ಇಲ್ಲಿಗೆ ಬಂದಾರ ಇವ್ರು.'' ''ಕಾಲ್ಮರಿನ ಎಲ್ಲಿ ಇಡಬಕು ಅಲ್ಲಿ ಇಟ್ರ ಬೇಸು''... ''ಬಂಗಾರದ ಚಪ್ಪಲಿ ಅಂತ ತಲಿ ಮ್ಯಾಲ ಹೊತ್ಗಂಡು ನಡೆಯಾಕ ಆಗಾಕುತ್ತೇನು ?'' ಎಂದೆಲ್ಲಾ ನಡ್ಲಮನಿ ಮಲ್ಲಣ್ಣ, ಮಾಜಿ ಛೇರ್ಮನ್ ಬಸನಗೌಡ, ಗುರುರಾಜ ಪುರೋಹಿತ, ನಾಗೇಂದ್ರಪ್ಪ, ಬೇವಿನಾಳ ಶ್ಯಾಣಪ್ಪ, ಅಯ್ನೋರು ಅಮರಯ್ಯ, ಬಡಿಗೇರ ವಿರುಪಾಕ್ಷಪ್ಪ ತಲೆಗೊಂದು ಮಾತಾಡಿದರು.

ಇನ್ನೇನು ಕೇರಿ ಮಂದಿ ಈಶ್ವರ ಗುಡಿ ಪಾಂಟುಣಿಗಿ ಹತ್ತಬೇಕು ಅನ್ನುತ್ತಿರುವಾಗ... ಬಸನಗೌಡ ಕೆಂಡಾಮಂಡಲವಾದ. ''ಲೇ ಮಾದ್ಗ ಸೂ... ಮಕ್ಳೆ... ಮೈತಿರುಗಾಕ ಹತ್ಯೆತೇನು ? ಎಷ್ಟು ಸೊಕ್ಕು ನಿಮ್ದು... ದೀಕ್ಷಾ ತಗೊಂಡು ಬುಟ್ರ ನಿಮ್ ಜಾತಿ ಬ್ಯಾರೆ ಆಯ್ತು ಅಂತ ತಿಳಕಂಡಿರೇನು ? ಮೊದ್ಲು ಕಾಲು ಹಿಂದಕ್ಕ ತಕ್ಕಳ್ಳಿ...'' ಕಟ್ಟೆಲಿಂದ ಕೆಳಗ ಇಳಿಯುತ್ತಾ ಹೇಳಿದ.

''ಏ ರಾಮ, ಗೌಡ್ರ ಕೂಗಾಕ ಹತ್ಯಾರ... ಹಂಗೆ ಪಾಂಟುಣಿಗಿ ಹತ್ತಿತಿಯಲ್ಲ... ಇಳ್ಯಾ ಇಲ್ಲ...'' ಮೂರು ಪೂಟು ಇದ್ದ ಗುರುರಾಜ ಪುರೋಹಿತ ನಾಲ್ಕು ಪೂಟು ಮ್ಯಾಲ ಎಗರಿ ಮಾತಾಡಿದ. ದುರುಗಪ್ಪಗ ಯಾರಿಗೆ ಏನು ಹೇಳ್ಬಕು ಅಂತ ಗೊತ್ತಾಗ್ಲಿಲ್ಲ... ಗುಡಿ ಮುಂದ ನಿಂತ್ಗಂಡು ಕೈಮುಗಿದು ನಿಂತ. ಕಟ್ಟಿ ಮ್ಯಾಲಿದ್ದ ಹತ್ತಾರು ಮಂದಿ... ಸಮೀಪದ ಮನೆಗಳ ಇಬ್ರು ಮೂವರು ಕೈಯಾಗ ಬಡಿಗಿ ಹಿಡಕಂಡು ತಮ್ಮಪ್ಪ, ತಾತನ ಆಸ್ತೀನ ಕಸ್ಗಳ್ಳಾಕ ಬಂದಾರ ಅಂಬಂಗ ಓಡಿಬಂದರು. ಗುಡಿ ಮುಂದ ನಿಂತ ದುರುಗಪ್ಪನ್ನ ನಾಲ್ಕಾರು ಮಂದಿ ನೂಕಿದರು. ಜೋಲಿ ತಡೆಯದೆ ಕೆಳಗೆ ಬಿದ್ದು, ಮತ್ತೆ ಎದ್ದು ನಿಂತ. ಗುಡಿ ಒಳಗ ಹೋಗಿದ್ದ ಕೇರಿ ಮಂದಿ ಕೈಹಿಡಿದು ಹೊರ್ಗ ಎಳೆದು ದಬ್ಬಿದರು. ಇಬ್ರು ಮೂವರಿಗೆ ಎಲ್ಲಿ ಬೇಕಲ್ಲಿ ಕಟ್ಟಿಗೆ ಏಟು ಬಿದ್ದು ಈಶ್ವರ ಗುಡಿ ಒಳಗ ಅಲ್ಲಲ್ಲಿ ಕುಂಕುಮ ಚೆಲ್ಲಿದಂತೆ ರಕ್ತ ಚೆಲ್ಲಿತ್ತು.

''ಮತಾಂತರ ಅಂತ ಮುಂಜಾನಿ ನಾಟಗ ಮಾಡಾಕ ಬರುತ್ತ... ಸಂಜಿಕಿ ಗುಡಿಗಿ ಪೂಜಿಗಿ ಬಂದ್ರ ನಾಯಿ, ಹಂದಿಗತೆ ಮಾಡ್ತೀರಿ... ನಿಮ್ಮ ಮ್ಯಾಲ ಕೇಸು ಮಾಡ್ತಿವಿ... ಹೊಡೆದು ಬಡಿಯೋದು ನಿಮಗಷ್ಟ ಗೊತ್ತೈತಿ ಅಂತ ಮಾಡಿರೇನು...? ನಮ್ ಸಿಟ್ಟು ಏನೆಂಬದು ನಿಮಗೆ ತಿಳಿಸ್ತೀವಿ...'' ದುರುಗಪ್ಪ ಸ್ವಲ್ಪ ಸಿಟ್ಟಿಲೆ ಮಾತಾಡಿದ. ''ಲೇ ದುರಗ, ಸೊಕ್ಕು ಏನಲೆ... ನಮ್ಮ ಮನಿ ಹೇಲು ತಿಂದು ಸೊಕ್ಕು ನೆತ್ತಿಗೇರೈತೇನಲೆ ನಿನಗ...'' ಬಸನಗೌಡ ಪಕ್ಕದಲ್ಲಿ ನಿಂತಿದ್ದ ಒಬ್ಬನ ಕೈಯಲ್ಲಿದ್ದ ಕಟ್ಟಿಗಿಲಿಂದ ದುರುಗನ ತಲೆ, ಬೆನ್ನಿಗೆ ಹೊಡೆದ... ನಾಲ್ಕಾರು ಮಂದಿ ಆತನ ಮ್ಯಾಲ ಬಿದ್ದರು. ಕೇರಿ ಮಂದಿ ಊರ ಮಂದಿ ಕೈಯಾಗಿದ್ದ ಎರಡ್ಮೂರು ಬಡಿಗೆ ಕಸ್ಗಂಡು ಊರ ಮಂದಿ ಮ್ಯಾಲ ಏರಿ ಹೋದ್ರು. ಈ ಕೇರಿ ಮಂದಿ ನಮ್ಮನ್ನ ಬುಡಾಕಿಲ್ಲ ಅಂತ ಗುರುರಾಜ, ಶ್ಯಾಣಪ್ಪ, ಮಲ್ಲಣ್ಣ ಮುಕುಳ್ಯಾಗ ಬಾಲ ಇಟ್ಗಂಡು ಓಡಿದರು. ದುರುಗಪ್ಪ ನೆಲದ ಮ್ಯಾಲ ಬಿದ್ದು ಒಳ್ಯಾಡದು ನೋಡಿದ ಊರ ಮಂದಿ ಇಷ್ಟಕ್ಕ ಸಾಕು ಅಂಬಂತೆ ಓಟ ಕಿತ್ತರು...

''ಚರ್ಚಿನ ಫಾದರ್ತಲ್ಲಿ ಕರ್ಕಂಡು ಹೋಗ್ಬಕು. ಏನಾದ್ರು ಔಷಧ ಕೊಡ್ತಾರ... ದುರುಗಪ್ಪನ ತಲಿ ಹೊಡದೈತಿ... ರಾಮುನ ಕೈಗಿ. ಯಲ್ಲನ ಬೆನ್ನಿಗೆ ಏಟು ಬಿದ್ದು ರಕ್ತ ಸೋರಾಕ ಹತ್ತೈತಿ...'' ಅಂತ ಹುಲುಗ ಹೇಳಿದ. ''ಫಾದರು ಮುಂಜಾನಿ ಬಳ್ಳಾರಿಗೆ ಹೋಗಿದ್ರು... ಬಂದಾರೊ ಇಲ್ಲೊ...'' ಜಾರ್ಜ್ ಸಂಶಯ ವ್ಯಕ್ತಪಡಿಸಿದ. ''ಅವ್ರು

## ನಮ್ರ ನಮನ



ತಾವು ನಂಬಿದ ಪ್ರಗತಿಪರ ವಿಚಾರಗಳಿಗೆ ಕೊನೆಯುವರೆಗೂ ಬದ್ಧರಾಗಿ ಉಳಿದಿದ್ದ ದಿಟ್ಟ ವ್ಯಕ್ತಿತ್ವದ, ಪ್ರಖರ ವಿಚಾರವಾದಿ ಪ್ರೊ॥ ಕೆ. ರಾಮದಾಸ್ ಕೋಮುವಾದ, ಜಾತಿವಾದ, ಮೂಢ ನಂಬಿಕೆಗಳು, ಆಷಾಢಭೂತಿತನ – ಈ ಪಿಡುಗುಗಳ ವಿರುದ್ಧದ ಹೋರಾಟದಲ್ಲಿ, ಹಾಗೆಯೇ ರೈತ ಚಳುವಳಿಗಳು, ದಲಿತ ಚಳುವಳಿಗಳು, ಕನ್ನಡ ಚಳುವಳಿ ಮುಂತಾದ ಜನಪರ ಆಂದೋಲನಗಳಲ್ಲಿ ಸದಾ ಮುಂಚೂಣಿಯಲ್ಲಿ ಇರುತ್ತಿದ್ದರು. ನವಕರ್ನಾಟಕದ ಹಿತೈಷಿ, ಇತ್ತೀಚೆಗೆ ನಿಧನರಾದ (೧೯.೬.೨೦೦೭) ಶ್ರೀಯುತರ ನೆನಪಿಗೆ 'ಹೊಸತು' ಗೌರವ ಸಲ್ಲಿಸುತ್ತದೆ.

ಇಲ್ಲಂದ್ರ ಹುಸೇನ್ ಸಾಬಣ್ಣಂತಲ್ಲಿ ಕರ್ಕಂಡು ಹೋಗಿ ಯಾವುದಾದ್ರೂ ತೊಪ್ಲದ ಔಷಧ ಕೊಡ್ಸಿದ್ರ ಆಯ್ತು'' ಅಂತ ಲಚುಮ ದುರುಗಪ್ಪನ ಕೈಹಿಡಿದು ಮೆಲ್ಲಕ ನಿಲ್ಲಿಸಿದ. ಪೀಟರ್ ಕಂಕುಳಲ್ಲಿ ಕೈಹಾಕಿ ಎತ್ತಿಕೊಂಡ. ಲೂಯಿಸ್ ನಡುವು ಹಿಡಿದ. ಬಸ್ಯಾ ಕಾಲು ಹಿಡಕೊಂಡ. ನಿಧಾನವಾಗಿ ದುರುಗಪ್ಪನ್ನ ಎತ್ತಿಕೊಂಡು ಹುಸೇನ್‌ಸಾಬನ ಮನೆಯತ್ತ ಹೋದರು.

ಮನಿ ಮುಂದ ಹತ್ತಾರು ಮಂದಿ ನಿಂತಂತೆ ಕಂಡಾಗ ಹುಸೇನ್‌ಸಾಬ ಮನಿಯಾಗಿದ್ದ ದೀಪದ ಬೆಳಕನ್ನು ಹೆಚ್ಚುಮಾಡಿ ಹೊರಗ ನೋಡಿದ. ದೀಪವನ್ನೇ ಹೊರಗೆ ಹಿಡಿದುಬಂದು ಅವರನ್ನ ಕಟ್ಟೆ ಮ್ಯಾಲ ಕೂಡಿಸಿದ. ಹೆಂಡತಿ ಮೌಲಾಬಿ ಬಂದ ಜನರಿಗೆ ಕುಡಿಯಾಕ ನೀರು ಕೊಟ್ಟಳು. ಹುಸೇನ್‌ಸಾಬ ಯಾವುದೊ ತೊಪ್ಲದ ರಸ ಮಾಡಿ ದುರುಗಪ್ಪನ ತಲೆ, ಬೆನ್ನಿಗೆ ಹಚ್ಚಿದ. ಮೌಲಾಬಿ ತಂದುಕೊಟ್ಟ ಹಳೆ ಧೋತರದ ಬಟ್ಟೀನ ತಲೆಗೆ ಕಟ್ಟಿದ. ಗಾಯಗಳಾದವರಿಗೆ ತೊಪ್ಲ ಹಚ್ಚಿ... ಸ್ವಲ್ಪ ಹೊತ್ತು ಕುಂತು ಹೋಗ್ರಿ ಅಂತ ಹೇಳಿ... ಅವರ ಜತೆ ಕುಂತ. ಗುಡಿತಲ್ಲಿ ನಡೆದಿದ್ದನ್ನ ಒಬ್ಬೊಬ್ಬರು ಕಥಿ ಮಾಡಿ ಹೇಳತೊಡಗಿದರು...

ಕೇರಿಯಲ್ಲಿ ಒಮ್ಮೆಂದೊಮ್ಮೆಲೆ ಗುಡಿಸಲುಗಳು ಉರಿಯಾಕ ಹತ್ತಿದ್ದು ಕಂಡಿತು. ಕೇರಿ ಹೆಣ್ಮಕ್ಳು, ಮಕ್ಳು ಹೊಯ್ಕಳ್ಳೋದು, ಅಳೋದು, ಚೀರೋದು ಕೇಳಿಸಿತು. ದುರುಗಪ್ಪನ ಎದಿ ಧಸಕ್ಕೆಂದಿತು. ''ನಡ್ರಿ... ನಡ್ರಿ... ಜಲ್ದಿ ಹೋಗಿ ನೋಡಾಮ್ರಿ...'' ಅನ್ನುತ್ತಾ ಹುಸೇನ್‌ಸಾಬ ಎದ್ದುನಿಂತ... ದುರುಗಪ್ಪ ಮೈಯಾಗ ಅದೆಂತದೋ ಶಕ್ತಿ ಬಂದೈತಿ ಅಂಬಂಗ ಎದ್ದು ಅವರ ಹಿಂದ ಬೀಳುತ್ತಾ ಏಳುತ್ತಾ ನಡೆದ. ತಲೆಗೆ ಕಟ್ಟಿದ ಬಿಳಿ ಪಟ್ಟಿ ಲೂಜಾದಂತೆ ಅನ್ನಿಸಿತು. ಕುತ್ತಿಗೆವರೆಗೆ ಪಟ್ಟಿ ಇಳಿಯಿತು. ತಲಿಮ್ಯಾಲಿಂದ ರಕ್ತ ಸೋರುತ್ತಿತ್ತು. ಅಂಗೈಗಿ ರಕ್ತ ಒರೆಸಿಕೊಳ್ಳುತ್ತಲೆ ಓಡಿದ. ಬೆನ್ನಿನಲ್ಲಿ ಅಸಹನೀಯ ನೋವಾಯಿತು. ಕೇರಿ ಮುಂದ ಬರುತ್ತಲೇ ಇಪ್ಪತ್ತಮೂವತ್ತು ಜನ ''ಭಾರತ ಮಾತಾಕಿ ಜೈ'' ''ಜೈ ಹಿಂದ್'' ''ಹಿಂದೂ ಧರ್ಮಕ್ಕೆ ಜಯವಾಗಲಿ'' ''ಹಿಂದೂ ಸೇನೆಗೆ ಜಯವಾಗಲಿ'' ಎಂದು ಕೂಗಿದ್ದು ಕೇಳಿತು. ಕೈಯಲ್ಲಿ ಪಂಜು ಹಿಡಿದ ಜನ ಬಸ್‌ಸ್ಟ್ಯಾಂಡಿನತ್ತ ಹೆಜ್ಜೆಹಾಕಿದರು. ಅವರಲ್ಲಿ ಹಿಂದೂ ಸೇನೆ ಮುಖಂಡ ಜಯಾನಂದಯ್ಯ ಕಂಡ. ''ಸನಾತನ ನೀತಿ ನಿಯಮ ಮೀರಿದ್ರ... ಎಲ್ಲರಿಗೂ ಇದ ಗತಿ...'' ಎಂದು ಜೋರಾಗಿ ಕೂಗಿದ ಜಯಾನಂದಯ್ಯ ಜೋಳದ ಹೊಲದಲ್ಲಿ ಗುಬ್ಬಿ ಹೊಡೆಯುವಂತೆ ಕೇಕೆ ಹಾಕಿದ...

ದುರುಗಪ್ಪನ ತಲಿ ಮ್ಯಾಲಿಂದ ಕಪಾಳದ ಮೇಲೆ ರಕ್ತ ತಟ್ ತಟ್ ಅಂತ ಇಳೀತಿತ್ತು. ನಾಲ್ಕಾರು ಮಂದಿ ಕುಡ ಗುಡಿಸಲಿ ಮುಂದ ನಿಂತಾಗ ಆಕಾಶನ ಕಳಚಿ ಬಿದ್ದಂತೆ ಅನ್ನಿಸಿತು. ಗುಡಿಸಲಿ ಸಂಪೂರ್ಣ ಸುಟ್ಟಿತ್ತು. ಅಲ್ಲೊಂದು ಇಲ್ಲೊಂದು ಬಲೀಸು ಆಕಾಶ ಮುಖಮಾಡಿ ಪಂಜಿನಂತೆ ಉರಿಯುತ್ತಿದ್ದವು. ಇನ್ನೂ ಉರಿ ಆರಿರಲಿಲ್ಲ... ಕೇರಿ ಜನ ಮಣ್ಣು, ನೀರು ಉಗ್ಗುತ್ತಿದ್ದರು. ಪಿಡ್ಡವ್ವ ಗಂಡ ಬಂದದ್ದು ನೋಡಿ ನೆಲಕ್ಕ ಬಿದ್ದು ಉಳ್ಳ್ಯಾಡಿದಳು... ದಿಡಗ್ಗನ ಎದ್ದು ಕುಂತು ಹಿಡಿಯಲ್ಲಿ ಹುಡಿ ಮಣ್ಣು ಹಿಡಿದು ನೆಲಕ್ಕ ತೂರಿದಳು... ''ಲೋ ಭಂಡನನ ಮಕ್ಳಾ... ಈಗ ಸಮಾಧಾನ ಆಯ್ತಾ... ನಿಮ್ ಜಲ್ಮಕ್ಕ... ಇನ್ನೊಬ್ಬರಿಗೆ ತೊಂದ್ರಿ ಕೊಡು ಅಂತ ಹೇಳುತ್ತೇನು ನಿಮ್ ಧರುಮ.'' ಕೆಟ್ ದನೀಲೆ ಕೂಗಿದಳು. ಡೇಪಿಡ್ ಬಂದು ಅವ್ವನ ಅಪ್ಪಿಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದ. ಮಗಳು ಮೇರಿ ಕಾಣಲಿಲ್ಲ. ಇಬ್ರು ಮೂವರು ಗುಡಿಸಲಿನಿಂದ ಸುಟ್ಟ ಹಸಿಕಟ್ಟಿಗೆಯಂತಿದ್ದ ಕರಕಾದ ಮೇರಿ ದೇಹ ಹೊತ್ತು ತಂದರು... ದುರುಗಪ್ಪನ ತಲೆ ತಿರುಗಿದಂತಾಗಿ ನೆಲಕ್ಕೆ ದೊಪ್ಪನೆ ಬಿದ್ದ... ಪಿಡ್ಡವ್ವ ಹಿಡಿದ ಮಣ್ಣನ್ನೆ ಬಾಯಲ್ಲಿ ಹಾಕಿಕೊಂಡು ವಿಕಾರವಾಗಿ ಚೀರತೊಡಗಿದಳು...

ಗುಡಿಸಲುಗಳಿಗೆ ಹತ್ತಿದ್ದ ಬೆಂಕಿ ಆರಿತ್ತು. ಕೇರಿ ಮಂದಿ ಹೊಟ್ಟೆಯಲ್ಲಿ ಅಗ್ನಿಕುಂಡ ಕತಕತ ಕುದಿಯುತ್ತಿತ್ತು. ಬಸ್‌ಸ್ಟ್ಯಾಂಡಿನ ಸಮೀಪ ಕಟ್ಟಿದ್ದ ಕೇಸರಿ ಬಾವುಟಗಳು ಅರೆಬರೆ ಬೆಳಕಿಗೆ ಕಡುಕೆಂಪಾಗಿ ಕಂಡವು. ದುರುಗಪ್ಪ ಎಚ್ಚರಗೊಂಡ. ಪಕ್ಕದಲ್ಲೆ ಮೇರಿ ಅಲುಗಾಡದೆ ಮಲಗಿದ್ದಳು. ಪಿಡ್ಡವ್ವ ಸುಟ್ಟ ಮಗಳ ದೇಹದ ಮೇಲೆ ಬಿದ್ದು ಉರುಳಾಡಿದಳು... ''ನಿನ್ನ ಕೊಂದ ಕೈಗಳಿಗೆ ಕರಿನಾಗರ ಕಡೀಲಿ... ಅವ್ರ ವಂಶ ನಾಶ ಆಗ್ಲಿ...'' ಬೈಯುತ್ತಿದ್ದಳು. ಕೇರಿಯ ಹತ್ತಾರು ಮಂದಿ, ಹುಸೇನ್‌ಸಾಬ, ತಳವಾರ ಯಮುನ ಕಣ್ಣಿಗೆ ಟವಲು ಹಿಡಿದು ಬಿಕ್ಕಿ ಬಿಕ್ಕಿ ಅಳುತ್ತಿದ್ದರು. ದುರುಗಪ್ಪ ಗುಡ್ಡದ ಮ್ಯಾಗಿದ್ದ ಚರ್ಚಿನ ಕಡೆ ನೋಡಿ ಒಂದು ನಿಮಿಷ ಕಣ್ಣುಚ್ಚಿ ನಿಂತ... ಫಾದರ್ ಮಿನೇಜಸಪ್ಪ ನೆನಪಾದ. ಅವ್ರು ಹೇಳುತ್ತಿದ್ದ ಕಥೆ ನೆನಪಾಯ್ತು... ಡೇವಿಡ್ ಅಪ್ಪನ ಕುತ್ತಿಗಿ ಸುತ್ತ ಕೈಹಾಕಿ ಅಪ್ಪಿಕೊಂಡ. ಮಗನನ್ನು ಕೆಳಗಿಳಿಸಿದ ದುರುಗಪ್ಪ ಕರಕಲಾದ ಮೇರಿ ದೇಹ... ಸುಟ್ಟ ಗುಡಿಸಲು ನೋಡಿದ... ಪಂಜು ಹಿಡಿದುಹೋದ ಜನ ಕಣ್ಮುಂದ ಹಾದು ಹೋದಂತೆ ಅನ್ನಿಸಿತು... ಚರ್ಚಿನ ಕಡೆ ಮುಖ ಮಾಡಿ ಎರಡೂ ಕೈಮುಗಿದು ಮನಸ್ಸಿನಲ್ಲೆ ಬೇಡಿಕೊಂಡ... ''ಯೇಸು ಸ್ವಾಮಿ... ಈ ಮಂದಿಗೆ ತಾವೇನು ಮಾಡಾಕ ಹಚ್ಚೇವಿ ಅಂಬದು ತಿಳಿವಲ್ದು... ಅವ್ರ ತಪ್ಪನ್ನ ಕ್ಷಮಿಸಿಬಿಡು... ತಂದೆ'' ಎಂದಾತನೇ ನೆಲಕ್ಕ ಕುಸಿದು ಬಿದ್ದ... ಪಿಡ್ಡವ್ವ, ಡೇವಿಡ್ ಬಿದ್ದ ದುರುಗಪ್ಪನ ಮೇಲೆ ತಲೆಯಿಟ್ಟು ಜೋರಾಗಿ ಅಳತೊಡಗಿದರು...

**ಕಲಿಗಣನಾಥ ಗುಡದೂರು**
ಅಂಚೆ : ಗುಡದೂರು, ಮಾರ್ಗ : ಮಸ್ಕಿ, ಜಿಲ್ಲೆ: ರಾಯಚೂರು - ೫೮೪ ೧೨೪

# ಲಿಂಗ ತಾರತಮ್ಯ ಮತ್ತು ಮಾನವ ಹಕ್ಕುಗಳು

**ಭಾ**ರತ ಪುರುಷಪ್ರಧಾನ ಸಮಾಜ. ಪುರುಷ ಪ್ರಾಧಾನ್ಯತೆ ಭಾರತೀಯ ಸಮಾಜದ ಮೂಲಭೂತ ಲಕ್ಷಣಗಳಲ್ಲೊಂದಾಗಿದ್ದು, ಲಿಂಗ ತಾರತಮ್ಯವನ್ನು ವಿರೋಧಿಸುವ ಸರ್ವ ಪ್ರಯತ್ನಗಳೂ ವಿಫಲತೆ ಕಂಡಿವೆ. ಲಿಂಗ ಸಮಾನತೆಗಾಗಿ ನಡೆದ ಅವಿಶ್ರಾಂತ ಹೋರಾಟ ಮತ್ತು ದೇಶವು ಸ್ವಾತಂತ್ರ್ಯ ಪಡೆದ ನಂತರ ಸ್ವೀಕರಿಸಿದ ಸಂವಿಧಾನದಿಂದಾಗಿ ಲಿಂಗ ಸಮಾನತೆಗೆ ಪ್ರಾಧಾನ್ಯತೆ ನೀಡಲಾಯಿತು. ಸ್ವಾತಂತ್ರ್ಯಾನಂತರ ಲಿಂಗಸಮಾನತೆಯನ್ನು ಎತ್ತಿ ಹಿಡಿಯುವ ಹಲವಾರು ಸಂವಿಧಾನಾತ್ಮಕ ಕ್ರಮಗಳನ್ನು ತೆಗೆದುಕೊಂಡಿದ್ದರೂ ಅವುಗಳು ಉದ್ದೇಶಿತ ಫಲಿತಾಂಶವನ್ನು ನೀಡುವಲ್ಲಿ ಯಶಸ್ವಿಯಾಗಿಲ್ಲದಿರುವುದು ಕಟು ವಾಸ್ತವ. ಕಾಲದಿಂದ ಕಾಲಕ್ಕೆ ಸ್ತ್ರೀಯರಿಗೆ ಸಮಾನತೆ ದೊರಕಿಸಲು ಸಾಮಾಜಿಕ ಶಾಸನಗಳಾದ 'ಪಿತ್ರಾರ್ಜಿತ ಆಸ್ತಿಯಲ್ಲಿ ಸಮಾನ ಹಕ್ಕು', 'ವಿಧವಾ ಪುನರ್ವಿವಾಹ', 'ಹೆಣ್ಣು ಶಿಶು ಭ್ರೂಣಹತ್ಯೆ ನಿಷೇಧ', ವರದಕ್ಷಿಣೆ ನಿಷೇಧ, ಸೀತಾ, ಪೀತಾ ಮತ್ತು ಲಿಂಗ ಪತ್ತೆ (ವೈದ್ಯಕೀಯ ತಪಾಸಣೆ) ನಿಷೇಧ ಜಾರಿಗೊಳಿಸಲಾಗಿದೆ. ಆದರೆ ಈ ಎಲ್ಲ ಶಾಸನಗಳು ಸಾಮಾಜಿಕ ಪರಿವರ್ತನೆ ತರುವಲ್ಲಿ ಯಶಸ್ವಿಯಾಗಿರುವುದಿಲ್ಲ. ಕಾರಣವೇನೆಂದರೆ, ಸಾಮಾಜಿಕ ಶಾಸನಗಳನ್ನು ಜಾರಿಗೆ ತರುವ ಪ್ರಕ್ರಿಯೆಯಲ್ಲಿ ಪುರುಷಪ್ರಧಾನ ಸಾಮಾಜಿಕ ಮೌಲ್ಯಗಳ ಛಾಯೆಯನ್ನು ತೀವ್ರವಾಗಿ ಗುರುತಿಸಬಹುದು. ಉದಾಹರಣೆಗೆ, ವರದಕ್ಷಿಣೆ ನಿಷೇಧ ಕಾನೂನು ವರದಕ್ಷಿಣೆಯ ಪಿಡುಗಿಗೆ ತುತ್ತಾದ ಮುಗ್ಧ ಮತ್ತು ಅಮಾಯಕ ಸ್ತ್ರೀಯರಿಗೆ ಒದಗಿಸುವ ಸಾಮಾಜಿಕ ರಕ್ಷಣೆಯಾಗಿದ್ದು, ಅದನ್ನು ಜಾರಿಗೊಳಿಸುವ ಹಲವು ಹಂತಗಳಲ್ಲಿ ಪುರುಷರೇ ಕಾರ್ಯ ನಿರ್ವಹಿಸುತ್ತಿರುವುದರಿಂದ ಅದರ ಜಾರಿ ಪರಿಣಾಮಕಾರಿಯಾಗಿ ಆಗುತ್ತಿಲ್ಲ ಎಂಬುದು ಕಟುವಾಸ್ತವ. ವರದಕ್ಷಿಣೆ ನಿಷೇಧ ಕಾನೂನು ಜಾರಿಗೊಳಿಸುವಂತಹ ಮತ್ತು ಆ ಮೂಲಕ ನೊಂದ ಸ್ತ್ರೀಯರಿಗೆ ನ್ಯಾಯ ಒದಗಿಸುವಂತಹ ಜವಾಬ್ದಾರಿಯುತ ಸ್ಥಾನಗಳಲ್ಲಿರುವ ಬಹುತೇಕ ನಾಯಕರು, ಆಡಳಿತವರ್ಗ, ನೌಕರಶಾಹಿ ಹಾಗೂ ಇತರ ಬಾಧ್ಯಸ್ಥರು ವರದಕ್ಷಿಣೆ ಪಡೆದುಕೊಂಡೇ ವಿವಾಹವಾಗಿರುವುದನ್ನು ಕಾಣುತ್ತೇವೆ.

ಇತ್ತೀಚೆಗೆ ಐ.ಎ.ಎಸ್./ಐ.ಪಿ.ಎಸ್. ಮತ್ತು ಆಲ್ ಇಂಡಿಯಾ ಸೇವೆಗಳಿಗೆ ಸೇರಿದ ಪ್ರೊಬೆಷನರಿ ಅಧಿಕಾರಿಗಳ ಸಮೀಕ್ಷೆ ಮಾಡಿ ವರದಕ್ಷಿಣೆಯ ಬಗ್ಗೆ ಅಭಿಪ್ರಾಯ ಸಂಗ್ರಹಿಸಿದಾಗ ಶೇ. ೬೭ರಷ್ಟು ವರದಕ್ಷಿಣೆ ಪರವಾಗಿಯೂ, ಶೇ. ೨೭ರಷ್ಟು ವಿರೋಧಿಸುವುದಾಗಿಯೂ, ಇನ್ನುಳಿದ ಶೇ. ೬ರಷ್ಟು ಜನ ಪ್ರೊಬೆಷನರಿ ಅಧಿಕಾರಿಗಳು ಪರವಾಗಿ ಆಗಲಿ ಮತ್ತು ವಿರೋಧವಾಗಿ ಆಗಲಿ ಅಭಿಪ್ರಾಯ ವ್ಯಕ್ತಪಡಿಸದೇ ಇರುವುದು ಕಳವಳಕಾರಿ ಅಂಶವಾಗಿದೆ. ಏಕೆಂದರೆ, ವರದಕ್ಷಿಣೆ ನಿಷೇಧ ಕಾನೂನು ಜಾರಿಗೊಳಿಸುವ ಅಧಿಕಾರ ಹೊಂದಿರುವವರೇ ಗಣನೀಯ ಪ್ರಮಾಣದಲ್ಲಿ ವರದಕ್ಷಿಣೆ ಪಡೆಯುವುದಾಗಿ ಮತ್ತು ವರದಕ್ಷಿಣೆಯ ಪರವಾಗಿ ಇರುವಾಗ ಅದರ ಅನುಷ್ಠಾನವನ್ನು ಪರಿಣಾಮಕಾರಿಯಾಗಿ ಅವರು ಮಾಡಬಲ್ಲರೇ ಎಂಬುದು ಯಕ್ಷಪ್ರಶ್ನೆ.

ಭಾರತೀಯ ಸಮಾಜದಲ್ಲಿ ಸಾಮಾಜಿಕ ಮೌಲ್ಯಗಳು ಏಕಮುಖಿಯಾಗಿವೆ ಮತ್ತು ಲಿಂಗ ತಾರತಮ್ಯ ಯಥಾವತ್ತಾಗಿ ಮುಂದುವರೆಯುತ್ತಿರುವುದಕ್ಕೆ ಕಾರಣವಾಗಿವೆ. ಪುರುಷ ಪ್ರಾಧಾನ್ಯತೆಯಿಂದಾಗಿ ಸ್ತ್ರೀಯರ ಮೇಲೆ ದೌರ್ಜನ್ಯ ಮತ್ತು ಸಾಮಾಜಿಕ ಶೋಷಣೆಯು ಯಾವ ಅಡ್ಡಿ ಆತಂಕವಿಲ್ಲದೇ ಇಂದಿನ ಆಧುನಿಕ ಯುಗದಲ್ಲಿಯೂ ಮುಂದುವರೆದುಕೊಂಡುಬರುತ್ತಿದೆ.

ಲಿಂಗ ತಾರತಮ್ಯದಿಂದಾಗಿ ಸ್ತ್ರೀಯರಿಗೆ ಮಾನವ ಹಕ್ಕುಗಳ ನಿರಾಕರಣೆಯಾಗುತ್ತಿರುವುದು ನಿಜಕ್ಕೂ ವಾಸ್ತವ ಸಂಗತಿ ಆಗಿದೆ. ಮನುವಿನ 'ಫತ್ವಾ' ಇಂದಿಗೂ ಭಾರತೀಯ ಸಮಾಜದಲ್ಲಿ ಪ್ರಚಲಿತವಿದ್ದು, ಸ್ತ್ರೀಯರಿಗೆ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಶೈಕ್ಷಣಿಕ ಹಕ್ಕುಗಳನ್ನು ನಿರಾಕರಿಸಲಾಗುತ್ತಿದೆ. 'ಅಪುತ್ರಸ್ಯ ಗತಿರ್ನಾಸ್ತಿ' ಎಂಬ ಪಾರಂಪರಿಕ ದಿಗ್ಬಂಧನ ಇಂದಿಗೂ ಸಮಾಜದಲ್ಲಿ ಕೆಲಸ ಮಾಡುತ್ತಿದೆ. ಗಂಡು ಮಗುವಿಗೆ ಹಪಹಪಿಸುವುದು, ಹೆಣ್ಣು ಶಿಶು ಭ್ರೂಣಹತ್ಯೆಗೆ ಪ್ರೇರೇಪಿಸುವುದು (ಹೆಣ್ಣು ಹೆತ್ತವರಲ್ಲಿ), ಹೆಣ್ಣು ಶಿಶುವಿನ ಬಗ್ಗೆ ತಾತ್ಸಾರ ಭಾವನೆ ಬೆಳೆಯುತ್ತಿರುವುದು ಕೆಲವು ಸ್ಯಾಂಪಲ್‌ಗಳು ಮಾತ್ರ. ವಸಾಹತುಶಾಹೀಕರಣ ಮತ್ತು ಸಾಂಪ್ರದಾಯೀಕರಣದ ಪ್ರಕ್ರಿಯೆಗಳ ಪರಿಯನ್ನು ಕಳಚಿಕೊಂಡು ಜಾಗತೀಕರಣಕ್ಕೆ ತನ್ನನ್ನು ಒಡ್ಡಿಕೊಳ್ಳುತ್ತಿರುವ ಭಾರತದಂತಹ ರಾಷ್ಟ್ರದಲ್ಲಿ ಲಿಂಗ ತಾರತಮ್ಯ ಮುಂಬರುವ ದಿವಸಗಳಲ್ಲಿ ದೊಡ್ಡ ಸವಾಲಾಗಿ ಪರಿಣಮಿಸುವ ಪರಿಸ್ಥಿತಿ ಇದೆ. ಈಗಾಗಲೇ ಲಿಂಗ ತಾರತಮ್ಯ ಮತ್ತು ಹೆಣ್ಣು ಶಿಶು ಭ್ರೂಣಹತ್ಯೆಯ ಪರಿಣಾಮವು ಉತ್ತರದ ಕೆಲವು ರಾಜ್ಯಗಳಲ್ಲಿ ಸ್ಫೋಟಗೊಳ್ಳುತ್ತಿದ್ದು, ಲಿಂಗ ಪ್ರಮಾಣದ ಏರಿಳಿತ ಗಣನೀಯ ಪ್ರಮಾಣದಲ್ಲಿ ದಾಖಲಾಗುತ್ತಿದೆ. ಇನ್ನು ಕೆಲವೇ ವರ್ಷಗಳಲ್ಲಿ ಇದೇ ಪರಿಸ್ಥಿತಿ ಎಲ್ಲ ರಾಜ್ಯಗಳಲ್ಲಿ ಕಂಡುಬಂದರೂ ಆಶ್ಚರ್ಯಪಡಬೇಕಿಲ್ಲ.

'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ' ಎನ್ನುವುದು ನಮ್ಮ ನಾಡಿನ ಹೆಮ್ಮೆಯ ಸಾಂಸ್ಕೃತಿಕ ಬಳುವಳಿಯೋ, ಪರಂಪರೆಯೋ ಅಥವಾ ಹೆಗ್ಗಳಿಕೆಯೋ? ಅಂತೂ ಅದಕ್ಕೆ ತದ್ವಿರುದ್ಧವಾಗಿ ಎಲ್ಲ ಕ್ರಿಯೆಗಳಲ್ಲಿ ನಮ್ಮನ್ನು ನಾವು ತೊಡಗಿಸಿಕೊಂಡು, ಸ್ತ್ರೀಯರಿಗೆ ಮೂಲಭೂತ ಮಾನವ ಹಕ್ಕು ನಿರಾಕರಿಸುವ ಸಾಮಾಜಿಕ ವಾತಾವರಣವನ್ನು ವಿಪುಲವಾಗಿ ಸೃಷ್ಟಿ ಮಾಡುವಲ್ಲಿ 'ಯಶಸ್ಸು' ಕಂಡಿದ್ದೇವೆ. ಅಂತೆಯೇ 'ಎಲ್ಲಿ ನಾರಿಯರು ಪೂಜಿಸಲ್ಪಡುವರೋ ಅಲ್ಲಿ ದೇವತೆಗಳಿರುತ್ತಾರೆ' ಎಂದು ಹೇಳುತ್ತಲೇ ಲಿಂಗ ಪರೀಕ್ಷೆಯಾಧಾರದ ಮೇಲೆ, ಅರಳುವ ಮುಂಚೆ ಹೆಣ್ಣುಶಿಶು ಭ್ರೂಣವನ್ನು ನಿರ್ದಾಕ್ಷಿಣ್ಯವಾಗಿ ಹೊಸಕಿಹಾಕುವುದು, ವರದಕ್ಷಿಣೆಯನ್ನು ತರಲಿಲ್ಲವೆಂದು ತಲೆಮೇಲೆ ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚಿ ಅವರ ದೇಹ ಇಂಚಿಂಚು ಹತ್ತಿ ಉರಿಯುತ್ತಿರುವುದನ್ನು ನೋಡಿ ಕೇಕೆ ಹಾಕುವುದು ಎಲ್ಲ ಸ್ತ್ರೀಯರ ಮೇಲೆ ಅವ್ಯಾಹತವಾಗಿ ನಡೆಯುವ ದೌರ್ಜನ್ಯ ಮತ್ತು ಅತ್ಯಾಚಾರಗಳಿಗೆ ನಿದರ್ಶನಗಳಾಗಿವೆ.

ಸ್ತ್ರೀ ಪ್ರಕೃತಿಯ ಸಂಕೇತ ಜನನೀ ಜನ್ಮ ಭೂಮಿ. ಸ್ತ್ರೀ ಶಕ್ತಿದೇವತೆ ಆರಾಧನೆಯ ಒಂದು

**— ಪ್ರೊ॥ ಮಂಜುಳಾ ಸದಾಶಿವ ಮರ್ಜಿ —**

'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ' ಎನ್ನುವುದು ನಮ್ಮ ನಾಡಿನ ಹೆಮ್ಮೆಯ ಸಾಂಸ್ಕೃತಿಕ ಬಳುವಳಿಯೋ, ಪರಂಪರೆಯೋ ಅಥವಾ ಹೆಗ್ಗಳಿಕೆಯೋ? ಅಂತೂ ಅದಕ್ಕೆ ತದ್ವಿರುದ್ಧವಾದ ಎಲ್ಲ ಕ್ರಿಯೆಗಳಲ್ಲಿ ನಮ್ಮನ್ನು ನಾವು ತೊಡಗಿಸಿಕೊಂಡು, ಸ್ತ್ರೀಯರಿಗೆ ಮೂಲಭೂತ ಮಾನವ ಹಕ್ಕು ನಿರಾಕರಿಸುವ ಸಾಮಾಜಿಕ ವಾತಾವರಣವನ್ನು ವಿಪುಲವಾಗಿ ಸೃಷ್ಟಿ ಮಾಡುವಲ್ಲಿ 'ಯಶಸ್ಸು' ಕಂಡಿದ್ದೇವೆ. ಅಂತೆಯೇ 'ಎಲ್ಲಿ ನಾರಿಯರು ಪೂಜಿಸಲ್ಪಡುವರೋ ಅಲ್ಲಿ ದೇವತೆಗಳಿರುತ್ತಾರೆ' ಎಂದು ಹೇಳುತ್ತಲೇ ಲಿಂಗ ಪರೀಕ್ಷೆಯಾಧಾರದ ಮೇಲೆ ಅರಳುವ ಮುಂಚೆ ಹೆಣ್ಣುಶಿಶು ಭ್ರೂಣವನ್ನು ನಿರ್ದಾಕ್ಷಿಣ್ಯವಾಗಿ ಹೊಸಕಿಹಾಕುವುದು, ವರದಕ್ಷಿಣೆಯನ್ನು ತರಲಿಲ್ಲವೆಂದು ತಲೆಮೇಲೆ ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚಿ ಅವರ ದೇಹ ಇಂಚಿಂಚು ಹತ್ತಿ ಉರಿಯುತ್ತಿರುವುದನ್ನು ನೋಡಿ ಕೇಕೆ ಹಾಕುವುದು ಎಲ್ಲ ಸ್ತ್ರೀಯರ ಮೇಲೆ ಅವ್ಯಾಹತವಾಗಿ ನಡೆಯುವ ದೌರ್ಜನ್ಯ ಮತ್ತು ಅತ್ಯಾಚಾರಗಳಿಗೆ ನಿದರ್ಶನಗಳಾಗಿವೆ.

ಪರಂಪರೆಯೇ ಇದ್ದು, ಪುರಾಣ, ಪುಣ್ಯಕಥೆ, ಸ್ಮೃತಿಗಳು, ಶ್ರುತಿಗಳು, ವೇದಗಳು ಮತ್ತು ಪಾರಂಪಾರಿಕ ಸಾಹಿತ್ಯಿಕ ಮೂಲಗಳಲ್ಲಿ ಸ್ತ್ರೀದೇವತೆಯ ಅವತಾರಗಳು ಮತ್ತು ಸ್ತ್ರೀಶಕ್ತಿ ಆರಾಧನೆಯ ಬಗ್ಗೆ ವಿಪುಲವಾಗಿ ಬರೆಯಲಾಗಿದ್ದರೂ ವಾಸ್ತವದಲ್ಲಿ ಆಕೆ ಅಬಲೆ, ಅಪ್ರಯೋಜಕಿ, ಸಾಮಾಜಿಕವಾಗಿ ಮತ್ತು ಧಾರ್ಮಿಕವಾಗಿ ಅವಲಂಬಿತೆಯಾಗಿರುವುದು ಭಾರತೀಯ ಸನಾತನ ಸಂಸ್ಕೃತಿಯ ಇಬ್ಬಗೆಯ ನೀತಿಯ ದ್ಯೋತಕವೋ, ಅಭಿವ್ಯಕ್ತಿಯೋ ಕಾಲವೇ ನಿರ್ಣಯಿಸಬೇಕು. ಒಂದೆಡೆ, ಸ್ತ್ರೀ ಕುಲದೇವತಾ ಆರಾಧನೆಯ ಬಹುದೊಡ್ಡ ನಾಟಕ, ಇನ್ನೊಂದೆಡೆ, ಸ್ತ್ರೀಶೋಷಣೆಯ ಅಣಕು ಪ್ರದರ್ಶನ ಇವೆಲ್ಲವೂ ಪ್ರಸಕ್ತ ಸಾಮಾಜಿಕ ಬದುಕಿನ ಕೆಲವು ಕುಹಕಗಳು ಅನ್ನಬಹುದೆ ?

ಮನು 'ಫತ್ವಾ' ಅಂತಿಮವಾಗಿ ಏನೆಲ್ಲಾ ಸ್ತ್ರೀಯರ ಶಕ್ತಿ, ಅಂತಃಸತ್ವ, ಸ್ವಾಭಿಮಾನ, ಸ್ವಂತಿಕೆ ಮತ್ತು ಹೆಣ್ತನಗಳೆಲ್ಲವನ್ನು ಪಣಕ್ಕಿಟ್ಟಂತೆ, ಆ ಪಣದಲ್ಲಿ ಒಂದೇ ಹೊಡೆತಕ್ಕೆ ಅವೆಲ್ಲವನ್ನೂ ಸರ್ವನಾಶ ಮಾಡುವ 'ನ ಸ್ತ್ರೀ ಸ್ವಾತಂತ್ರ್ಯಮ್ ಅರ್ಹತಿ' ಎನ್ನುತ್ತ ಪುರುಷ ಪ್ರಾಧಾನ್ಯತೆ ಎತ್ತಿಹಿಡಿದುಬಿಡುತ್ತದೆ. ಸ್ತ್ರೀಕುಲದೇವತೆ, ಸ್ತ್ರೀಶಕ್ತಿ ಆರಾಧನೆ ಮತ್ತು ಜನನೀ ಜನ್ಮ ಭೂಮಿಯಂತಹ ಇಡೀ ಒಂದು ಪರಂಪರೆ ಮನುವಿನ 'ಫತ್ವಾ'ದ ಮುಂದೆ ಶೂನ್ಯವಾಗಿ ಪುರುಷ ಪ್ರಾಧಾನ್ಯತೆ ವಿಜೃಂಭಿಸುತ್ತದೆ.

ಸ್ತ್ರೀಯರ ಸಾಮಾಜಿಕ ಸ್ಥಾನಮಾನಕ್ಕಾಗಿ ನಡೆದ ಪ್ರಯತ್ನಗಳು ಕಾಲದಿಂದ ಕಾಲಕ್ಕೆ ಸಂಭವಿಸಿದ್ದರೂ ಆಯಾ ಕಾಲಘಟ್ಟದಲ್ಲಿ ಅವು ಮಿಂಚಿ ಮರೆಯಾದಂತೆ ನಡೆದ ಘಟನೆಗಳಾಗಿವೆಯೇ ಹೊರತು ದೀರ್ಘಕಾಲಿಕ ಪ್ರಭಾವ/ಪರಿಣಾಮವನ್ನು ಭಾರತೀಯ ಸಮಾಜದ ಮೇಲೆ ಬೀರಲಿಲ್ಲವೆಂಬುದು ಇತಿಹಾಸ. ಭಾರತೀಯ ಸಮಾಜದ ಪುರುಷ ಪ್ರಧಾನ ಸಾಮಾಜಿಕ ಮೌಲ್ಯಗಳಿಗೆ ಸೆಡ್ಡುಹೊಡೆದು ಹೊಸ ಮನ್ವಂತರ ಸೃಷ್ಟಿಸಿ ಸ್ತ್ರೀಯರಿಗೆ ಸಮಾನತೆ ಮತ್ತು ಸ್ವಾತಂತ್ರ್ಯ ತಂದುಕೊಡುವ ಮೊಟ್ಟಮೊದಲ ಪ್ರಯತ್ನ ನಡೆದದ್ದು ಬೌದ್ಧಧರ್ಮವು ಉಚ್ಛ್ರಾಯ ಸ್ಥಿತಿಯನ್ನು ತಲುಪಿದ ಸಂದರ್ಭದಲ್ಲಿ. ಹಿಂದೂ ಧರ್ಮದಲ್ಲಿ ಮನೆಮಾಡಿದ್ದ ಕಂದಾಚಾರ, ಮೂಢನಂಬಿಕೆ, ಸಾಮಾಜಿಕ ಅಸಮಾನತೆ, ಪುರೋಹಿತಶಾಹಿ ವ್ಯವಸ್ಥೆ ಮತ್ತು ಅತಿಯಾದ ಧಾರ್ಮಿಕ ದುರಾಚಾರಕ್ಕೆ ಬೇಸತ್ತಿದ್ದ ಜನತೆಗೆ ಬೌದ್ಧಧರ್ಮದ ಹೊಸದಾದ ಚಿಂತನಾಕ್ರಮ ಆಕರ್ಷಣೀಯವಾಗಿ ಕಂಡಿತು.

ಬೌದ್ಧಧರ್ಮದ ಹೊಸ ವಿಚಾರಧಾರೆಗಳಾದ ಪಂಚಶೀಲಗಳು, ಸಮಬಾಳು ಮತ್ತು ಸರ್ವರಿಗೂ ಸಮಪಾಲು, ವೈಜ್ಞಾನಿಕ ದೃಷ್ಟಿಕೋನ, ವೈಜ್ಞಾನಿಕ ಧಾರ್ಮಿಕ ವಿಧಿ -ಆಚರಣೆಗಳು, ವೈಯಕ್ತಿಕ ಸ್ವಾತಂತ್ರ್ಯ, ಜ್ಞಾನ ಮತ್ತು ಮೋಕ್ಷ ಸಂಪಾದಿಸಲು ವ್ಯಕ್ತಿ ಕಾರಣನೇ ಹೊರತು ಮಧ್ಯವರ್ತಿ ಅಲ್ಲವೆಂದು ಬೋಧಿಸಿದ್ದು ಮತ್ತು ಒಟ್ಟಾರೆ ವ್ಯಕ್ತಿಯ ಉನ್ನತಿ ಆತನ ಇಹಲೋಕದ ಕ್ರಿಯೆಯನ್ನವಲಂಬಿಸಿದೆಯೇ ವಿನಾ ಕರ್ಮಗಳನ್ನಲ್ಲ ಎಂಬ ಸಿದ್ಧಾಂತಕ್ಕೆ ಮಾರುಹೋದ ಕೆಳಸ್ತರದ ಜನಸಮುದಾಯಗಳು ಮತ್ತು ಸ್ತ್ರೀಯರು ಬೌದ್ಧಧರ್ಮ ಅನುಯಾಯಿಗಳಾದರು. ಶಿಕ್ಷಣ ಕ್ಷೇತ್ರ ಮುಕ್ತವಾಯಿತು. ಸ್ತ್ರೀಯರು ಶಿಕ್ಷಣ ಪಡೆದು ಬೌದ್ಧ ಭಿಕ್ಷುಣಿಯರ ಉನ್ನತ ಸ್ಥಾನಮಾನ ಗಳಿಸಿದರು. ಕರ್ಮಸಿದ್ಧಾಂತಕ್ಕೆ ತಕ್ಕ ಉತ್ತರ ಬೌದ್ಧಧರ್ಮವಾಗಿತ್ತು ಎಂಬುದು ನಿರ್ವಿವಾದ.

ಅಂತೆಯೇ ಸಮಾಜದ ತುಳಿತಕ್ಕೊಳಗಾದ ಕೆಳಸ್ತರದ ಸಮುದಾಯಗಳು ಮತ್ತು ಸ್ತ್ರೀಯರು ಬೌದ್ಧಧರ್ಮದ ಹೊಸ ವಿಚಾರಧಾರೆಗೆ ಮಾರುಹೋಗತೊಡಗಿದರು. ಪರಿಣಾಮ, ಇಡೀ ಸ್ತ್ರೀ ಸಮುದಾಯವೇ ಬೌದ್ಧಧರ್ಮ ಸ್ವೀಕರಿಸಬಹುದೆಂಬ ಭೀತಿಯಿಂದ ಪ್ರತಿಗಾಮಿ ಶಕ್ತಿಗಳು ಸ್ತ್ರೀಯರ ಮೇಲಿನ ನಿರ್ಬಂಧಗಳನ್ನು ಮತ್ತಷ್ಟು ಬಿಗಿಗೊಳಿಸಿ ಅವರನ್ನು ಸಾಮಾಜಿಕ, ಆರ್ಥಿಕ, ಧಾರ್ಮಿಕ ಹಾಗೂ ಶೈಕ್ಷಣಿಕವಾಗಿ ಪರಾವಲಂಬಿಗಳನ್ನಾಗಿಸಿತು ಮತ್ತು ಸಮಾನತೆಗಾಗಿ ನಡೆಸಿದ ಸ್ತ್ರೀಯರ ಪ್ರಯತ್ನಗಳನ್ನು 'ಸಮಾಜದ್ರೋಹಿ' ಕಾರ್ಯಗಳೆಂದು ಪರಿಗಣಿಸಿ ಹತ್ತಿಕ್ಕಲಾಯಿತು.

# ಮತ್ಸ್ಯಗಂಧಿಯ ಹಾಡು



**ಕ**ತ್ತಲ ಬದುಕಿಗೆ ಜೊತೆಯಾಗುತ್ತೇನೆಂದು
ಏಕೆ ಹಲಬುತ್ತಿ ಗೆಳೆಯ !
ನನ್ನ ಮನೆಯ ಬೆಳಕನು
ನೆಕ್ಕಿ ನಲಿದ ಮರಿಬೆಕ್ಕನು
ಇದೇ ತಾನೆ ಓಡಿಸಿ ನಿರುಮ್ಮಳಾಗಿದ್ದೇನೆ
ಬಯಲ ಭೂಮಿಯ ಹಾಗೆ.

ಕೊಚ್ಚಿಕೊಂಡು ಹೋಗುವ ಹುಚ್ಚು ಹೊಳೆಯಲ್ಲ ಮನಸ್ಸು
ಮಂಜಿನ ತೆರೆಯಲಿ ಸಂಗಮಾಡಿ
ಸಾಗಿಹೋದ ಋಷಿ ಮುನಿಗಳಿಗೆ
ಕಾಲಮಾನದ ಎತ್ತರ
ನಿಗಿನಿಗಿ ಕೆಂಡ ಹೊತ್ತ ಕೊರಳೊಳು
ಮತ್ಸ್ಯಗಂಧಿಯ ಹಾಡು.

ಕೂಲಿಗೆ ಹೋದ ತಂಗಿ ಮನೆಗೆ ಮರಳದ್ದಕ್ಕೆ
ಕರುಳು ಕಿತ್ತು ಚೀರುತ್ತಾನೊಬ್ಬ ತಮ್ಮ*
ಗುರುತು ಹೊತ್ತ ನೆಲವ, ಮೌನ ಮುರಿಯದ ಜನರ
ಎದೆ ಬಿರಿದು ಅರಳುವಂತೆ –
ಕೊರಳಪಟ್ಟಿಯ ಜಗ್ಗಿ
ಕೌದಿ ಹೊಲೆಯುತ್ತಲೇ ನೆನಪ ಸುರುಳಿ ಬಿಚ್ಚಿ
ಸುಟ್ಟುಪೆತ್ತದೆ ಸೆರಗಿಲ್ಲದ ಸೀರೆಯಲಿ ಕಣ್ಣೀರ ಒರೆಸಿ

'ಗುಬ್ಬಕ್ಕನ ಮನೆಯಲಿ ಕಾಗಕ್ಕ ಹೇತು (?)
ನಿರಾಶ್ರಿತಳಾದ ಕಥೆ !' ನಕ್ಕು ಹೇಳಿದ ಅಜ್ಜಿ
ದೇವರ ಗುಡಿ ಮುಂದೆ ಅನಾಥವಾಗಿ
ಬಿದ್ದ ದೇವದಾಸಿಯ ಶವದ ಎದುರು
ಪ್ರಶ್ನೆಗಳ ಮೂಟೆ ಹೊತ್ತು ಕೂತಿದ್ದೇನೆ
ಉತ್ತರಕ್ಕಾಗಿ ತಡಕಾಡುತ್ತ.

ನನ್ನ ನೀ ತಿಳಿದಿದ್ದರೆ
ಬರುವುದಾದರೆ ಬಂದುಬಿಡು
ನಡುಹಗಲಲ್ಲೂ ಬೆಳಕ ಹೊತ್ತು
ಮತ್ತೆ
ಹಸಿರುಟ್ಟು ಮಿಂಚಲಿ
ಭೂಮಿ ಬಯಲು.

(* ರಾಮಪ್ಪ ಮಾದರ ಅವರ – 'ನೀವು ನನ್ನ ತಂಗಿಯನ್ನು ಕೊಂದಿದ್ದೀರಿ' ಕವನದ ಸ್ಫೂರ್ತಿಯಿಂದ)

ಅನಸೂಯ ಕಾಂಬಳೆ
ಸರ್ಕಾರಿ ಪ್ರಥಮದರ್ಜೆ ಕಾಲೇಜು, ತೆರದಾಳ, ಜಮಖಂಡಿ ತಾಲೂಕು, ಬಾಗಲಕೋಟೆ ಜಿಲ್ಲೆ

ಭಾರತೀಯ ಸಾಮಾಜಿಕ ವಿನ್ಯಾಸ ಮತ್ತು ಸಂರಚನೆಯನ್ನು ಅಲುಗಾಡಿಸುವ ಅತ್ಯಂತ ಮಹತ್ವದ ಘಟ್ಟವೇ ಕಲ್ಯಾಣದ ಶರಣರ ಸಾಮಾಜಿಕ ಕ್ರಾಂತಿ, ಬಸವಣ್ಣನವರ ನೇತೃತ್ವದ ಶರಣ ಚಳುವಳಿ. ಇದು ಸ್ತ್ರೀ ಸಮಾನತೆ ಮತ್ತು ದಲಿತ ಸಮುದಾಯಗಳ ವಿಮೋಚನೆಯ ದಾರಿದೀಪವಾಯಿತು. ಇಡೀ ಮನುಷ್ಯಕುಲ ನಾಚಿ ತಲೆತಗ್ಗಿಸುವಂತಹ ಕಂದಾಚಾರಗಳ ಕೂಪದಲ್ಲಿ ಕೊಳೆತುಹೋಗಿದ್ದ ಮನಸ್ಸುಗಳು ಸ್ತ್ರೀಯರು ಮತ್ತು ದಲಿತರ ಮೇಲೆ ನಡೆಸಿದ ದೌರ್ಜನ್ಯಗಳು ಅವರ್ಣನೀಯ. ಶಿಕ್ಷಣ ಮತ್ತು ಅರಿವುಗಳಿಂದ ವಂಚಿತವಾಗಿದ್ದ ಸ್ತ್ರೀಯರಿಗೆ ಶಿಕ್ಷಣ ಮತ್ತು ಅರಿವು ನೀಡುವಲ್ಲಿ ಚಳುವಳಿ ಯಶಸ್ವಿಯಾದದ್ದು ಮಾತ್ರವಲ್ಲ, ದೌರ್ಜನ್ಯಕ್ಕೊಳಗಾದವರ ಮನದಾಳದ ನೋವಿನ ಕುದಿಗೆ ತಿದಿಗೆಯಾದದ್ದು ಅನುಭವ ಮಂಟಪ. ಇದೊಂದು ಧಾರ್ಮಿಕ ವೇದಿಕೆಯಾಗಿದ್ದರೂ ಇಲ್ಲಿ ಚರ್ಚಿಸಿ, ಸಂವಾದಿಸಿ ಮತ್ತು ಒಪ್ಪಿಕೊಂಡ ಮೌಲ್ಯಗಳೇ ಕಲ್ಯಾಣ ಕ್ರಾಂತಿಗೆ ನಾಂದಿಯಾದದ್ದು ಇತಿಹಾಸ. ಅಕ್ಕಮಹಾದೇವಿ, ಸೂಳೆ ಸಂಕವ್ವ ಮುಂತಾದ ಶರಣೆಯರು ತಮ್ಮ ನೋವುಗಳಿಗೆ ವಚನದ ರೂಪ ಕೊಟ್ಟು ಸ್ತ್ರೀ ಕುಲ ಅನುಭವಿಸಿದ ಯಾತನೆ, ಅವಮಾನ, ದೌರ್ಜನ್ಯ, ಅವಹೇಳನ ಮತ್ತು ಶೋಷಣೆಯ ಹಲವು ಮುಖಗಳನ್ನು ಸಮರ್ಥವಾಗಿ ದಾಖಲಿಸಿದರು.

ಮಧ್ಯಕಾಲೀನ ಭಾರತದಲ್ಲಿ ಭಾರತೀಯ ಸಮಾಜದ ಕಂದಾಚಾರ ಮತ್ತು ಮೌಢ್ಯತೆಯನ್ನು ಪ್ರಶ್ನಿಸುವ ಮತ್ತೊಂದು ಘಟ್ಟವೇ ಭಕ್ತಿ ಪಂಥ. ಭಕ್ತಿಪಂಥವು ಕರ್ಮಸಿದ್ಧಾಂತವನ್ನು ಒಪ್ಪದೆ, ಪ್ರತಿ ಜೀವಿಗೂ ಮೋಕ್ಷ ಹೊಂದುವ ಅರ್ಹತೆ ಇದೆ, ಸ್ತ್ರೀ-ಪುರುಷರೆನ್ನದೆ ಮೋಕ್ಷಸಾಧನೆ ಮಾಡಬಹುದೆಂದು ಬೋಧಿಸಿತು. ಮಹಾನ್ ಪ್ರತಿಭೆ ಮೀರಾಬಾಯಿ ತನ್ನ ಸ್ವಂತಿಕೆ, ಪ್ರತಿಭೆ ಮತ್ತು ಕಠಿಣ ಪರಿಶ್ರಮದ ಮೂಲಕ 'ಭಜನೆ'ಗಳನ್ನು ರಚಿಸಿ ಅವುಗಳ ಮೂಲಕ ಹೆಣ್ಣಿನ ಸ್ವಾತಂತ್ರ್ಯ, ಸಮಾನತೆ, ಸಮಾನ ಅವಕಾಶಗಳಿಗಾಗಿ ಹಂಬಲಿಸಿದಳು. ಪುರೋಹಿತಶಾಹಿ ಮತ್ತು ಪ್ರತಿಗಾಮಿ ಶಕ್ತಿಗಳ ಕಪಿಮುಷ್ಟಿಯಲ್ಲಿ ನರಳುತ್ತಿದ್ದ ಹಿಂದೂ ಸಮಾಜವನ್ನು ಬಿಡುಗಡೆಗೊಳಿಸುವ ಮತ್ತು ಬ್ರಾಹ್ಮಣೇತರರಾಗಿದ್ದ ದುಡಿಯುವ ಶೂದ್ರ ಜಾತಿ ಮತ್ತು ಶೂದ್ರಾತಿಶೂದ್ರ ಅಸ್ಪೃಶ್ಯರಿಗೆ ವಿಮೋಚನೆಯನ್ನು ತಂದುಕೊಡುವ ಉದ್ದೇಶದಿಂದ ಮಹಾತ್ಮ ಜ್ಯೋತಿಬಾ ಫುಲೆಯವರು ಬ್ರಾಹ್ಮಣೇತರ ಚಳುವಳಿಯನ್ನು ಪ್ರಾರಂಭಿಸಿದರು. ಮಹಾತ್ಮ ಜೋತಿಬಾ ಫುಲೆಯವರನ್ನು ಸಾಮಾಜಿಕ ಚಳುವಳಿಯ ಪಿತಾಮಹ ಎಂದೇ ಪರಿಗಣಿಸಲಾಗುತ್ತದೆ. ಅವರು ಬ್ರಿಟಿಷ್ ಸರ್ಕಾರ ದೊಂದಿಗೆ ಹೋರಾಟ ನಡೆಸಿ ಬ್ರಾಹ್ಮಣೇತರ ಜಾತಿಗಳಿಗೆ ಮತ್ತು ಸ್ತ್ರೀಯರಿಗೆ ಶೈಕ್ಷಣಿಕ ಸೌಲಭ್ಯ ನೀಡಲು ಒತ್ತಾಯಿಸಿದರು. ದಲಿತ ಸ್ತ್ರೀಯರಿಗೆ ೧೮೪೮ರಲ್ಲಿಯೇ ಶಾಲೆ ಪ್ರಾರಂಭಿಸಿದರು. ವಿಧವೆಯರ ಸಂಕಷ್ಟವನ್ನು ನೋಡಲಾರದೆ ಅವರಿಗಾಗಿ ಪುನರ್ವಸತಿ ಪ್ರಾರಂಭಿಸಿದರು. ವಿಧವೆಗೆ ಹುಟ್ಟಿದ್ದ ಮಗನನ್ನೇ ತಮ್ಮ ದತ್ತುಪುತ್ರನನ್ನಾಗಿ ಸ್ವೀಕರಿಸಿದರು. ತಮ್ಮ ಪತ್ನಿ ಸಾವಿತ್ರಿಬಾಯಿಗೆ ಶಿಕ್ಷಣ ನೀಡಿ ಅವರನ್ನು ತಾವು ಪ್ರಾರಂಭಿಸಿದ ಶಾಲೆಯಲ್ಲಿಯೇ ಶಿಕ್ಷಕಿಯಾಗಿ ನೇಮಿಸಿ ಸ್ತ್ರೀಯರಿಗೆ ಶಿಕ್ಷಣ ನೀಡುವಲ್ಲಿ ಸಫಲರಾದರು. ಸತಿ ಸಹಗಮನ ಪದ್ಧತಿಯ ನಿಷೇಧವನ್ನು ಬ್ರಿಟಿಷ್ ಅಧಿಕಾರಿ ಲಾರ್ಡ್ ವಿಲಿಯಂ ಬೆಂಟಿಂಕ್ ಕಾನೂನಿನ ಮೂಲಕ ಮಾಡಿದ್ದು ಭಾರತೀಯ ಸಮಾಜದ ರೂಢಿಗತ ಸಾಮಾಜಿಕ ದೌರ್ಜನ್ಯವನ್ನು ತಡೆಗಟ್ಟಲು ನಡೆಸಿದ ಪ್ರಥಮ ಪ್ರಯತ್ನವಾಗಿತ್ತು.

ನಂತರದ ದಿನಗಳಲ್ಲಿ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟದಲ್ಲಿ ಸ್ತ್ರೀ-ಪುರುಷರೆನ್ನದೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಜನ ಭಾಗವಹಿಸತೊಡಗಿದರು. ಆ ಸಂದರ್ಭದಲ್ಲಿ ಸ್ತ್ರೀ ಸಂವೇದನೆಗೆ ಒತ್ತುನೀಡಲಾಯಿತು. ಅಂತಿಮವಾಗಿ ಸ್ವಾತಂತ್ರ್ಯ ಸಿಕ್ಕು ಹೊಸದಾದ ಆಡಳಿತ ಕ್ರಮವನ್ನು ರೂಢಿಸಿಕೊಂಡ ಹೊಸ್ತಿಲಲ್ಲೇ ಸ್ತ್ರೀ ಸಮಾನತೆಗೆ ಹೆಚ್ಚಿನ ಒತ್ತು ನೀಡುವ ಪ್ರಯತ್ನಗಳನ್ನು ಮಾಡಲಾಯಿತು. ಸ್ವತಂತ್ರ ಭಾರತಕ್ಕೆ ಒಂದು ಸಂವಿಧಾನ ಬೇಕಾಗಿತ್ತು. ಸಂವಿಧಾನ ರಚನೆಗೆ ಸಂವಿಧಾನ ಕರಡು ರಚನಾ ಸಮಿತಿಯ ಅಧ್ಯಕ್ಷರನ್ನಾಗಿ ಡಾ॥ ಬಿ. ಆರ್. ಅಂಬೇಡ್ಕರ್‌ರನ್ನು ನೇಮಿಸಲಾಗಿತ್ತು. ಪಾಶ್ಚಿಮಾತ್ಯ ಪ್ರಜಾಪ್ರಭುತ್ವ ಮೌಲ್ಯಗಳಿಂದ ಪ್ರಭಾವಿತರಾಗಿದ್ದ ಡಾ॥ ಬಿ. ಆರ್. ಅಂಬೇಡ್ಕರ್ ಆಡಳಿತಯಂತ್ರವು ಪ್ರಜಾಪ್ರಭುತ್ವ ಮಾದರಿಯದ್ದಾಗಿರ ಬೇಕು, 'ಪ್ರಜಾಪ್ರಭುತ್ವವು ರಕ್ತರಹಿತ ಕ್ರಾಂತಿ' ಎಂದು ಭಾವಿಸಿದ್ದ ಅವರು ದೇಶದ ಎಲ್ಲಾ ಪ್ರಜೆಗಳಿಗೂ ಸಮಾನ ಅವಕಾಶ ನೀಡುವಂತಹ 'ಒಬ್ಬರು ಒಂದು ಮತ – ಒಂದು ಮೌಲ್ಯ'ದಂತಹ ಸಾಮಾಜಿಕ ಸಮಾನತೆ ಎತ್ತಿಹಿಡಿಯುವ ಸಾರ್ವತ್ರಿಕ ಮೌಲ್ಯವನ್ನು ಸಂವಿಧಾನದಲ್ಲಿ ಅಳವಡಿಸಿದರು. ಮತ ಚಲಾಯಿಸುವ ಹಕ್ಕಿನಿಂದ ವಂಚಿತರಾಗಿದ್ದ ಅಸಂಖ್ಯಾತ ಶೂದ್ರಾತಿಶೂದ್ರ ಕೆಳಸ್ತರದ ಸಮುದಾಯಗಳಿಗೆ ಮತ್ತು ಸ್ತ್ರೀಯರಿಗೆ ಹೊಸ ಮನ್ವಂತರಕ್ಕೆ ಹಾದಿಮಾಡಿಕೊಟ್ಟಂತಾಗಿತ್ತು.

ಸಂವಿಧಾನ ಕರಡು ರಚನಾ ಸಂದರ್ಭದಲ್ಲಿ ಹಿಂದೂ ಕೋಡ್ ಬಿಲ್ ಬಗ್ಗೆ ಡಾ॥ ಬಿ. ಆರ್. ಅಂಬೇಡ್ಕರ್‌ರು ಪ್ರಸ್ತುತಪಡಿಸಿದ ಹಿಂದೂ ನ್ಯಾಯಾಂಗದ ಕ್ರೋಡೀಕರಣ ಭಾರತೀಯ ಸಮಾಜದ ಬುಡವನ್ನೇ ಅಲುಗಾಡಿಸಿತು. ಸ್ತ್ರೀಯರಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಸಮಾನ ಹಕ್ಕು, ಹಿಂದೂ ವಿವಾಹ ಕಾಯ್ದೆ, ಹಿಂದೂ ಪುನರ್ವಿವಾಹ ಕಾಯ್ದೆ, ಹಿಂದೂ ವಿಧವಾ ಪುನರ್ವಿವಾಹ ಕಾಯ್ದೆ, ವಿಧವಾ ನಿಷೇಧ ಕಾಯ್ದೆಗಳು ಹಿಂದೂ ಕೋಡ್ ಬಿಲ್‌ನಲ್ಲಿ ಚರ್ಚಿತವಾದ ವಿಷಯಗಳು. ಹಿಂದೂ ಕೋಡ್ ಬಿಲ್ ಜಾರಿಗೊಳಿಸಿದರೆ ಇಡೀ ಹಿಂದೂ ಸಮಾಜವು ವಿಚ್ಛಿದ್ರವಾಗಬಹುದೆಂಬ ಅನಗತ್ಯ ಭೀತಿಯಿಂದ ಜಾತಿವಾದಿ ಸಂಘಟನೆಗಳು ಹಿಂದೂ ಕೋಡ್ ಬಿಲ್‌ಅನ್ನು ಅಂಗೀಕರಿಸಬಾರದೆಂದು ನಡೆಸಿದ ಹೋರಾಟಕ್ಕೆ ಜಯ ಸಿಕ್ಕಿತ್ತು. ಅಂತಿಮವಾಗಿ ನೆಹರೂ ಸರ್ಕಾರವು ಸಂಪ್ರದಾಯವಾದಿ ಪುರೋಗಾಮಿ ಸಂಘಟನೆಗಳ ಬಲ ಪ್ರದರ್ಶನಕ್ಕೆ ಮಣಿದ ಕಾರಣ ಹಿಂದೂ ಕೋಡ್ ಬಿಲ್‌ಗೆ ಪಾರ್ಲಿಮೆಂಟಿನಲ್ಲಿ ಒಪ್ಪಿಗೆ ಸಿಗಲಿಲ್ಲ. ಈ ಕ್ರಮದಿಂದ ಬೇಸತ್ತ ಡಾ॥ ಬಿ. ಆರ್. ಅಂಬೇಡ್ಕರ್ ತಮ್ಮ ಕಾನೂನು ಮಂತ್ರಿ ಪದವಿಗೆ ರಾಜೀನಾಮೆ ನೀಡಿದರು. ಹಿಂದೂ ಸಮಾಜದಲ್ಲಿ ಸಾವಿರಾರು ವರ್ಷಗಳಿಂದ ತುಳಿತಕ್ಕೊಳಗಾದ ಮಹಿಳೆಯರಿಗೆ ಸ್ವಾತಂತ್ರ್ಯ ಮತ್ತು ಸಮಾನತೆ ತಂದುಕೊಡುವಲ್ಲಿ ಕ್ರಾಂತಿಕಾರಿ ಪರಿವರ್ತನೆಯನ್ನು ತರಲಿದ್ದ ಹಿಂದೂ ಕೋಡ್ ಬಿಲ್ ವಿಫಲಗೊಂಡಿದ್ದು ಇಡೀ ಭಾರತೀಯ ಸ್ತ್ರೀ ಸಮುದಾಯಕ್ಕಾದ ದೊಡ್ಡ ಅವಮಾನವೆಂದೇ ಹೇಳಬೇಕು.

ಹಿಂದೂ ಕೋಡ್ ಬಿಲ್‌ಅನ್ನು ಸಂಸತ್ತು ತಿರಸ್ಕರಿಸಿದ ನಂತರ ಅದರಲ್ಲಿ ಅಡಕ ಗೊಂಡಿದ್ದ ಹಲವಾರು ಹಿಂದೂ ಕಾನೂನುಗಳನ್ನು ೧೯೫೬ರ ನಂತರ ಜಾರಿಗೊಳಿಸ ಲಾಯಿತು. ಅವುಗಳೆಂದರೆ : ಈ ಸಾಮಾಜಿಕ ಶಾಸನಗಳು ಮೊಟ್ಟಮೊದಲ ಬಾರಿಗೆ ಸ್ತ್ರೀಯರಿಗೆ ಸಮಾನ ಅವಕಾಶ ಮತ್ತು ಸಮಾನತೆಯನ್ನು ತಂದುಕೊಡುವ ನಿಟ್ಟಿನಲ್ಲಿ ಸಂವಿಧಾನಾತ್ಮಕ ಬೆಳವಣಿಗೆಗೆ ಕಾರಣವಾದವು. ಯಾವ ಸ್ತ್ರೀಯರಿಗೆ ಸರ್ವವಿಧದ ಹಕ್ಕು ನಿರಾಕರಿಸಿ ಅವಲಂಬಿತ ವರ್ಗವೆಂದು ಪರಿಗಣಿಸಲಾಗಿತ್ತೋ ಅಂಥವರಿಗೆ ಇದರಿಂದಾಗಿ ವ್ಯಕ್ತಿಗತ ಸಾಮಾಜಿಕ ಸ್ಥಾನಮಾನ ಮತ್ತು ವೈಯಕ್ತಿಕ ಸ್ವಾತಂತ್ರ್ಯ ಲಭಿಸಿದಂತಾಗಿತು. ಈ ಸಾಮಾಜಿಕ ಶಾಸನಗಳು ವಾಸ್ತವವಾಗಿ ಎಷ್ಟರಮಟ್ಟಿಗೆ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುತ್ತವೆ ಎಂಬುದು ಪ್ರಶ್ನಿಸುವಂತಹದ್ದಾದರೂ, ಅವುಗಳ ಅಸ್ತಿತ್ವ ಕಿಂಚಿತ್ತಾದರೂ ಸಾಮಾಜಿಕ ಪರಿವರ್ತನೆಗೆ ದಾರಿ ಮಾಡಿಕೊಟ್ಟಿದೆ ಎಂಬುದು ನಿರ್ವಿವಾದ.

ಸ್ತ್ರೀಯರು ಸಮಾಜದ ಬಹುಮುಖ್ಯ ಅಂಗ. ಒಟ್ಟು ಜನಸಂಖ್ಯೆಯ ಶೇ. ೪೮ರಷ್ಟು ಪ್ರಾತಿನಿಧ್ಯ ಹೊಂದಿರುವ ಸ್ತ್ರೀಯರು ದೇಶದ ಎಲ್ಲಾ ಸಂಪನ್ಮೂಲಗಳ ಬಳಕೆಯಲ್ಲಿ ತೀರಾ ಹಿಂದುಳಿದವರು ಮತ್ತು ಕೆಳಹಂತದ ಅಭಿವೃದ್ಧಿಯಲ್ಲಿ ಗೌಣಸ್ಥಾನದಲ್ಲಿರುವುದನ್ನು ಮನಗಂಡು ಅವರಿಗೆ ರಾಜಕೀಯ ಪ್ರಾತಿನಿಧ್ಯ ನೀಡಿ ಅವರು ಅಭಿವೃದ್ಧಿಪರ ಚಟುವಟಿಕೆಯಲ್ಲಿ ಪಾಲ್ಗೊಳ್ಳುವಂತೆ ಪ್ರೇರೇಪಿಸಿ ಸಾಮಾಜಿಕ ಪರಿವರ್ತನೆಯ ಹರಿಕಾರರನ್ನಾಗಿ ಮಾಡುವ ಪ್ರಯತ್ನ ನಡೆದಿದೆ. ರಾಜಕೀಯ ಮೀಸಲಾತಿ ಸ್ತ್ರೀ ಸಮುದಾಯಕ್ಕೆ ಹೊಸ ಅವಕಾಶವನ್ನು ತೆರೆದಿದ್ದು, ಶೇ. ೩೩ರಷ್ಟು ಮೀಸಲಾತಿಯನ್ನು ಸ್ಥಳೀಯ ಸಂಸ್ಥೆಗಳಲ್ಲಿ ನೀಡಿ ಅವರು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳಲು ಅವಕಾಶ ಮಾಡಿಕೊಡಲಾಗಿದೆ. ರಾಜಕೀಯ ಸಾಮಾಜೀಕರಣ ಮತ್ತು ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಗಳಲ್ಲಿ ಪಾಲ್ಗೊಳ್ಳುತ್ತಿರುವ ಮಹಿಳೆಯರಿಗೆ ಇದೊಂದು ಹೊಸ ಅನುಭವ.

ಸಾಮಾಜಿಕ, ರಾಜಕೀಯ, ಆರ್ಥಿಕ ಹಾಗೂ ಧಾರ್ಮಿಕವಾಗಿ ತೀರಾ ಕಡೆಗಣಿಸಲ್ಪಟ್ಟಿದ್ದ ಮಹಿಳೆಯರಿಗೆ ಮೀಸಲಾತಿ ಮೂಲಕ ಅವಕಾಶ ಕಲ್ಪಿಸಿದ್ದು, ಅವರು ಅಭಿವೃದ್ಧಿಯಲ್ಲಿ ಪಾಲ್ಗೊಳ್ಳುವಂತೆ ಮಾಡಿರುವುದು, ಭಾರತೀಯ ಸಂವಿಧಾನ ೭೩ನೇ ತಿದ್ದುಪಡಿ ಮೂಲಕ ಪಂಚಾಯತ್ ರಾಜ್ ಮತ್ತು ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಮೀಸಲಾತಿ ಕಲ್ಪಿಸಿರುವುದು ಒಂದು ಕ್ರಾಂತಿಕಾರಿ ಬದಲಾವಣೆಯಾಗಿದೆ. ರಾಜಕೀಯವಾಗಿ ಭಾಗವಹಿಸುವಿಕೆಯ ಮೂಲಕ ಆಡಳಿತದ ಭಾಗವಾಗುವಂತೆ ಮಾಡಿದ್ದು, ಹೊಸ ಸಾಮಾಜಿಕ ಪಾತ್ರಗಳನ್ನು ಮಹಿಳೆಯರು ನಿರ್ವಹಿಸುವಂತೆ ಮಾಡಿರುವುದು, ಹೊಸ ಬೆಳವಣಿಗೆಗಳಿಗೆ ಹೊಂದಿಕೊಂಡಂತೆ ಹೊಸ ಜವಾಬ್ದಾರಿ, ಹಕ್ಕು ಮತ್ತು ಸ್ಥಾನಮಾನಗಳು ಕೂಡ ಸ್ತ್ರೀಯರಿಗೆ ಲಭಿಸುವಂತಾಗಿರುವುದು ವಾಸ್ತವ. ಎಂದೂ ಕೇಳಿಸಿಕೊಳ್ಳದ ಸ್ತ್ರೀಯರ ಧ್ವನಿಗೆ ಸ್ಥಳೀಯ ಸಂಸ್ಥೆಗಳು ತಮ್ಮ ಅಹವಾಲು, ಸಮಸ್ಯೆಗಳು ಮತ್ತು ಕುಂದುಕೊರತೆಗಳನ್ನು ವ್ಯಕ್ತಪಡಿಸಲು ಮಾಧ್ಯಮವಾಗಿವೆ. ಏಕಮುಖಿ/ಏಕಪಕ್ಷೀಯವಾಗಿರುತ್ತಿದ್ದ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿಪರ ನಿರ್ಧಾರಗಳು ಈ ಮಹಿಳಾ ರಾಜಕೀಯ ಪ್ರಾತಿನಿಧ್ಯದಿಂದಾಗಿ ಈಚೆಗೆ ದ್ವಿಮುಖಿ/ದ್ವಿಪಕ್ಷೀಯ ನಿರ್ಧಾರಕ್ಕೆ ಪ್ರೇರಣೆಯನ್ನು ನೀಡುವಂತಾಗಿದೆ. ಕೆಳಹಂತದ ಸಂಸ್ಥೆಯಲ್ಲಿಯ ಸ್ತ್ರೀಯರ ಪ್ರಾತಿನಿಧ್ಯದಿಂದಾಗಿ ಅವರು ಅಭಿವೃದ್ಧಿಪರ

ಕಾರ್ಯಗಳ ಬಗ್ಗೆ ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ತಮ್ಮ ಅಹವಾಲು ಮತ್ತು ಸಮಸ್ಯೆಗಳ ಬಗ್ಗೆ ಸೂಕ್ತ ರಾಜಕೀಯ ವೇದಿಕೆಯ ಮೂಲಕ ಅಭಿವ್ಯಕ್ತಿ ಸಾಧ್ಯವಾಗಿದೆ.

ಭಾರತೀಯ ಮಹಿಳೆಯರ ಹೀನಾಯ ಸ್ಥಿತಿ ಮನುವಿನ ಫತ್ವಾ – 'ನ ಸ್ತ್ರೀ ಸ್ವಾತಂತ್ರ್ಯಮ್ ಅರ್ಹತಿ', ಅರ್ವಾಚೀನಕಾಲದ ಸ್ತ್ರೀಯರ ದುಃಸ್ಥಿತಿ, ಮಧ್ಯಕಾಲೀನ ಮಹಿಳೆಯರ ಹೀನಾಯ ಸಾಮಾಜಿಕ ಬದುಕು ಮತ್ತು ಆಧುನಿಕ ಕಾಲದಲ್ಲಿ ವಿವಿಧ ರೂಪಗಳಲ್ಲಿ ಮುಂದುವರೆಯುತ್ತಿರುವ ಲಿಂಗ ಆಧಾರಿತ ಸಾಮಾಜಿಕ ಅವಹೇಳನ ಮತ್ತು ಅನ್ಯಾಯಗಳ ಮಧ್ಯೆಯೇ ಅವರ ಸಾಮಾಜಿಕ ಸ್ಥಾನಮಾನಕ್ಕಾಗಿ ನಡೆದ ಹೋರಾಟದ ಒಂದು ಪರಂಪರೆಯೇ ಇದೆ.

ಬುದ್ಧ, ಬಸವೇಶ್ವರ, ಮೀರಾಬಾಯಿ, ಮಹಾತ್ಮಾ ಜ್ಯೋತಿಬಾ ಫುಲೆ, ಡಾ|| ಬಿ. ಆರ್. ಅಂಬೇಡ್ಕರ್, ಹಿಂದೂ ಕೋಡ್ ಬಿಲ್, ಸಾಮಾಜಿಕ ಶಾಸನಗಳು ಮತ್ತು ರಾಜಕೀಯ ಮೀಸಲಾತಿ ಮತ್ತು ರಾಜಕೀಯ ಪ್ರಾತಿನಿಧ್ಯದ ಮೂಲಕ ಸ್ತ್ರೀಯರ ಸಬಲೀಕರಣಕ್ಕಾಗಿ ನಡೆದ ಅವಿಶ್ರಾಂತ ಹೋರಾಟಗಳ ನಡುವೆಯೇ ಮೂಲಭೂತ ಮಾನವ ಹಕ್ಕುಗಳನ್ನು ಸ್ತ್ರೀಯರಿಗೆ ಆಧುನಿಕ ಜಗತ್ತಿನಲ್ಲಿಯೂ ನಿರಾಕರಿಸುತ್ತಲೇ ಇರುವುದು ಕಟುವಾಸ್ತವ. ಈ ಹಿನ್ನೆಲೆಯಲ್ಲಿ ಪ್ರಸಕ್ತ ಭಾರತೀಯ ಸಮಾಜದಲ್ಲಿ ಸ್ತ್ರೀಯರಿಗಾಗುವ ಅವ್ಯಾಹತ ಮತ್ತು ಸಾಮಾಜಿಕ ಹಕ್ಕುಗಳ ನಿರಾಕರಣೆಯ ಮೇಲೆ ಬೆಳಕು ಚೆಲ್ಲುವುದು ಈ ಪ್ರಬಂಧದ ಮುಖ್ಯ ಉದ್ದೇಶವಾಗಿದೆ.

ನಿರೀಕ್ಷೆಗೂ ಮೀರಿ ತೆರಿಗೆ ಸಂಗ್ರಹ



ಮಂತ್ರಿಗಳಿಗೆಲ್ಲ 'ಗೂಟದ ಕಾರು' ಬದಲು ಓಡಾಡಲು ಒಂದೊಂದು 'ಹೆಲಿಕಾಪ್ಟರ್' ಕೊಡಬಹುದು !

**ಲಿಂಗ ಆಧಾರಿತ ತಾರತಮ್ಯ : ಮಾನವ ಹಕ್ಕುಗಳ ಉಲ್ಲಂಘನೆ**

ಲಿಂಗ ಆಧಾರಿತ ಸಾಮಾಜಿಕ ತಾರತಮ್ಯ ಇಂದಿನ ವಾಸ್ತವ ಸಂಗತಿ. ಉದ್ಯೋಗ, ವಸತಿ, ಶಿಕ್ಷಣ, ಸಾಕ್ಷರತೆ, ಮೂಲಭೂತ ಸಂಪನ್ಮೂಲಗಳ ಹಂಚಿಕೆಯಲ್ಲಿ ತಾರತಮ್ಯ, ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗಿಸಿಕೊಳ್ಳಲು ಇರುವ ಸಾಮಾಜಿಕ ಅಡೆತಡೆಗಳು, ಲಿಂಗ ತಾರತಮ್ಯ ಪುರಸ್ಕರಿಸುವ ಸಮಾಜಿಕ-ಧಾರ್ಮಿಕ ವಿಧಿ ಆಚರಣೆಗಳು ಮತ್ತು ಆರ್ಥಿಕ ಅವಲಂಬಿತನವನ್ನು ಬೆಂಬಲಿಸುವ ಸಾಮಾಜಿಕ-ಆರ್ಥಿಕ ಅಂಶಗಳು ಸ್ತ್ರೀ-ಪುರುಷರ ನಡುವಿನ ಸಾಮಾಜಿಕ ಸಂಬಂಧಗಳನ್ನು ನಿರ್ಧರಿಸುತ್ತವೆ. ಈ ಎಲ್ಲ ಅಂಶಗಳು ಸ್ತ್ರೀ-ಪುರುಷರ ನಡುವಿನ ಲಿಂಗ ತಾರತಮ್ಯವನ್ನು ನಿರ್ಧರಿಸುತ್ತವೆ. ಮಹಿಳೆಯರು ಮತ್ತು ಬಾಲಕಿಯರ ವಿರುದ್ಧದ ತಾರತಮ್ಯವು ಸರ್ವವ್ಯಾಪಿ ಆಗಿದ್ದು, ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ತಾರತಮ್ಯ ಮುಂದುವರೆಯುತ್ತಲೇ ಇದೆ.

ಸ್ತ್ರೀ-ಪುರುಷರ ನಡುವಿನ ಲಿಂಗ ತಾರತಮ್ಯವನ್ನು ಪರಿವರ್ತಿಸುವ ಸಾರ್ವಜನಿಕ ಧೋರಣೆಗಳು ಸಹ ಪರಿಣಾಮಕಾರಿಯಾಗಿಲ್ಲ. ಏಕೆಂದರೆ, ಸ್ತ್ರೀಯರನ್ನು ಮೂಲಭೂತವಾಗಿ ಗೃಹಿಣಿಯರೆಂದು ಗುರುತಿಸಲಾಗುತ್ತಿದೆಯೇ ವಿನಾ ಪೂರ್ಣ ಮತ್ತು ಸಮಾನ ನಾಗರಿಕ ಸ್ಥಾನಮಾನದಿಂದ ಗುರುತಿಸಲಾಗುತ್ತಿಲ್ಲ. ಇದರಿಂದಾಗಿ ಅವರ ಸಾಮಾಜಿಕ ಸ್ಥಿತಿಗತಿಯೂ ತೀರಾ ಕೆಳಮಟ್ಟದ್ದಾಗಿದೆ. ಮಾನವ ಅಭಿವೃದ್ಧಿಯು ಕುಂಠಿತವಾಗಿರುವೆಡೆ ಸ್ತ್ರೀಯರ ಅಭಿವೃದ್ಧಿಯು ಕೆಳಮಟ್ಟದ್ದಾಗಿರುವ ಸಾಧ್ಯತೆಗಳಿವೆ. ಸರ್ಕಾರವು ಒದಗಿಸುವ ಶಿಕ್ಷಣ, ಆರೋಗ್ಯ ಮತ್ತು ಕುಡಿಯುವ ನೀರು, ನೈರ್ಮಲ್ಯ, ವಸತಿಯಂತಹ ಮೂಲಭೂತ ಸೇವೆಗಳು ಜನರಿಗೆ ಸರಿಯಾದ ರೀತಿಯಲ್ಲಿ ತಲುಪದಿರುವ ಸ್ಥಿತಿ ಇದ್ದಲ್ಲಿ, ಅದರ ನೇರ ದುಷ್ಪರಿಣಾಮ ಮಹಿಳೆಯರನ್ನು ತಟ್ಟುತ್ತದೆ. ಕುಟುಂಬ, ಸಮುದಾಯ ಮತ್ತು ಸೇವೆ ಒದಗಿಸುವ ಸಂಸ್ಥೆಗಳಲ್ಲಿರುವ ಲಿಂಗತಾರತಮ್ಯ ನೀತಿಯಿಂದಾಗಿ ಸ್ತ್ರೀಯರು ಮತ್ತು ಬಾಲಕಿಯರು ಸಂಕಷ್ಟಕ್ಕೊಳಗಾಗಬೇಕಾಗುತ್ತದೆ. ಕರ್ನಾಟಕ ರಾಜ್ಯವೂ ಸೇರಿದಂತೆ ಬಹುತೇಕ ರಾಜ್ಯಗಳಲ್ಲಿ ಮಾನವ ಅಭಿವೃದ್ಧಿಗೆ ಸಂಬಂಧಿಸಿದಂತೆ ಲಿಂಗತಾರತಮ್ಯವು ಪ್ರಾದೇಶಿಕ ಅಸಮಾನತೆಯೊಂದಿಗೆ ತಳಕುಹಾಕಿಕೊಂಡಿದೆ.

ಲಿಂಗ ತಾರತಮ್ಯ ಮತ್ತು ಮಾನವ ಅಭಿವೃದ್ಧಿ ಕುಂಠಿತಗಳ ನಡುವೆ ನಿಕಟ ಸಂಬಂಧವಿದ್ದು, ಬೇರೆ ತೆರನಾದ ತಾರತಮ್ಯಗಳು ಆಗಾಗ ಪ್ರಕಟಗೊಳ್ಳುತ್ತಿರುತ್ತವೆ. ಅಂದರೆ ಸುಶಿಕ್ಷಿತರು ಮತ್ತು ಆರ್ಥಿಕವಾಗಿ ಸ್ಥಿತಿವಂತರಾಗಿರುವವರಲ್ಲಿಯೇ ಹೆಣ್ಣು ಶಿಶುವಿನ ಬಗ್ಗೆ ತಾತ್ಸಾರ ಮತ್ತು ಗಂಡು ಶಿಶುವಿನ ಬಗ್ಗೆ ವ್ಯಾಮೋಹ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದೆ.

ಲಿಂಗ ತಾರತಮ್ಯವನ್ನು ಹೋಗಲಾಡಿಸುವುದು ಮತ್ತು ಸ್ತ್ರೀಯರನ್ನು ಸಬಲೀಕರಣಗೊಳಿಸುವುದು ರಾಜ್ಯದ ಮುಖ್ಯ ಕಾರ್ಯವಾಗಿದೆ. 'ಸರ್ವರಿಗೂ ಸಮಬಾಳು ಮತ್ತು ಸರ್ವರಿಗೂ ಸಮಪಾಲು' ಒದಗಿಸಿ ಸ್ತ್ರೀ-ಪುರುಷರು ಸಮಾನ ಅವಕಾಶ ಪಡೆದುಕೊಂಡು ಸಮಾಜದ ಉನ್ನತಿ ಸಾಧಿಸುವುದು ಅತಿ ಅವಶ್ಯ.

ಇತ್ತೀಚಿನ ದಿವಸಗಳಲ್ಲಿ ಸರ್ಕಾರವು ಸ್ತ್ರೀಯರ ಸಾಮಾಜಿಕ ಸ್ಥಾನಮಾನ ಸುಧಾರಿಸುವ ನಿಟ್ಟಿನಲ್ಲಿ ಜಾರಿಗೆ ತಂದಿರುವ ಹಲವಾರು ಸಾಮಾಜಿಕ ಶಾಸನಗಳು, ಅಭಿವೃದ್ಧಿಯಲ್ಲಿ ಅವರನ್ನು ತೊಡಗಿಸುವ ರಾಜಕೀಯ ಪ್ರಾತಿನಿಧ್ಯ, ಎಲ್ಲ ಕ್ಷೇತ್ರಗಳಲ್ಲಿ ಮಹಿಳೆಯರಿಗೆ ಮೀಸಲಾತಿ ಮತ್ತು ಸಬಲೀಕರಣಕ್ಕೆ ಪೂರಕವಾಗುವ ಸಾಮಾಜಿಕ ಪರಿಸರ ನಿರ್ಮಾಣದಿಂದಾಗಿ ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯ, ಅತ್ಯಾಚಾರ ಮತ್ತು ಅಮಾನವೀಯ ಶೋಷಣೆಗೆ ಕಿಂಚಿತ್ತಾದರೂ ತಡೆಯೊಡ್ಡಿದಂತಾಗಿದೆ. ಸಾರ್ವಜನಿಕ ಆರೋಗ್ಯ ಸುಧಾರಣೆಯಿಂದಾಗಿ ಮಹಿಳೆಯರು ಮತ್ತು ಹೆಣ್ಣು ಶಿಶುಗಳ ಆರೋಗ್ಯ ಸುಧಾರಿಸಿದ್ದು, ಹೆಣ್ಣುಶಿಶು ಲಿಂಗ ರೇಶಿಯೋದಲ್ಲಿ ಏರಿಕೆಯುಂಟಾಗಿದೆ. ದುರ್ದೈವವಶಾತ್, ಹೆಣ್ಣು ಶಿಶು ಭ್ರೂಣಹತ್ಯೆಯು ಹೊಸ ರೂಪ ಪಡೆದುಕೊಳ್ಳುತ್ತಿದೆ.

ಹಿಂಸೆ ಇದ್ದಲ್ಲಿ ಮಾನವ ಅಭಿವೃದ್ಧಿ ಸಾಧ್ಯವಿಲ್ಲ. ಹಿಂಸೆಯ ಪರಿಸರದಲ್ಲಿ ಸ್ತ್ರೀಯರ ಅಭಿವೃದ್ಧಿಯು ಹಗಲುಗನಸಾಗೇ ಉಳಿದುಬಿಡುತ್ತದೆ. ಹಿಂಸಾಕೃತ್ಯಗಳಿಂದ, ಲೈಂಗಿಕ ದೌರ್ಜನ್ಯಗಳಿಂದ, ಕೌಟುಂಬಿಕ ಕಲಹಗಳಿಂದ, ಸಾಮಾಜಿಕ ಶೋಷಣೆಯನ್ನು ಪೋಷಿಸುವ ವಿವಿಧ ರೀತಿಯ ಸಾಮಾಜಿಕ ಪಿಡುಗುಗಳಿಂದ ಸದಾಕಾಲ ನರಳುವ ಹಿಂಸಾ ಪರಿಸರದಲ್ಲಿ ಅವರ ಚಲನಶೀಲತೆ, ಸ್ವಾತಂತ್ರ್ಯ ಮತ್ತು ಸ್ವಾಭಿಮಾನ ಸಾಧ್ಯವಾಗುವುದಿಲ್ಲ.

ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯ ಮತ್ತು ಅತ್ಯಾಚಾರಗಳು ಅಧಿಕೃತವಾಗಿ ದಾಖಲಾಗುವುದೇ ಇಲ್ಲ. ಅಂತಹ ಹಿಂಸಾಕೃತ್ಯಗಳ ಬಗ್ಗೆ ಅಪರಾಧವೆಂದು ದಾಖಲಿಸುವ ಸ್ತ್ರೀಯರ ಪ್ರಯತ್ನಗಳಿಗೆ ಯಾವ ಹಂತದಲ್ಲಿಯೂ ಬೆಂಬಲ ದೊರೆಯುವುದೇ ಇಲ್ಲ. ಒಂದು ವೇಳೆ ಹಿಂಸಾಕೃತ್ಯದ ಅಪರಾಧದ ಮೇಲೆ ಪ್ರಕರಣ ದಾಖಲಿಸಿದ್ದಾಗ್ಯೂ, ನಿಜವಾಗಿ ಪ್ರಕರಣದಲ್ಲಿ ಭಾಗಿಯಾದ ಅಪರಾಧಿಯ ವಿರುದ್ಧ ಅಧಿಕಾರಶಾಹಿ ಕ್ರಮ ಜರುಗಿಸುವುದಿಲ್ಲ.

ಬಡತನ ನಿವಾರಣೆಗೆ ಮಹಿಳೆಯರಿಗೆ ಸಾಲ ಸೌಲಭ್ಯ ಮತ್ತು ಕುಟುಂಬದ ವರಮಾನವನ್ನು ಸುಧಾರಿಸುವ ನಿಟ್ಟಿನಲ್ಲಿ ಮಾಡಿದ ಸರ್ಕಾರದ ಪ್ರಯತ್ನಗಳು ಸ್ತ್ರೀಯರ ಆರ್ಥಿಕ ಸ್ಥಿತಿಗತಿಯನ್ನು ಬದಲಾಯಿಸುವಲ್ಲಿ ಗುರುತರವಾದ ಪಾತ್ರ ನಿರ್ವಹಿಸುತ್ತಿಲ್ಲವೆನ್ನುವುದು ವಾಸ್ತವ. ಇಂತಹ ಪ್ರಯತ್ನಗಳು ಎಷ್ಟರ ಮಟ್ಟಿಗೆ ಸ್ತ್ರೀಯರ ಸಾಮಾಜಿಕ ಪಾತ್ರ, ಅದರ ಅವಲಂಬನೆಗಳು ಮತ್ತು ಅಧಿಕಾರದ ಸ್ವರೂಪವನ್ನು ಬದಲಾಯಿಸುತ್ತವೆ ಎನ್ನುವುದೇ ಪ್ರಶ್ನೆ.

ಮಹಿಳಾ ರಾಜಕೀಯ ಪ್ರಾತಿನಿಧ್ಯ ಮತ್ತು ಮೀಸಲಾತಿಯಿಂದಾಗಿ ಲಿಂಗ ತಾರತಮ್ಯವನ್ನು ಅವರು ಸಂಬಂಧಿಸಿದ ರಾಜಕೀಯ ವೇದಿಕೆಗಳಲ್ಲಿ ಪ್ರತಿನಿಧಿಸಲು ಸಾಧ್ಯವಾಗಿದೆಯೆ ? ಇಲ್ಲದಿದ್ದರೆ ಅದರ ಹಿಂದಿರುವ ಸಾಮಾಜಿಕ-ರಾಜಕೀಯ ಒತ್ತಡಗಳು ಯಾವುವು ? ಮತ್ತು ಅವುಗಳಲ್ಲಿ ಎಷ್ಟು ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸುತ್ತವೆ ಎಂಬುದನ್ನು ವಿವೇಚಿಸುವ ಅಗತ್ಯವಿದೆ. ಮುಕ್ತ ಭಾಗವಹಿಸುವಿಕೆ ಮತ್ತು ತನ್ನ ಹಕ್ಕು ಪ್ರತಿಪಾದಿಸಲು ಸ್ವಾತಂತ್ರ್ಯ ಇಲ್ಲದಿರುವ ರಾಜಕೀಯ ಪ್ರಾತಿನಿಧ್ಯಕ್ಕೆ ಯಾವ ಬೆಲೆಯೂ ಇಲ್ಲವೆಂಬುದು ಕಟುವಾದ ಸತ್ಯವಾಗಿದೆ.

ಈ ಹಿನ್ನೆಲೆಯಲ್ಲಿ ಲಿಂಗ ಆಧಾರಿತ ಸಾಮಾಜಿಕ ಶೋಷಣೆ ಮತ್ತು ತಾರತಮ್ಯವನ್ನು ಮೂಲಭೂತ ಮಾನವ ಹಕ್ಕುಗಳ ಉಲ್ಲಂಘನೆಯೆಂದೇ ಪರಿಗಣಿಸಬೇಕಾಗುತ್ತದೆ. ಜನಸಂಖ್ಯೆಯ ಅರ್ಧದಷ್ಟಿರುವ ಸಮಾಜದ ಬಹುಮುಖ್ಯ ಅಂಗವನ್ನು ಸದಾಕಾಲ ಹತ್ತಿಕ್ಕುವ ಮತ್ತು ಅವರಿಗೆ ಸರಿಸಮಾನ ಸ್ಥಾನಮಾನ ನಿರಾಕರಿಸುವ ಪ್ರವೃತ್ತಿಯು ಯಾವುದೇ ಅಭಿವೃದ್ಧಿಶೀಲ ಸಮಾಜದ ಲಕ್ಷಣವಲ್ಲವೆಂಬುದನ್ನು ಪ್ರಾಂಜಲ ಮನಸ್ಸಿನಿಂದ ಒಪ್ಪುವುದು ಸಮಾಜದ ಹಿತದೃಷ್ಟಿಯಿಂದ ಆರೋಗ್ಯಕರ.

'ಮಹಿಳೆಯರನ್ನು ಗಟಾರಿನಲ್ಲಿ ಒತ್ತಿಹಿಡಿಯುವವನ ತಲೆ ಗಟಾರಿಗೆ ಹೊಂದಿಕೊಂಡೇ ಇರುತ್ತದೆ' ಎಂಬುದು ಎಷ್ಟು ಸತ್ಯ !

ಪ್ರೊ|| ಮಂಜುಳಾ ಸದಾಶಿವ ಮರ್ಜಿ
ಅಧ್ಯಾಪಕರು, ಸಮಾಜಶಾಸ್ತ್ರ ವಿಭಾಗ, ಕರ್ನಾಟಕ ಕಲಾ ಮಹಾವಿದ್ಯಾಲಯ, ಧಾರವಾಡ - ೫೮೦ ೦೦೧

# ಮೀಸಲಾತಿ, ಕೆನೆಪದರ, ನ್ಯಾಯಸಮ್ಮತ!

ಎಸ್. ಪಿ. ಮೂಲೆಮನೆ (ಷಣ್ಮುಖ ಸ್ವಾಮಿ)

ಪ್ರಸ್ತುತ ಸಂದರ್ಭದಲ್ಲಿ ಮೀಸಲಾತಿ ಮತ್ತು ಕೆನೆಪದರವನ್ನು ಕುರಿತಾಗಿ ದೇಶದ ತುಂಬಾ ಸಾರ್ವಜನಿಕ ವಲಯದಲ್ಲೂ ಮುಕ್ತ ಚರ್ಚೆಯಾಗಬೇಕಾಗಿದೆ. ಮೀಸಲಾತಿಯ ಸತ್ಯಾಸತ್ಯತೆಗಳನ್ನು ಜನ ತಿಳಿಯಬೇಕಾಗಿದೆ. ಮೀಸಲಾತಿ ಎಂದಾಕ್ಷಣ ಮೇಲ್ವರ್ಗದ ಜನ ತಮ್ಮ ಸವಲತ್ತುಗಳನ್ನು ಕಿತ್ತು ಕೆಳವರ್ಗದವರಿಗೆ ನೀಡುತ್ತದೆ ಎನ್ನುವುದು ಭ್ರಮೆ.

ಮೀಸಲಾತಿ ಇರುವುದು ಜಾತಿಯನ್ನು ಮೀರಿ ನಡೆಯುವುದಕ್ಕೇ ವಿನಾ ಜಾತಿಯನ್ನು ಪೋಷಿಸುವುದಕ್ಕಲ್ಲ ಎನ್ನುವ ಸರ್ವೋಚ್ಚ ನ್ಯಾಯಾಲಯದ ಮಾತನ್ನ ಜನ ತುಂಬಾ ಹಗುರವಾಗಿ ಆಲೋಚನೆ ಮಾಡ್ತಾ ಇರೋದು ಸಮಂಜಸವಲ್ಲ.

ಇತರ ಹಿಂದುಳಿದ ವರ್ಗದವರಿಗೆ ಮೀಸಲಾತಿಯನ್ನು ನಿರಾಕರಣೆ ಮಾಡುತ್ತಿರುವ ಮತಿಹೀನರಿಗೆ, ಅದರ ಅಂತರಂಗದ ಸ್ಪಷ್ಟತೆ ಇಲ್ಲದೆ ಕುರಿಗಳೋಪಾದಿಯಲ್ಲಿ ಹಳ್ಳಕ್ಕೆ ಬೀಳೊ ಪರಿಯನ್ನ ಗಮನಿಸಿದರೆ ನಗಬೇಕೋ, ಅಳಬೇಕೋ ಒಂದೂ ತಿಳಿಯುತ್ತಾ ಇಲ್ಲ. ಇಲ್ಲಿ ತಾಂತ್ರಿಕವಾದ ಸಾಧಕ-ಬಾಧಕಗಳೇನೇ ಇರಲಿ ಅಷ್ಟು ದೊಡ್ಡದಾಗಿ ಯೋಚನೆ ಮಾಡೋದು ಎರಡನೆಯ ಕೆಲಸವಾಗಲಿ. ಮೊದಲನೆಯದಾಗಿ ಮೀಸಲಾತಿ ವಿರುದ್ಧ ಹೋರಾಡೊ ಜನ ಯಾರು ? ಸಾಮಾನ್ಯ ವರ್ಗದ ಜನಕ್ಕೆ ಮೀಸಲಾತಿಯನ್ನು ಕೊಟ್ಟಾಗ ಮೀಸಲಾತಿ ಫಲಾನುಭವಿಗಳಾದೋರು ಯಾರು ? ಹಾಗಾದರೆ ಲಾಭ ಆಗೋದು ಯಾರಿಗೆ ? ಹಿಂದುಳಿದವರಿಗೆ ಮೀಸಲಾತಿಯನ್ನೇ ನೀಡದಿದ್ದರೆ ಅವರೆಲ್ಲ ಸಾಮಾನ್ಯ ವರ್ಗದ ಗುಂಪಿನಿಂದಲೇ ಸ್ಪರ್ಧಿಸುತ್ತಾರೆ.

ಮೀಸಲಾತಿಯ ವಿರೋಧಿಗಳು ಕೆಲವು ವಾಸ್ತವಾಂಶದ ಅಂಕಿ-ಅಂಶಗಳನ್ನು ಗಮನಿಸಬೇಕು. ಐ.ಎ.ಎಸ್., ಐ.ಪಿ.ಎಸ್., ಐ.ಎಫ್.ಎಸ್., ಐ.ಆರ್.ಎಸ್. ನಂತಹ ಒಟ್ಟು ಅಧಿಕಾರಿಗಳ ಸ್ಥಾನಗಳ ಪೈಕಿ ಶೇ. ೭೪ರಷ್ಟಿರುವ ಜನಸಂಖ್ಯೆಯ ಹಕ್ಕನ್ನು ಶೇ. ೪ರಷ್ಟಿರುವ ಬ್ರಾಹ್ಮಣರು ಹೊಂದಿದ್ದಾರೆ.

ಶೇಕಡ ೨೨.೫ ಪರಿಶಿಷ್ಟ ಜಾತಿಯವರ ಪೈಕಿ (೩೦ ಲಕ್ಷ) ಮಾತ್ರ ಮೀಸಲಾತಿ ಸೌಲಭ್ಯ ಪಡೆದಿದ್ದಾರೆ. ಮೀಸಲಾತಿ ಇಲ್ಲದೆ ಇದ್ದಲ್ಲಿ?

ರಾಜ್ಯದಲ್ಲಿ ಸರಕಾರಿ ವೈದ್ಯಕೀಯ ಕಾಲೇಜುಗಳು ಕೇವಲ ೩, ಖಾಸಗಿ ವೈದ್ಯ ಕಾಲೇಜುಗಳು ೨೬, ದಂತ ವೈದ್ಯಕೀಯ ಕಾಲೇಜುಗಳು ೩೮, ಸರಕಾರಿ ತಾಂತ್ರಿಕ ಕಾಲೇಜುಗಳು ೨ ಮಾತ್ರ. ಖಾಸಗಿ ಕಾಲೇಜುಗಳು ೧೦೭. ಈ ಖಾಸಗಿ ಕಾಲೇಜುಗಳಿಗೆ ಶೇ. ೫೦ ಸೀಟುಗಳನ್ನು ಹಣಕ್ಕೆ ಮಾರಿಕೊಳ್ಳಲು ಸರಕಾರವೇ ಅನುಮತಿ ನೀಡಿದೆ. ಇವು ಈ ದೇಶದ ದಡ್ಡ ಹಣವಂತರಿಗೆ ಮೀಸಲು.

ದೇಶದ ಜನಸಂಖ್ಯೆಯ ಶೇ. ೮೪ರಷ್ಟು ಜನ ಶೇ. ೪೯.೫ರಷ್ಟು ಮೀಸಲಾತಿಯನ್ನು ಪಡೆಯುತ್ತಾರೆ. ಉಳಿದ ಶೇ. ೧೬ ಜನ ಶೇ. ೫೦.೫ ಮೀಸಲಾತಿಯನ್ನು ಅನುಭವಿಸುತ್ತಿದ್ದಾರೆ. ಯಾವ ವರ್ಗದ ಜನ ಮೀಸಲಾತಿಯಿಂದ ವಂಚಿತರು ?

ನಾವು ಇಂದು ಪೂರ್ಣ ಪ್ರಮಾಣದ ಪ್ರಜಾಸತ್ತಾತ್ಮಕ ಅರಿವನ್ನಾಗಲೀ ಅಥವಾ ಇಡೀ ಭಾರತೀಯ ಜನಾಂಗವೇ ಒಂದು ಎಂಬ ಮನೋಭಾವನೆಯನ್ನಾಗಲೀ ಹೊಂದಿಲ್ಲ. ವ್ಯವಸ್ಥಿತವಾದ ಪ್ರಜಾಸತ್ತೆಯ ಮಾತು ಹಾಗಿರಲಿ, ಇಂದು ನಮ್ಮಲ್ಲಿರುವುದು ಅಸಂಖ್ಯ ಸರಪಳಿಗಳಿಂದ ಕಟ್ಟಿರುವ ಬಂಡವಾಳಶಾಹಿ ಪ್ರಜಾಸತ್ತೆ. ಆದ್ದರಿಂದ ಮೀಸಲಾತಿ ಇರಲೇಬೇಕು ಹಾಗೂ ಅದನ್ನು ಸಮ್ಮತಿಸಬೇಕು. ಒಂದು ವೇಳೆ ಜನರ ಹಾಗೂ ಅಧಿಕಾರ ವರ್ಗದಲ್ಲಿ ತೀವ್ರತರಹದ ಪ್ರಜಾಸತ್ತಾತ್ಮಕ ಬದಲಾವಣೆ ಉಂಟಾಗುವ ಮೊದಲೇ ಮೀಸಲಾತಿಯನ್ನು ರದ್ದುಮಾಡಿದರೆ ಇದರಿಂದ ಲಾಭವಾಗುವುದು ಪ್ರತಿಗಾಮಿ ಹಾಗೂ ಪಟ್ಟಭದ್ರ ಹಿತಾಸಕ್ತಿಗಳಿಗೆ ಮಾತ್ರ.

ಈಗ ವರ್ತಮಾನದಲ್ಲಿ ಮೀಸಲಾತಿಯ ಬಗ್ಗೆ ಸುಪ್ರೀಂ ಕೋರ್ಟ್ ಎತ್ತಿರುವ ಕೆನೆಪದರದ ಮಾತು ಸಂವಿಧಾನಾತ್ಮಕವಾಗಿ ಸಮಂಜಸವಾಗಿಯೇ ಇದೆ. ಜಾತಿ ಜಾತಿಯ ನಡುವೆ ಇರುವ ಭೇದದಂತೆ ಜಾತಿಯ ಒಳಗೆ ಉಳ್ಳವರು, ಬಡವರು ಇದ್ದಾರೆ. ಅವರನ್ನು ಗುರುತಿಸಿ ತುಳಿತಕ್ಕೊಳಗಾದವರಿಗೆ ಅವಕಾಶ ನೀಡಬೇಕು. ಸಂವಿಧಾನದ ೧೬(೧)ರ ಅಡಿಯಲ್ಲಿ ಪ್ರತಿಯೊಬ್ಬ ನಾಗರಿಕನಿಗೆ ಸಮಾನ ಅವಕಾಶವಿದೆ. ಸಂವಿಧಾನದ ೧೬(೪)ರ ವಿಧಿಯಲ್ಲಿ ತುಳಿತಕ್ಕೊಳಗಾದ ವರ್ಗಕ್ಕೆ ವಿಶೇಷ ಅವಕಾಶ ಕಲ್ಪಿಸಲು ತಿಳಿಸಲಾಗಿದೆ. ಇವೆರಡರ ನಡುವೆ ಸಮತೋಲನವಿರಲಿ ಎಂದು ನ್ಯಾಯಾಲಯ ಹೇಳಿದೆ.

ಈ ಸಂದರ್ಭದಲ್ಲಿ ಹಲವಾರು ದಲಿತ ನಾಯಕರು ಇದರ ಬಗ್ಗೆ ಅಪಸ್ವರವೆತ್ತಿದಾರೆ ಮತ್ತು ಸರ್ಕಾರ ಈಗಾಗಲೇ ಸಂವಿಧಾನದ ೭೭ನೇ ತಿದ್ದುಪಡಿ ತರುವುದರ ಮುಖಾಂತರ ಪರಿಶಿಷ್ಟ ಜಾತಿ, ಪಂಗಡದವರಿಗೆ ಬಡ್ತಿ ಮೀಸಲಾತಿ ಮುಂದುವರಿಸಿದೆ. ಈ ಅಪಸ್ವರ ಎತ್ತುವವರ ವಾದ ಹೀಗಿದೆ: ಕೆನೆಪದರವನ್ನೇ ಮೀಸಲಾತಿಯಿಂದ ಹೊರಗಿಟ್ಟರೆ, ಮೆಡಿಕಲ್, ಎಂಜಿನಿಯರಿಂಗ್‌ನಂತಹ ಉನ್ನತ ಶಿಕ್ಷಣದ ಸೀಟುಗಳು ಹಾಗೆಯೇ ಖಾಲಿ ಉಳಿಯುತ್ತವೆ. ಉದ್ಯೋಗದಲ್ಲಿ ಬಡ್ತಿ ನೀಡದಿದ್ದರೆ ಹಿಂದುಳಿದ ವರ್ಗದವರು ಉನ್ನತ ಹುದ್ದೆಗಳನ್ನು ಅಲಂಕರಿಸಲಾಗದು ಎನ್ನುವ ವಿತಂಡವಾದವನ್ನು ಮುಂದಿಡುತ್ತಿದ್ದಾರೆ. ಈ ವಾದ ಮೀಸಲಾತಿಯನ್ನು ವಿರೋಧಿಸುವುದಕ್ಕಿಂತ ಹೆಚ್ಚು ಅಪಾಯಕಾರಿ ಎನ್ನುವುದನ್ನು ಆಮೂಲಾಗ್ರವಾಗಿ ವಿವೇಚಿಸಬೇಕಿದೆ.

ಈಗಾಗಲೇ ಸರ್ಕಾರ ಬಹುಮತಕ್ಕೆ ಅಂಗೀಕಾರವಿರುವ ಪ್ರಜಾಸತ್ತೆಯ ವಿಧಿಗಳನ್ನು ಉಪಯೋಗಿಸಿಕೊಂಡು ಸಂವಿಧಾನದ ೭೭ನೇ ತಿದ್ದುಪಡಿ ತಂದಿರುವುದು ಪೂರ್ವಗ್ರಹಪೀಡಿತವಾಗಿದೆ. ಇಲ್ಲಿನ ಬಂಡವಾಳಶಾಹಿ ಪ್ರಭುತ್ವಕ್ಕೆ ಬೇಕಿರುವುದು ಈ ದೇಶದ ಜನರು ಮತಿವಂತರಾಗಿ ಬದುಕು ಸಾಗಿಸುವುದಲ್ಲ, ಬದಲಾಗಿ ಮತ ನೀಡುವುದು ಮಾತ್ರ. ಈ ಪ್ರತಿಗಾಮಿ ಮನಸ್ಸುಗಳ, ಆಳುವ ವ್ಯವಸ್ಥೆಯ, ಸೆರಗಿನಲ್ಲಿ ಸಿಲುಕಿರುವ ಹಿಂದುಳಿದ ವರ್ಗದ ನಾಯಕರುಗಳು ಅರಿಯಬೇಕು.

ಕೆನೆಪದರವನ್ನು ಹೊರಗಿಟ್ಟರೆ ಆಗುವ ಅನಾಹುತವನ್ನು ಕೂಲಂಕಷವಾಗಿ ಚರ್ಚಿಸಬೇಕಿದೆ. ದೆಹಲಿಯಲ್ಲಿರುವ ಐ.ಐ.ಟಿ.ಯಲ್ಲಿ ಪರಿಶಿಷ್ಟ ಜಾತಿಗೆ ಮೀಸಲಾದ ಸೀಟುಗಳಲ್ಲಿ ಬಹುತೇಕ ಸೀಟುಗಳು, ಎಂಜಿನಿಯರ್, ವೈದ್ಯರು, ಐ.ಎ.ಎಸ್. ಅಧಿಕಾರಿಗಳು, ಬ್ಯಾಂಕ್ ಮ್ಯಾನೇಜರ್ ಅಥವಾ ಉದ್ಯೋಗಪತಿಗಳಿರುವ ಪ.ಜಾ. ಪಂಗಡದ ಪಾಲಾಗಿದೆ. ಇದು ದೇಶದಾದ್ಯಂತ ನಡೆಯುತ್ತಿರುವುದು. ಇದೇ ಹಿಂದುಳಿದ ದಲಿತ ವರ್ಗದಲ್ಲಿನ ಮುಂದುವರಿದ ಕುಟುಂಬದ ಸದಸ್ಯರುಗಳು ಮಾತ್ರ ಕೆನೆಪದರ

> ಮೀಸಲಾತಿ ಕೆನೆಪದರದ ಏನೇ ಮಾತನಾಡಲಿ ಎಲ್ಲೇ ಮಾತನಾಡಲಿ, ಹಿಂದುಳಿದ ಜಾಣ ಬಡವನನ್ನು ಹೊರಗಿಟ್ಟು ಮುಂದುವರೆದ ದಡ್ಡ ಶ್ರೀಮಂತನನ್ನು ಅಪ್ಪಿಕೊಂಡು ಮಾತನಾಡಬಾರದು. ದಡ್ಡ ಶ್ರೀಮಂತಿಕೆ ದೇಶಕ್ಕೆ ದೊಡ್ಡ ಆಪತ್ತು. ಜಾಣ ಬಡತನ ಜನಕ್ಕೆ ಅನ್ನದ ತುತ್ತು. ಈ ಸಂದರ್ಭದಲ್ಲಿ ಧರ್ಮದ ಎಲ್ಲೆಯಲ್ಲಿ ಆಳೆಯುವ, ಕೋಮುವಾದದ ಲೇಪನವನ್ನು ಮೀಸಲಾತಿಗೆ ಹಚ್ಚಿ ಅದರ ಮರೆಯಲ್ಲೂ ರಾಜಕೀಯ ಮಾಡುವ ಮತಾಂಧರ ಬಗ್ಗೆ ಸದಾ ಎಚ್ಚರವಾಗಿರಬೇಕಾದುದು ನಮ್ಮೆಲ್ಲರ ಆದ್ಯ ಕರ್ತವ್ಯ.

ಮೀಸಲಾತಿಯ ಫಲಾನುಭವಿಗಳಾಗುತ್ತಾರೆಯೇ ವಿನಾ ನಮ್ಮ ಹಳ್ಳಿಗಳಲ್ಲಿರುವ ಹನುಮಣ್ಣ, ದುರುಗಣ್ಣ, ಮಾರಣ್ಣನ ಮಕ್ಕಳಲ್ಲಿ ಅವರಿಗೆ ಜೀತವೇ ಮೀಸಲಾಗುತ್ತದೆ. ಹಣವಂತರು ಮಾತ್ರ ಶಿಕ್ಷಣವನ್ನು, ಉದ್ಯೋಗವನ್ನು ಪಡೆಯುವಂತಹ ಸ್ಥಿತಿ ದೇಶದಲ್ಲಿ ನಿರ್ಮಾಣ ವಾಗಿರುವಾಗ ಕೆನೆಪದರವನ್ನು ಮೀಸಲಾತಿಯಿಂದ ಹೊರಗಿಡದೆ ಹೋದರೆ ಹಿಂದುಳಿದ ವರ್ಗಗಳ ಬಡವರು ಬಡವರಾಗಿಯೇ ಉಳಿಯುತ್ತಾರೆ. ಇನ್ನು ೫೦ ವರ್ಷ ಮೀಸಲಾತಿಯನ್ನು ನೀಡಿದರೂ ಅದು ಅವರನ್ನು ತಲುಪುವುದಿಲ್ಲ (ಕಾರಣಗಳನ್ನು ಮೇಲೆಯೇ ತಿಳಿಸಿದೆ). ಕೇವಲ ಒಂದು ಆಶ್ರಯ ಮನೆ, ಒಂದು ಪಡಿತರ ಚೀಟಿಗಷ್ಟೇ ಮೀಸಲಾಗುತ್ತಾರೆ. ಆ ಸಾಮಾನ್ಯ ಸತ್ಯ ನಮ್ಮ ದಲಿತ ನಾಯಕರಿಗೆ ತಿಳಿಯದೆ ಹೋದಲ್ಲಿ ತಾವಾಗಿಯೇ ಅವಕಾಶ ವಂಚಿತರನ್ನಾಗಿ ಮಾಡಿದಂತಾಗುತ್ತದೆ. ಉನ್ನತ ಶಿಕ್ಷಣದಲ್ಲಿ ಕೆನೆಪದರ ಜಾರಿಯಿಂದ ಹಿಂದುಳಿದ ವರ್ಗಗಳ ಸೀಟುಗಳು ಭರ್ತಿಯಾಗದೆ ಇದ್ದರೆ ಸರ್ಕಾರವೇ ಕಾಲೇಜುಗಳನ್ನು ತೆರೆಯಲಿ. ಆರ್ಥಿಕ ಸಂಕಷ್ಟ ಅನುಭವಿಸುತ್ತಿರುವವರಿಗೆ ಉಚಿತ ಶಿಕ್ಷಣ ನೀಡಲಿ.

ಸರ್ಕಾರ ಪ್ರಾಮಾಣಿಕವಾಗಿ, ಆರ್ಥಿಕವಾಗಿ ಹಿಂದುಳಿದವರ ಪೂರ್ಣ ಸಮೀಕ್ಷೆ ನಡೆಸಿದೆ. ಆದರೆ ಮೀಸಲಾತಿಯ ಬಗ್ಗೆ ಪೂರ್ಣ ಅಂಕಿ-ಅಂಶವಿಲ್ಲದೆ ನೀತಿ ರೂಪಿಸುತ್ತಿದೆ.

ಧರ್ಮ ಮತ್ತು ಜಾತಿಯ ಆಧಾರದ ಮೇಲೆ ಜಾತಿಯ ರಾಜಕಾರಣ ಮಾಡುವ ಈ ದೇಶದ ರಾಜಕೀಯ ವ್ಯವಸ್ಥೆ ಮತ ಬ್ಯಾಂಕ್ ಭರ್ತಿ ಮಾಡಿಕೊಳ್ಳಲು ಉನ್ನತ ಶಿಕ್ಷಣದಲ್ಲಿ ಮೀಸಲಾತಿ, ಖಾಸಗಿ ವಲಯದಲ್ಲಿ ಮೀಸಲಾತಿ, ಬಡ್ತಿ ಮೀಸಲಾತಿ ಹೀಗೆ ಹಲವು ಕೋಟಾಗಳನ್ನು ಕೊಡುವ ರಾಜಕೀಯ ಕಸರತ್ತಿಗೆ ಸುಪ್ರೀಂ ಕೋರ್ಟ್ ಹಠಾತ್ ಬ್ರೇಕ್ ಹಾಕಿದೆ. ಇದರಿಂದ ರಾಜಕೀಯ ವಲಯದಲ್ಲಿ ತಳಮಳ ಉಂಟುಮಾಡಿದೆ. ಈ ಕಾರಣದಿಂದಾಗಿ ರಾಜಕೀಯ ನಾಯಕರು ಅನಗತ್ಯವಾದ ಅವೈಜ್ಞಾನಿಕವಾದ ಪರಿಸ್ಥಿತಿಯನ್ನು ಮೀಸಲಾತಿ ವಲಯದಲ್ಲಿ ಸೃಷ್ಟಿ ಮಾಡುತ್ತಾ ಇದ್ದಾರೆ. ಇದಕ್ಕೆ ದಲಿತ ಮುಖಂಡರು ಅಸ್ತ್ರವಾಗುತ್ತಿದ್ದಾರೆ. ಹಿಂದುಳಿದವರು ಬಲಿಪಶುಗಳಾಗುತ್ತಿದ್ದಾರೆ.

ದೇಶದಾದ್ಯಂತ ನಡೆಯುತ್ತಿರುವ ಮೀಸಲಾತಿ ವಿರೋಧದ ಹೋರಾಟ ಮತ್ತು ಕೆನೆಪದರದ ಪರವಾದ ಮಾತುಗಳು ಕೇಳಿಬರುತ್ತಿರುವುದು ಅಸಂವಿಧಾನಾತ್ಮಕ ವಾದುದೇ. ಉನ್ನತ ಶಿಕ್ಷಣ ಪಡೆದವರೂ ಕೂಡ ಇಂಥ ಕಾರ್ಯದಲ್ಲಿ ತೊಡಗಿಸಿ ಕೊಂಡಿರುವುದನ್ನು ಗಮನಿಸಿದರೆ ಸಂವಿಧಾನದಲ್ಲಿ ನಂಬಿಕೆಯನ್ನು ಕಳಕೊಂಡಿರುವುದು ವ್ಯಕ್ತವಾಗುತ್ತದೆ.

ಮೀಸಲಾತಿ ಕೆನೆಪದರದ ಏನೇ ಮಾತನಾಡಲಿ ಎಲ್ಲೇ ಮಾತನಾಡಲಿ, ಹಿಂದುಳಿದ ಜಾಣ ಬಡವನನ್ನು ಹೊರಗಿಟ್ಟು ಮುಂದುವರೆದ ದಡ್ಡ ಶ್ರೀಮಂತನನ್ನು ಅಪ್ಪಿಕೊಂಡು ಮಾತನಾಡಬಾರದು. ದಡ್ಡ ಶ್ರೀಮಂತಿಕೆ ದೇಶಕ್ಕೆ ದೊಡ್ಡ ಆಪತ್ತು. ಜಾಣ ಬಡತನ ಜನಕ್ಕೆ ಅನ್ನದ ತುತ್ತು.

ಈ ಸಂದರ್ಭದಲ್ಲಿ ಧರ್ಮದ ಎಲ್ಲೆಯಲ್ಲಿ ಅಳೆಯುವ, ಕೋಮುವಾದದ ಲೇಪನವನ್ನು ಮೀಸಲಾತಿಗೆ ಹಚ್ಚಿ ಅದರ ಮರೆಯಲ್ಲೂ ರಾಜಕೀಯ ಮಾಡುವ ಮತಾಂಧರ ಬಗ್ಗೆ ಸದಾ ಎಚ್ಚರವಾಗಿರಬೇಕಾದುದು ನಮ್ಮೆಲ್ಲರ ಆದ್ಯ ಕರ್ತವ್ಯ.

ಚರ್ಮವನ್ನು ಹದ ಮಾಡುವ ಒಂದು ಜನಾಂಗ ಜೀವನ ಪರ್ಯಂತ ಸಮಾಜದ ಮುಖ್ಯವಾಹಿನಿಯಿಂದ ದೂರ ಉಳಿದಿದೆ. ಅವರನ್ನು ಕೆನೆಪದರದಿಂದ ಹೊರಗಿಡ ಬಾರದೆಂಬ ಅರ್ಜಿ ವಿಚಾರಿಸಿದ ಸುಪ್ರೀಂ ಕೋರ್ಟ್ ಪುನರುಚ್ಚಾರ ಮಾಡಿದೆ. ''ಯಾವುದೇ ಕಾರಣಕ್ಕೂ ಕೆನೆಪದರವನ್ನು ಹೊರಗಿಡುವ ವಿಚಾರದಲ್ಲಿ ಯಾವ ಬದಲಾವಣೆ ಇಲ್ಲ'' ಎನ್ನುವುದು ಸ್ವಾಗತಾರ್ಹ.

ಈ ನಿಟ್ಟಿನಲ್ಲಿ, ಈ ವಿಷಯದಲ್ಲಿ ಸರ್ಕಾರಗಳು, ಸರ್ಕಾರದ ರಥದ ಕುದುರೆಗಳು (ಅಧಿಕಾರಿ ವರ್ಗ), ಸಾರ್ವಜನಿಕರು ಪ್ರಾಮಾಣಿಕವಾಗಿ ಪ್ರಯತ್ನಪಟ್ಟರೆ ಮಾತ್ರ ಮೀಸಲಾತಿಯಿಂದ ಫಲಾನುಭವಿಗಳನ್ನು ಅಭಿವೃದ್ಧಿಯ ಪಥದಲ್ಲಿ ಸಾಗಿಸಲು ಸಾಧ್ಯವಾಗುತ್ತದೆ. ಇಲ್ಲವಾದಲ್ಲಿ ಗುಲಾಮಗಿರಿಯನ್ನು ಮುಂದಿನ ಪೀಳಿಗೆಗೆ ಬಳುವಳಿಯಾಗಿ ನೀಡಿದಂತಾಗುತ್ತದೆ.

**ಎಸ್. ಪಿ. ಮೂಲೆಮನೆ (ಷಣ್ಮುಖ ಸ್ವಾಮಿ)**
ಇಪ್ಪಾ, ಕುಕ್ಕುವಾಡ - ೫೭೭ ೫೨೫, ದಾವಣಗೆರೆ

## ಸಾದರ ಸ್ವೀಕಾರ

**ಹೊಸಗನ್ನಡ ಸ್ವಪ್ನವಾಸವದತ್ತ**
*ಅನು : ಪ್ರೊ॥ ಎಚ್. ಜಿ. ಸಣ್ಣಗುಡ್ಡಯ್ಯ*
**ಪುಟ :** *೯೨* **ಬೆಲೆ : ರೂ.** *೭೫*
ಅಕ್ಷಯ ಪ್ರಕಾಶನ, ೧ 'ಎ' ಕ್ರಾಸ್, ಸಿದ್ಧಗಂಗಾ ಬಡಾವಣೆ, ತುಮಕೂರು - ೫೭೨ ೧೦೨

**ಬದುಕಿಗಾಗಿ ಶಿಕ್ಷಣ**
*ಅರವಿಂದ ಚೊಕ್ಕಾಡಿ*
**ಪುಟ :** *೧೦೬* **ಬೆಲೆ : ರೂ.** *೪೦*
ಲೋಹಿಯಾ ಪ್ರಕಾಶನ, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

**ವೀರಶೈವಾಂಧ್ರ ವಾಙ್ಮಯ** *ಶಿಷ್ಟಾ ರಾಮಕೃಷ್ಣ ಶಾಸ್ತ್ರಿ*
*ಅನು : ಕಾರುಪಲ್ಲಿ ಜಾನಕೀರಾಮಯ್ಯ*
**ಪುಟ :** *೩೨೨* **ಬೆಲೆ : ರೂ.** *೨೦೦*
ಲಿಂಗಾಯತ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ಎಡೆಯೂರು ತೋಂಟದಾರ್ಯ ಸಂಸ್ಥಾನಮಠ, ಗದಗ

**ಅಂಬೇಡ್ಕರ್** *ಜಿ. ಎಂ. ಕೃಷ್ಣಮೂರ್ತಿ*
**ಪುಟ :** *೩೬೫* **ಬೆಲೆ : ರೂ.** *೧೨೫*

**ಅನ್‌ಟು ದಿಸ್ ಲಾಸ್ಟ್** *ಜಾನ್ ರಸ್ಕಿನ್*
*ಭಾವಾನುವಾದ : ಜಿ. ಎಂ. ಕೃಷ್ಣಮೂರ್ತಿ*
**ಪುಟ :** *೧೮೩* **ಬೆಲೆ : ರೂ.** *೭೫*

**ಭೂಮಿಗಾಥೆ** *ಡಾ॥ ವಸುಂಧರಾ ಭೂಪತಿ*
**ಪುಟ :** *೧೭೨* **ಬೆಲೆ : ರೂ.** *೬೦*

**ಭಾರತದ ಸಂವಿಧಾನ** (ಒಂದು ಪಕ್ಷಿನೋಟ)
*ನೇ. ತಿ. ಸೋಮಶೇಖರ್*
**ಪುಟ :** *೨೫೨* **ಬೆಲೆ : ರೂ.** *೨೦೦*

**ಭಾಷಣ ಕಲೆ** *ಜಿ. ಎಂ. ಕೃಷ್ಣಮೂರ್ತಿ*
**ಪುಟ :** *೧೪೪* **ಬೆಲೆ : ರೂ.** *೬೦*
ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ಕಾಮಧೇನು,** ೬, ನಾಗಪ್ಪ ಸ್ಟ್ರೀಟ್, ಶೇಷಾದ್ರಿಪುರ, ಬೆಂಗಳೂರು - ೫೬೦ ೦೨೦

**ಉತ್ತಮ ಮಾತುಗಾರರು ನೀವಾಗಿ** *ಡಾ॥ ಪಿ. ಎಸ್. ಗೀತಾ*
**ಪುಟ :** *೧೨೦* **ಬೆಲೆ : ರೂ.** *೪೦*

**ಆತ್ಮವಿಶ್ವಾಸ ವೃದ್ಧಿಸಿಕೊಳ್ಳುವುದು ಹೇಗೆ ?**
*ಅರವಿಂದ ಚೊಕ್ಕಾಡಿ*
**ಪುಟ :** *೧೩೬* **ಬೆಲೆ : ರೂ.** *೪೦*

**ಪತಂಜಲಿ ಯೋಗಸೂತ್ರಗಳು ಮತ್ತು ವ್ಯಕ್ತಿತ್ವ ವಿಕಾಸ**
*ಡಾ॥ ಎಸ್. ಎನ್. ಓಂಕಾರ್*
**ಪುಟ :** *೧೦೪* **ಬೆಲೆ : ರೂ.** *೪೦*

**ಹಣಕಾಸು ನಿರ್ವಹಣೆ ಹೇಗೆ ?** *ಬಿ. ಆರ್. ರವೀಂದ್ರನಾಥ್*
**ಪುಟ :** *೧೧೨* **ಬೆಲೆ : ರೂ.** *೪೦*

**ಲೈಂಗಿಕ ಆರೋಗ್ಯ ಮತ್ತು ವ್ಯಕ್ತಿತ್ವ ವಿಕಾಸ**
*ಡಾ॥ ವಿನೋದ ಛೆಬ್ಬಿ*
**ಪುಟ :** *೧೦೮* **ಬೆಲೆ : ರೂ.** *೪೦*

**ವ್ಯಕ್ತಿತ್ವ ವಿಕಸನ ಮತ್ತು ಕಾನೂನು** *ಡಾ॥ ಗೀತಾ ಕೃಷ್ಣಮೂರ್ತಿ*
**ಪುಟ :** *೧೦೪* **ಬೆಲೆ : ರೂ.** *೪೦*

**ನಗುವಿನಿಂದ ಆರೋಗ್ಯವೃದ್ಧಿ** *ಎನ್. ಗೋಪಾಲಕೃಷ್ಣ*
**ಪುಟ :** *೧೨೦* **ಬೆಲೆ : ರೂ.** *೪೦*

**ಕೌಟುಂಬಿಕ ಸಾಮರಸ್ಯ ಸಾಧಿಸಿ** *ಡಾ॥ ಜಾನಕಿ ಸುಂದರೇಶ್*
**ಪುಟ :** *೧೨೦* **ಬೆಲೆ : ರೂ.** *೪೦*

**ಸಂದರ್ಶನ - ವ್ಯಕ್ತಿತ್ವದ ಸಮಗ್ರ ದರ್ಶನ** *ಬೇದ್ರೆ ಮಂಜುನಾಥ*
**ಪುಟ :** *೧೨೮* **ಬೆಲೆ : ರೂ.** *೪೦*

**ಲೇಖನ ಕಲೆಯನ್ನು ವೃದ್ಧಿಪಡಿಸಿಕೊಳ್ಳುವುದು ಹೇಗೆ ?**
*ವೈ. ಜಿ. ಮುರಳೀಧರ*
**ಪುಟ :** *೧೦೪* **ಬೆಲೆ : ರೂ.** *೪೦*

**ಪರಿಪೂರ್ಣ ವ್ಯಕ್ತಿತ್ವ** *ಡಾ॥ ಕೆ. ಆರ್. ಶ್ರೀಧರ್, ವಿಜಯಾ ಶ್ರೀಧರ್, ಡಾ॥ ಕೆ. ಎಸ್. ಚೈತ್ರ, ಡಾ॥ ಕೆ. ಎಸ್. ಪವಿತ್ರ, ಡಾ॥ ಕೆ. ಎಸ್. ಶುಭ್ರತ*
**ಪುಟ :** *೧೧೨* **ಬೆಲೆ : ರೂ.** *೪೦*

**ಸೌಂದರ್ಯವರ್ಧಕಗಳು ಏಕೆ ಬೇಕು !**
*ಡಾ॥ ವಸುಂಧರಾ ಭೂಪತಿ*
**ಪುಟ :** *೧೦೪* **ಬೆಲೆ : ರೂ.** *೪೦*

**ಆಟವೇ ಪಾಠವಾಗುವುದು ಹೇಗೆ ?**
*ಡಾ॥ ಕಿಕ್ಕೇರಿ ವೀರನಾರಾಯಣ*
**ಪುಟ :** *೧೨೦* **ಬೆಲೆ : ರೂ.** *೪೦*
ವ್ಯಕ್ತಿ ವಿಕಸನ ಮಾಲೆಯ ಮೇಲಿನ ಹದಿಮೂರು ಪುಸ್ತಕಗಳ ಪ್ರಕಾಶಕರು
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ., ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

# ಸಾಮಾಜಿಕ ನ್ಯಾಯ ಮತ್ತು ಸರ್ವೋಚ್ಚ ನ್ಯಾಯಾಲಯ

## ಸಂವಿಧಾನದ ಒಂಬತ್ತನೇ ಅನುಸೂಚಿಯ ಬಗ್ಗೆ ತೀರ್ಪು ಕುರಿತು ಒಂದು ವಿಮರ್ಶೆ

ಮುರಳೀಧರ್



ಭಾರತದ ಸಂವಿಧಾನದ ಪ್ರಸ್ತಾವನೆಯಲ್ಲಿ ಭಾರತದ ಪ್ರಜೆಗಳಾದ ನಾವು ಈ ದೇಶವನ್ನು ಒಂದು ಸಾರ್ವಭೌಮ, ಸಮಾಜವಾದಿ, ಧರ್ಮನಿರಪೇಕ್ಷ, ಪ್ರಜಾಸತ್ತಾತ್ಮಕ ಗಣರಾಜ್ಯವಾಗಿ ರಚಿಸಲು ಮತ್ತು ಅದರ ಸಮಸ್ತ ನಾಗರಿಕರಿಗೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ, ವಿಚಾರ ಅಭಿವ್ಯಕ್ತಿ, ವಿಶ್ವಾಸ, ಧರ್ಮಶ್ರದ್ಧೆ ಮತ್ತು ಉಪಾಸನಾ ಸ್ವಾತಂತ್ರ್ಯ; ಸ್ಥಾನಮಾನ ಹಾಗೂ ಅವಕಾಶ ಸಮಾನತೆ ದೊರೆಯುವಂತೆ ಮಾಡಲು ಮತ್ತು ವ್ಯಕ್ತಿ ಗೌರವವನ್ನು, ರಾಷ್ಟ್ರದ ಏಕತೆಯನ್ನು ಹಾಗೂ ಅಖಂಡತೆಯನ್ನು ಸುನಿಶ್ಚಿತಗೊಳಿಸಿ ಅವರಲ್ಲಿ ಭ್ರಾತೃ ಭಾವನೆಯನ್ನು ವೃದ್ಧಿಗೊಳಿಸಲು ಶ್ರದ್ಧಾಪೂರ್ವಕ ಸಂಕಲ್ಪ ಮಾಡಿದವರಾಗಿ ಈ ಸಂವಿಧಾನವನ್ನು ಅಂಗೀಕರಿಸಿ, ಅಧಿನಿಯಮಿಸಿ ಅರ್ಪಿಸಿ ಕೊಂಡಿದ್ದೇವೆಂದು ಘೋಷಿಸಲಾಗಿದೆ. ಅಂದರೆ ಸಂವಿಧಾನ ಪ್ರಜೆಗಳಿಂದ, ಪ್ರಜೆಗಳಿಗಾಗಿ ಮತ್ತು ಪ್ರಜೆಗಳಿಗೋಸ್ಕರ ಸೃಷ್ಟಿಯಾದಂತಹದು. ಹಾಗಾಗಿ ಸಂವಿಧಾನವನ್ನು ಜನತೆಯ ಆಶಯಗಳ ಮತ್ತು ಸಂಕಲ್ಪಗಳ ಪ್ರತೀಕವೆಂದು ವ್ಯಾಖ್ಯಾನಿಸಲಾಗಿದೆ. ಈ ಕಾರಣದಿಂದಲೇ ಸರ್ವೋಚ್ಚ ನ್ಯಾಯಾಲಯ ಸಂವಿಧಾನದ ಯಾವುದೇ ಅನುಚ್ಛೇದವನ್ನು ಅರ್ಥೈಸುವಲ್ಲಿ ಉದ್ಭವಿಸಬಹುದಾದ ಸಂದೇಹವನ್ನು ಪ್ರಸ್ತಾವನೆಯ ಆಶಯ ಮತ್ತು ಸಂಕಲ್ಪಗಳ ಆಧಾರದ ಮೇಲೆ ಪರಿಹರಿಸಬೇಕೆಂದು ತೀರ್ಪಿತ್ತಿದೆ. ಅಂದರೆ, ಪ್ರಸ್ತಾವನೆ ಸಂವಿಧಾನದ ಒಟ್ಟುಗುರಿಯನ್ನು ಗೊತ್ತುಪಡಿಸುವ ಸಲಕರಣೆಯಾಗಿದೆ.

**ಸಂವಿಧಾನ - ಪ್ರಜೆಗಳಿಂದ, ಪ್ರಜೆಗಳಿಗಾಗಿ ಮತ್ತು ಪ್ರಜೆಗಳಿಗೋಸ್ಕರ**

ಪ್ರಜೆಗಳು ತಮಗೆ ತಾವೇ ಕೊಟ್ಟುಕೊಂಡಿರುವ ಸಂವಿಧಾನ ಒಂದು ಜಡ ದಾಖಲೆಯೆಂದು ತಿಳಿಯುವುದು ತಪ್ಪಾಗುತ್ತದೆ. ಪ್ರಜಾತಂತ್ರದ ವ್ಯವಸ್ಥೆಯಲ್ಲಿ ಪ್ರಜೆಗಳು ಬದಲಾವಣೆ ಬಯಸಿದರೆ ಅದಕ್ಕನುಗುಣವಾಗಿ ಸಂವಿಧಾನ ಬದಲಾಗಬೇಕು. ಜನತೆ ಮೂಲಭೂತ ಬದಲಾವಣೆ ಬಯಸಿದರೆ, ಸಂವಿಧಾನ ಅದಕ್ಕನುಗುಣವಾಗಿ ಮೂಲಭೂತ ಬದಲಾವಣೆ ಹೊಂದಬೇಕು. ಹಾಗಾಗದೆ ಸಂವಿಧಾನದ ಮೂಲ ಲಕ್ಷಣಗಳ ಚೌಕಟ್ಟಿನಲ್ಲಿ ಜನತೆಯ ಆಶೋತ್ತರಗಳು ವ್ಯಕ್ತವಾಗಬೇಕೆಂದರೆ, ಸಂವಿಧಾನ ಪ್ರಜೆಗಳಿಂದ, ಪ್ರಜೆಗಳಿಗಾಗಿ ಮತ್ತು ಪ್ರಜೆಗಳಿಗೋಸ್ಕರ ಅಲ್ಲ ಎಂಬರ್ಥ ಬರುತ್ತದೆ. ಸಂವಿಧಾನ ಹರಿಯುವ ನದಿಯಾಗಬೇಕೇ ಹೊರತು ನಿಂತ ನೀರಾಗಕೂಡದು.

**ಮೂಲಭೂತ ಹಕ್ಕುಗಳು ಮತ್ತು ಸಾಮಾಜಿಕ ನ್ಯಾಯ**

ಸಂವಿಧಾನದ ಪ್ರಸ್ತಾವನೆಯ ಆಶಯಗಳಾದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ, ಸ್ಥಾನಮಾನ, ಅವಕಾಶ ಸಮಾನತೆ ಇತ್ಯಾದಿಗಳಿಗೆ ಜೀವ ತುಂಬುವುದು ಸಂವಿಧಾನದ ಭಾಗ - ೩ರಲ್ಲಿರುವ ಮೂಲಭೂತ ಹಕ್ಕುಗಳು ಮತ್ತು ಭಾಗ - ೪ರಲ್ಲಿರುವ ರಾಜ್ಯ ನೀತಿಯ ನಿರ್ದೇಶಕ ತತ್ವಗಳು. ಪ್ರಜೆಗಳ ಮೂಲಭೂತ ಹಕ್ಕುಗಳನ್ನು ಸಂರಕ್ಷಿಸುವ ಮತ್ತು ರಾಜ್ಯನೀತಿಯ ನಿರ್ದೇಶಕ ತತ್ವಗಳನ್ನು ಸಾಕಾರಗೊಳಿಸುವ ಜವಾಬ್ದಾರಿ ರಾಜ್ಯ ವ್ಯವಸ್ಥೆಯದ್ದು. ಮೂಲಭೂತ ಹಕ್ಕುಗಳು ಉಲ್ಲಂಘನೆಯಾದಲ್ಲಿ ನ್ಯಾಯಾಲಯಗಳಲ್ಲಿ ಪ್ರಶ್ನಿಸಬಹುದು. ಆದರೆ ರಾಜ್ಯನೀತಿ ನಿರ್ದೇಶಕ ತತ್ವಗಳ ಜಾರಿಗಾಗಿ ನ್ಯಾಯಾಲಯಕ್ಕೆ ಹೋಗುವ ಅವಕಾಶವಿಲ್ಲ. ಹಾಗೆಂದ ಮಾತ್ರಕ್ಕೆ ರಾಜ್ಯನೀತಿಯ ನಿರ್ದೇಶಕ ತತ್ವಗಳನ್ನು ರಾಜ್ಯವ್ಯವಸ್ಥೆ ಜಾರಿಗೊಳಿಸಲು ಅಥವಾ ಗೊಳಿಸದಿರಲು ಆಯ್ಕೆಯಿದೆಯೆಂಬ ಅರ್ಥವಲ್ಲ. ರಾಜ್ಯವ್ಯವಸ್ಥೆ ಸಂವಿಧಾನದ ಭಾಗ - ೪ರಲ್ಲಿರುವ ರಾಜ್ಯನೀತಿ ನಿರ್ದೇಶನಗಳನ್ನು ಜಾರಿಗೊಳಿಸಬೇಕಾದ ಜವಾಬ್ದಾರಿ ಹೊಂದಿದೆ. ಸರ್ವೋಚ್ಚ ನ್ಯಾಯಾಲಯ ತನ್ನ ಮೊದಲಿನ ತೀರ್ಮಾನಗಳಲ್ಲಿ ರಾಜ್ಯನೀತಿ ನಿರ್ದೇಶಕ ತತ್ವಗಳಿಗೆ ಅಂತಹ ಮಹತ್ವ ಕೊಡದಿದ್ದರೂ, ನಂತರ ಕೊಟ್ಟ ಕೇಶವಾನಂದ ಭಾರತಿ ಪ್ರಕರಣ (ಎ. ಐ. ಆರ್. ೧೯೭೩, ಪುಟ ೧೪೬೧) ಮತ್ತು ನಂತರದ ಪ್ರಕರಣಗಳಲ್ಲಿ ಇವುಗಳಿಗೆ ಮೂಲಭೂತ ಹಕ್ಕುಗಳಷ್ಟೇ ಪ್ರಾಶಸ್ತ್ಯವಿದೆಯೆಂದು ತೀರ್ಪಿತ್ತಿದೆ. ಸಾಮಾಜಿಕ ನ್ಯಾಯ ಮತ್ತು ಕಲ್ಯಾಣಕಾರಿ ವ್ಯವಸ್ಥೆಯ ಸಾಕಾರಕ್ಕೆ ರಾಜ್ಯನೀತಿ ನಿರ್ದೇಶಕ ತತ್ವಗಳು ಪೂರಕವಾದವೆಂದು ತಿಳಿಸುತ್ತಾ ಇದಕ್ಕಾಗಿ ಮೂಲಭೂತ ಹಕ್ಕುಗಳನ್ನು ಮೊಟಕುಮಾಡುವ ಅಧಿಕಾರ ಪಾರ್ಲಿಮೆಂಟ್‌ಗಿದೆಯೆಂದು ನಿರ್ದೇಶಕ ತತ್ವಗಳ ಸಾಮೂಹಿಕ ನ್ಯಾಯದ ಹಿರಿಮೆಯನ್ನು ಸರ್ವೋಚ್ಚ ನ್ಯಾಯಾಲಯ ಎತ್ತಿಹಿಡಿದಿದೆ. ಸ್ವಾಮಿ ಕೇಶವಾನಂದ ಭಾರತಿ ಪ್ರಕರಣದಲ್ಲಿ ನ್ಯಾಯಮೂರ್ತಿ ಮ್ಯಾಥ್ಯೂ ಅವರು ರಾಜ್ಯನೀತಿ ನಿರ್ದೇಶಕ ತತ್ವಗಳ ಬಗ್ಗೆ ಎಲ್ಲಿಯವರೆಗೆ ವಿಶ್ಲೇಷಿಸಿದರೆಂದರೆ, ''ಒಂದು ಸಮಾಜ ವ್ಯವಸ್ಥೆಯನ್ನು ಸರಿಯಾಗಿ ನಿರ್ಮಾಣ ಮಾಡಬೇಕಾದಲ್ಲಿ ಮೂಲಭೂತ ಹಕ್ಕುಗಳನ್ನು ರಾಜ್ಯನೀತಿ ನಿರ್ದೇಶಕ ತತ್ವಗಳಿಗೆ ಅಡಿಯಾಳಾಗಿಸಬೇಕು; ಆರ್ಥಿಕ ಗುರಿಗಳು ಸೈದ್ಧಾಂತಿಕತೆಗಿಂತ ಪ್ರಮುಖವಾಗುತ್ತವೆ; ಬದುಕಿದ್ದರೆ ಮಾತ್ರ ಶ್ರೇಷ್ಠತೆಯನ್ನು ಬಯಸಬಹುದು. ಮನುಷ್ಯನು ಬದುಕಿದ್ದರೆ ಮಾತ್ರ ಮೂಲಭೂತ ಹಕ್ಕುಗಳಿಗೆ ಬೆಲೆ'' ಎಂದು ಅಭಿಪ್ರಾಯಪಟ್ಟರು.

ರಾಜ್ಯ ವ್ಯವಸ್ಥೆ ಸಾಮಾಜಿಕ ನ್ಯಾಯದ ದೃಷ್ಟಿಯಿಂದ ತಂದಂತಹ ಕಾನೂನುಗಳನ್ನು ಅಸಮಾನತೆಯನ್ನು ತೊಡೆದುಹಾಕಲು ರಚಿಸಿದಂತಹ ಕಾನೂನುಗಳನ್ನು, ಸಮಾಜದ ಸಂಪತ್ತು ಸಮಾನವಾಗಿ ಹಂಚಿಕೆಯಾಗಬೇಕೆಂದು ತಂದಂತಹ ಕಾನೂನುಗಳನ್ನು ರಾಜ್ಯನೀತಿ ನಿರ್ದೇಶಕ ತತ್ವಗಳ ಆಧಾರದಲ್ಲಿ ನ್ಯಾಯಾಲಯಗಳು ಪರಿಶೀಲಿಸಬೇಕೆಂದು ಮತ್ತು ಅವುಗಳ ಸಿಂಧುತ್ವವನ್ನು ಎತ್ತಿಹಿಡಿಯಬೇಕೆಂದು ಸರ್ವೋಚ್ಚ ನ್ಯಾಯಾಲಯ ಲಿಂಗಪ್ಪ-ವಿರುದ್ಧ-ಮಹಾರಾಷ್ಟ್ರ ಸರ್ಕಾರ

ಪ್ರಕರಣದಲ್ಲಿ (ಎ.ಐ.ಆರ್. ೧೯೮೩, ಪುಟ ೩೮೯) ತೀರ್ಪಿತ್ತಿದೆ. ಈ ನಿಟ್ಟಿನಲ್ಲಿ ಸರ್ವೋಚ್ಚ ನ್ಯಾಯಾಲಯ ರಾಜ್ಯನೀತಿ ನಿರ್ದೇಶಕ ತತ್ವಗಳ ಜಾರಿಗಾಗಿ ಆದೇಶಗಳನ್ನು ನೀಡಿದ ಪ್ರಕರಣಗಳಿವೆ.

**ಸಾಮಾಜಿಕ ನ್ಯಾಯ - ಸರ್ವಶ್ರೇಷ್ಠ ನ್ಯಾಯ**

ಸಾಮಾಜಿಕ ನ್ಯಾಯ ಎಂಬುದು ಬಹಳ ವಿಶಾಲವಾದ ಅರ್ಥವನ್ನು ಹೊಂದಿರುವಂತಹದ್ದು. ದೇಶದ ಬಡಜನತೆಗೆ ಅಗತ್ಯವಾದದ್ದು. ಸಾಮಾಜಿಕ ನ್ಯಾಯ ಮತ್ತು ಮೂಲಭೂತ ಹಕ್ಕುಗಳ ನಡುವೆ ಘರ್ಷಣೆಯ ಸಂದರ್ಭದಲ್ಲಿ ಸಾಮಾಜಿಕ ನ್ಯಾಯಕ್ಕೆ ಆದ್ಯತೆ ದೊರೆಯಬೇಕು. ಇದು ಸಂವಿಧಾನದ ಆಶಯ ಕೂಡ. ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರದಲ್ಲಿ ಸುಮಾರು ಶೇಕಡ ೫೦ರಷ್ಟು ಜನರು ಬಡತನದ ರೇಖೆಗಿಂತ ಕೆಳಗೆ ನರಳುತ್ತಿರುವ ಪರಿಸ್ಥಿತಿಯಲ್ಲಿ, ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆ ತುಂಬಿ ತುಳುಕುತ್ತಿರುವ ಸಮಾಜದಲ್ಲಿ ಸಾಮಾಜಿಕ ನ್ಯಾಯ ಸರ್ವಶ್ರೇಷ್ಠ ನ್ಯಾಯವಾಗಬೇಕು. ಇಲ್ಲದಿದ್ದಲ್ಲಿ ಸಮಾಜ ಅನಾಗರಿಕ ಮತ್ತು ಅಮಾನವೀಯತೆಯ ಬೀಡಾಗುತ್ತದೆ.

ಭಾರತ ಬ್ರಿಟಿಷ್ ಸಾಮ್ರಾಜ್ಯಶಾಹಿ ಸಂಕೋಲೆಗಳಿಂದ ಬಿಡುಗಡೆ ಹೊಂದಿದ ನಂತರ ದೇಶದ ಜನತೆ ಸಮಸಮಾಜದ ಆಶಯಗಳನ್ನು ಇರಿಸಿಕೊಂಡ ಸಂದರ್ಭದಲ್ಲಿ, ಅಂದಿನ ಸರ್ಕಾರ ಅನೇಕ ಸುಧಾರಣೆಗಳನ್ನು ತರಬೇಕಾದ ಒತ್ತಡದಲ್ಲಿತ್ತು. ಅತ್ಯಂತ ಶೋಷಣೆಗೊಳಗಾದ ರೈತವರ್ಗ ಭೂಸುಧಾರಣೆ ಬಯಸಿತ್ತು. ತೆಲಂಗಾಣ ರೈತ ಹೋರಾಟ, ಕಯ್ಯೂರು ಹೋರಾಟ ಮತ್ತಿತರ ರೈತರ ಪ್ರತಿಭಟನೆಗಳು ಭೂಹೀನ ರೈತರ ಮನಃಸ್ಥಿತಿಗೆ ಹಿಡಿದ ಕನ್ನಡಿಯಾಗಿತ್ತು. ಭೂಸುಧಾರಣೆಗೆ ಪೂರಕವಾದ ಕಾನೂನುಗಳನ್ನು ಜಾರಿಗೊಳಿಸುವುದು ಅನಿವಾರ್ಯವಾಗಿತ್ತು. ಈ ಹಿನ್ನೆಲೆಯಲ್ಲಿ ಬಿಹಾರ್ ಸರ್ಕಾರವು ಜಾರಿಗೆ ತಂದ ಭೂಸುಧಾರಣಾ ಕಾಯ್ದೆಯನ್ನು ಪಾಟ್ನ ಉಚ್ಚ ನ್ಯಾಯಾಲಯ ಸಂವಿಧಾನ ಬಾಹಿರವೆಂದು ಅನೂರ್ಜಿತಗೊಳಿಸಿತು (ಎ.ಐ.ಆರ್. ೧೯೫೧-ಪಾಟ್ನ, ಪುಟ ೯೧). ಆದರೆ ಅಲಹಾಬಾದ್ ಮತ್ತು ನಾಗಪುರದ ಉಚ್ಚ ನ್ಯಾಯಾಲಯಗಳು ಆ ರಾಜ್ಯಗಳು ಜಾರಿಗೆ ತಂದಿದ್ದ ಭೂಸುಧಾರಣಾ ಕಾಯ್ದೆಗಳು ಸಂವಿಧಾನಬದ್ಧವಾಗಿವೆಯೆಂದು ತೀರ್ಪಿತ್ತವು. ಹೀಗಾಗಿ ಭೂಸುಧಾರಣಾ ಕಾಯ್ದೆಗಳು ಹೊಸ ಗೊಂದಲ ಮತ್ತು ಅನಿಶ್ಚಿತತೆಯನ್ನುಂಟುಮಾಡಿದವು. ಒಂದು ಕಡೆ ರೈತರ ಆಶೋತ್ತರಗಳನ್ನು ಈಡೇರಿಸಬೇಕಾದ ಅಗತ್ಯತೆ, ಮತ್ತೊಂದು ಕಡೆ ಭೂಸುಧಾರಣಾ ಕಾಯ್ದೆಗಳ ಬಗ್ಗೆ ನ್ಯಾಯಾಲಯಗಳ ವಿವಿಧ ಬಗೆಯ ತೀರ್ಪುಗಳು ಪಾರ್ಲಿಮೆಂಟ್‌ಗೆ ಹೊಸ ಹಾದಿಯನ್ನು ಹಿಡಿಯಲು ಪ್ರೇರೇಪಿಸಿದವು. ಭೂಸುಧಾರಣಾ ಕಾಯ್ದೆಗಳಂತಹ ಜನಪರ ಶಾಸನಗಳು ನ್ಯಾಯಾಂಗದ ವಿಮರ್ಶೆಯ ವ್ಯಾಪ್ತಿಯಿಂದ ಹೊರತುಪಡಿಸಬೇಕಾದ ಸನ್ನಿವೇಶ ಶಾಸಕಾಂಗದ ಮುಂದೆ ನಿಂತಿತು. ಇದು ನ್ಯಾಯಾಂಗದ ಸಂವಿಧಾನಾತ್ಮಕ ಅಧಿಕಾರವನ್ನು ಸಂಕುಚಿತಗೊಳಿಸುವ ಪ್ರಯತ್ನವಾಗಿರಲಿಲ್ಲ; ಶಾಸಕಾಂಗ ತನ್ನ ಸಂವಿಧಾನಾತ್ಮಕ ಜವಾಬ್ದಾರಿಯನ್ನು ನಿರ್ವಹಿಸುವ ಪ್ರಯತ್ನವಾಗಿತ್ತು.

**ಸಾಮಾಜಿಕ ನ್ಯಾಯಕ್ಕಾಗಿ ಸಂವಿಧಾನದ ತಿದ್ದುಪಡಿ**

ನವೆಂಬರ್ ೧೯೪೯ರಲ್ಲಿ ಸಂವಿಧಾನದ ಅಳವಡಿಕೆಯಾದ ನಂತರದ ದಿನಗಳಲ್ಲಿ ಪಡೆದ ಅನುಭವದ ಆಧಾರದ ಮೇಲೆ ಶಾಸಕಾಂಗ ಸಂವಿಧಾನಕ್ಕೆ ಮೊದಲನೇ ತಿದ್ದುಪಡಿಯನ್ನು ೧೯೫೧ರಲ್ಲಿ ಮಾಡಿತು. ಹೊಸದಾಗಿ ಅನುಚ್ಛೇದ ೩೧-ಎ ಮತ್ತು ಅನುಚ್ಛೇದ ೩೧-ಬಿ ಸಂವಿಧಾನಕ್ಕೆ ಸೇರಿಸಲಾಯಿತು. ಈ ಲೇಖನದಲ್ಲಿ ಅನುಚ್ಛೇದ ೩೧-ಬಿ ಬಗ್ಗೆ ಹೆಚ್ಚು ಪ್ರಸ್ತಾಪ ಮಾಡಿರುವುದರಿಂದ ಮತ್ತು ಶಾಸಕಾಂಗ ಈ ತಿದ್ದುಪಡಿಯನ್ನು ಯಾವ ಉದ್ದೇಶ ಸಾಧನೆಗಾಗಿ ತಂದಿತೆಂದು ತಿಳಿಯಲು ಆ ಕುರಿತು ಇಲ್ಲಿ ಉದ್ಧರಿಸಲಾಗಿದೆ. ಒಂಬತ್ತನೇ ಅನುಸೂಚಿ ಆಗಲೇ ಹುಟ್ಟಿದ್ದು.

"**ಅನುಚ್ಛೇದ ೩೧-ಬಿ:** ಕೆಲವು ಅಧಿನಿಯಮಗಳನ್ನು ಮತ್ತು ರೆಗ್ಯುಲೇಷನ್‌ಗಳನ್ನು ಸಿಂಧುಗೊಳಿಸುವುದು :-

೩೧-ಎ ಅನುಚ್ಛೇದದಲ್ಲಿ ಅಡಕವಾಗಿರುವ ಉಪಬಂಧಗಳು ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ, ಒಂಬತ್ತನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಅಧಿನಿಯಮವು ಮತ್ತು ರೆಗ್ಯುಲೇಷನ್ ಅಥವಾ ಯಾವುದೇ ಉಪಬಂಧವು **ಈ ಭಾಗದ ಯಾವುದೇ ಉಪಬಂಧಗಳಿಂದ ಪ್ರದತ್ತವಾದ ಹಕ್ಕುಗಳಲ್ಲಿ ಯಾವುದಕ್ಕಾದರೂ ಅಸಂಗತವಾಗಿರುತ್ತದೆಂಬ ಅಥವಾ ಆ ಹಕ್ಕುಗಳಲ್ಲಿ ಯಾವುದನ್ನಾದರೂ ಕಸಿದುಕೊಳ್ಳುತ್ತದೆ ಎಂಬ ಅಥವಾ ಮೊಟಕುಗೊಳಿಸುತ್ತದೆ ಎಂಬ ಕಾರಣದ ಮೇಲೆ ಶೂನ್ಯವಾಗಿದ್ದುದಾಗಿ ಭಾವಿಸತಕ್ಕುದಲ್ಲ** ಮತ್ತು ಯಾವುದೇ ನ್ಯಾಯಾಲಯದ ಅಥವಾ ನ್ಯಾಯಾಧಿಕರಣದ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶವು ತದ್ವಿರುದ್ಧವಾಗಿ ಇದ್ದಾಗ್ಯೂ, ಆ ಪ್ರತಿಯೊಂದು ಅಧಿನಿಯಮವನ್ನು ಮತ್ತು ರೆಗ್ಯುಲೇಷನ್‌ಅನ್ನು ನಿರಸನಗೊಳಿಸುವುದಕ್ಕೆ ಅಥವಾ ತಿದ್ದುಪಡಿ ಮಾಡುವುದಕ್ಕೆ ಸಕ್ಷಮವಾದ ಯಾವುದೇ ವಿಧಾನ ಮಂಡಲದ ಅಧಿಕಾರಕ್ಕೆ ಒಳಪಟ್ಟು ಅವು ಜಾರಿಯಲ್ಲಿರುವುದು ಮುಂದುವರಿಯತಕ್ಕುದು." (ಒತ್ತು ಲೇಖಕರದ್ದು)

ಅನುಚ್ಛೇದ ೩೧-ಬಿಯನ್ನು ಸಂವಿಧಾನಕ್ಕೆ ಅಳವಡಿಸುವ ಪಾರ್ಲಿಮೆಂಟಿನ ಪ್ರಮುಖ ಉದ್ದೇಶವೆಂದರೆ ಒಂಬತ್ತನೇ ಅನುಸೂಚಿಗೆ ಸೇರಿಸಲ್ಪಡುವ ಕಾಯ್ದೆಗಳನ್ನು ಅವು ಮೂಲಭೂತ ಹಕ್ಕುಗಳನ್ನು ಮೊಟಕುಗೊಳಿಸುತ್ತವೆ ಅಥವಾ ಚ್ಯುತಿಗೊಳಿಸುತ್ತವೆ ಎಂಬ ಕಾರಣಕ್ಕಾಗಿ ಅಸಿಂಧುವೆಂದು ನ್ಯಾಯಾಲಯಗಳು ತೀರ್ಮಾನಿಸಕೂಡದೆಂಬುದು. ಅಂದರೆ ಸಾಮಾಜಿಕ ನ್ಯಾಯ ಒದಗಿಸಲು ರಚಿತವಾದ ಕಾನೂನುಗಳು ಮೂಲಭೂತ ಹಕ್ಕುಗಳಿಗಿಂತಲೂ ಪ್ರಮುಖವಾಗಬೇಕೆಂಬ ಶಾಸಕಾಂಗದ ಬಯಕೆಯನ್ನು ಭಾರತ ಸಮಾಜ ವ್ಯವಸ್ಥೆಯ ಮತ್ತು ಚರಿತ್ರೆಯ ಪರಿಜ್ಞಾನವಿರುವವರು ತಳ್ಳಿಹಾಕುವಂಥದ್ದಲ್ಲ.

**ಸಾಮಾಜಿಕ ನ್ಯಾಯಕ್ಕಾಗಿ ಮೂಲಭೂತ ಹಕ್ಕುಗಳ ಮೊಟಕು**

ಸಂವಿಧಾನದ ಮೊದಲನೇ ತಿದ್ದುಪಡಿಯ ಸಿಂಧುತ್ವವನ್ನು ಶಂಕರೀ ಪ್ರಸಾದ್ ಸಿಂಗ್ ಎಂಬ ಪ್ರಕರಣದಲ್ಲಿ (ಎ.ಐ.ಆರ್. ೧೯೫೧, ಪುಟ ೪೫೮) ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಲಾಗಿದ್ದಿತು. ಪಾರ್ಲಿಮೆಂಟ್‌ಗೆ ಸಂವಿಧಾನವನ್ನು ತಿದ್ದುಪಡಿಸುವ ಅಧಿಕಾರವಿದೆಯೇ ಎಂಬ ಪ್ರಶ್ನೆಯೂ ಎದ್ದಿತು. ಮೇಲ್ಕಂಡ ಪ್ರಕರಣದಲ್ಲಿ ಮತ್ತು ನಂತರ ಇತ್ಯರ್ಥವಾದ ಸಜ್ಜನ್ ಸಿಂಗ್ ಪ್ರಕರಣದಲ್ಲಿ (ಎ.ಐ.ಆರ್. ೧೯೬೫, ಪುಟ ೮೪೫) ಸಂವಿಧಾನಕ್ಕೆ ತಿದ್ದುಪಡಿ ಮಾಡುವ ಅಧಿಕಾರವನ್ನು ಎತ್ತಿಹಿಡಿಯಲಾಯಿತು. ಈ ಎರಡೂ ಪ್ರಕರಣಗಳಲ್ಲಿ ಮೂಲಭೂತ ಹಕ್ಕುಗಳನ್ನು ಸಂವಿಧಾನ ತಿದ್ದುಪಡಿಯ ಮೂಲಕ ಚ್ಯುತಿಗೊಳಿಸಲು ಶಾಸಕಾಂಗಕ್ಕಿಲ್ಲವೆಂಬ ವಾದವನ್ನು ಸರ್ವೋಚ್ಚ ನ್ಯಾಯಾಲಯ ಒಪ್ಪಲಿಲ್ಲ. ಆದರೆ ಇದೇ ಪ್ರಶ್ನೆ ಗೋಲಕನಾಥ ಪ್ರಕರಣದಲ್ಲಿ (ಎ.ಐ.ಆರ್. ೧೯೬೭, ಪುಟ ೧೬೪೩) ಮತ್ತೊಮ್ಮೆ ಸರ್ವೋಚ್ಚ ನ್ಯಾಯಾಲಯದ ಏಳು ನ್ಯಾಯಾಧೀಶರ ನ್ಯಾಯಪೀಠದ ಮುಂದೆ ಬಂದಾಗ ಪಾರ್ಲಿಮೆಂಟ್‌ಗೆ ಮೂಲಭೂತ ಹಕ್ಕುಗಳಿಗೆ ಮೊಟಕುಮಾಡುವ ಅಥವಾ ಚ್ಯುತಿಗೊಳಿಸುವ ಅಧಿಕಾರವಿಲ್ಲವೆಂದು ೪-೩ ಬಹುಮತದಿಂದ ತೀರ್ಮಾನಿಸಿತು. ಮೂವರು ನ್ಯಾಯಾಧೀಶರು ಮೂಲಭೂತ ಹಕ್ಕುಗಳಿಗೆ ತಿದ್ದುಪಡಿ ತರುವ ಅಧಿಕಾರ ಪಾರ್ಲಿಮೆಂಟ್‌ಗಿದೆ ಎಂದು ಅಭಿಪ್ರಾಯಪಟ್ಟರು.

ಗೋಲಕ್‌ನಾಥ್ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ಕೊಟ್ಟ ತೀರ್ಪು ಶಾಸಕಾಂಗ ಮತ್ತು ನ್ಯಾಯಾಂಗದ ನಡುವೆ ಸಂಘರ್ಷಕ್ಕೆ ಹಾದಿಮಾಡಿಕೊಟ್ಟಿತು. ೧೯೬೭ರಲ್ಲಿ ಲೋಕಸಭಾ ಸದಸ್ಯರಾಗಿದ್ದ ನಾಥ್ ಪೈ ಅವರು ಒಂದು ಖಾಸಗಿ ಮಸೂದೆಯನ್ನು ಪಾರ್ಲಿಮೆಂಟ್ ಮುಂದೆ ಮಂಡಿಸಿ, ಮೂಲಭೂತ ಹಕ್ಕುಗಳಿಗೆ ತಿದ್ದುಪಡಿ ತರುವ ಅಧಿಕಾರ ಶಾಸಕಾಂಗಕ್ಕಿದೆ ಎಂದು ವಾದಿಸಿದರು. ಆದರೆ ಈ ಮಸೂದೆ ಅಲ್ಲಿಗೇ ನಿಂತುಹೋಯಿತು. ನಂತರ ೧೯೭೧ರ ಸಾರ್ವತ್ರಿಕ ಚುನಾವಣೆಯಲ್ಲಿ ಭಾರಿ ಬಹುಮತದಿಂದ ಗೆದ್ದ ಇಂದಿರಾ ಗಾಂಧಿ ನೇತೃತ್ವದ ಕಾಂಗ್ರೆಸ್ ಪಕ್ಷ ೨೪ನೇ ಸಂವಿಧಾನ-ತಿದ್ದುಪಡಿ ತರುವ ಮೂಲಕ ಸಂವಿಧಾನದ ಯಾವುದೇ ಅನುಚ್ಛೇದವನ್ನು ತಿದ್ದುಪಡಿಸುವ ಅಧಿಕಾರವನ್ನು ಪಾರ್ಲಿಮೆಂಟ್‌ಗೆ ದಕ್ಕಿಸಿಕೊಂಡಿತು.

**ಕೇಶವಾನಂದ ಭಾರತಿ ಪ್ರಕರಣ - ಪಾರ್ಲಿಮೆಂಟ್‌ನ ಅಧಿಕಾರಕ್ಕೆ ಕಡಿವಾಣ**

ಸಂವಿಧಾನ ತಿದ್ದುಪಡಿ-೨೪ ಮತ್ತು ೨೫ಗಳ ಸಿಂಧುತ್ವವನ್ನು ಸ್ವಾಮಿ ಕೇಶವಾನಂದ ಭಾರತಿ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯದ ಮುಂದೆ ಪ್ರಶ್ನಿಸಲಾಯಿತು. ಹದಿಮೂರು ನ್ಯಾಯಾಧೀಶರನ್ನೊಳಗೊಂಡ ನ್ಯಾಯಪೀಠದ ಆರು ನ್ಯಾಯಾಧೀಶರು ಮೂಲಭೂತ ಹಕ್ಕುಗಳಿಗೆ ತಿದ್ದುಪಡಿ ತರುವ ಅಧಿಕಾರ ಪಾರ್ಲಿಮೆಂಟ್‌ಗಿದೆ ಎಂದು ತೀರ್ಮಾನಿಸಿದರೆ ಉಳಿದ ಏಳು ನ್ಯಾಯಾಧೀಶರು ಸಂವಿಧಾನದ 'ಮೂಲ ಲಕ್ಷಣ'ಗಳನ್ನು ಬದಲಾಯಿಸುವ ಅಧಿಕಾರ ಪಾರ್ಲಿಮೆಂಟ್‌ಗೆ ಇಲ್ಲವೆಂದು ೭-೬ ಬಹುಮತದಿಂದ ತೀರ್ಪಿತ್ತರು. ನ್ಯಾಯಮೂರ್ತಿ ಶ್ರೀ ಪಾಲೇಕರ್ ಅವರು ತಮ್ಮ ತೀರ್ಪಿನಲ್ಲಿ ಯಾವ ಕಾನೂನು ಸಂವಿಧಾನದ ಅನುಚ್ಛೇದ ೩೯-ಬಿ ಅಥವಾ ಸಿ ನ ತತ್ವಕ್ಕನುಸಾರವಾಗಿದೆಯೋ ಅಂತಹ ಕಾನೂನುಗಳನ್ನು ಮೂಲಭೂತ ಹಕ್ಕುಗಳ ಒರೆಗೆ ಹಚ್ಚಿ ಅನೂರ್ಜಿತಗೊಳಿಸಲಾಗದು ಎಂದು ಅಭಿಪ್ರಾಯಪಟ್ಟರು. ನ್ಯಾಯ ಮೂರ್ತಿ ಶ್ರೀ ಕೆ. ಎಸ್. ಹೆಗ್ಡೆ ಮತ್ತು ನ್ಯಾಯಮೂರ್ತಿ ಶ್ರೀ ಮುಖರ್ಜಿಯವರು ತಮ್ಮ ತೀರ್ಮಾನದಲ್ಲಿ ಸಂವಿಧಾನದಲ್ಲಿ ಇರುವ ಕಲ್ಯಾಣಕಾರಿ ವ್ಯವಸ್ಥೆಯ ಗುರಿಯಿಂದ ಹಿನ್ನಡೆಯಲು ಪಾರ್ಲಿಮೆಂಟ್‌ಗೆ ಅಧಿಕಾರವಿಲ್ಲವೆಂದು ಸಾರಿದರು. ಮುಖ್ಯ ನ್ಯಾಯಮೂರ್ತಿ ಶ್ರೀ ಸಿಕ್ರಿ ಅವರು ರಾಜ್ಯನೀತಿ ನಿರ್ದೇಶನ ತತ್ವಗಳ ಜಾರಿಗೋಸ್ಕರ ಶಾಸಕಾಂಗಕ್ಕೆ ಮೂಲಭೂತ ಹಕ್ಕುಗಳನ್ನು ಮಾರ್ಪಡಿಸುವ ಅಧಿಕಾರ ವಿದೆಯೆಂದು ಅಭಿಪ್ರಾಯ ವ್ಯಕ್ತಪಡಿಸಿದರು. ಏಳು ನ್ಯಾಯಮೂರ್ತಿಗಳು (ಬಹುಮತ) ಸಂವಿಧಾನದ ಮೂಲಲಕ್ಷಣಗಳಿಗೆ ತಿದ್ದುಪಡಿ ತರುವ ಅಧಿಕಾರ ಪಾರ್ಲಿಮೆಂಟ್‌ಗಿಲ್ಲವೆಂದು ತೀರ್ಪಿತ್ತಿತು. ಹಾಗೆಯೇ ನ್ಯಾಯಾಂಗದ ನ್ಯಾಯಿಕ ಪುನರ್ವಿಮರ್ಶೆಯ ಅಧಿಕಾರವನ್ನು ವಿಸ್ತರಿಸಿಕೊಂಡಿತು. ಅಲ್ಲಿಯವರೆಗೆ ಒಂಬತ್ತನೇ ಅನುಸೂಚಿಗೆ ಸೇರಿದ ಎಲ್ಲ ಕಾಯ್ದೆಗಳನ್ನು ಎತ್ತಿಹಿಡಿಯಿತು.

### ಮುಸುಕಿನ ಗುದ್ದಾಟ

ಶಾಸಕಾಂಗ ಮತ್ತು ನ್ಯಾಯಾಂಗದ ನಡುವಿನ ಮುಸುಕಿನ ಗುದ್ದಾಟ ನಡೆಯುತ್ತಲೇ ಬಂದಿದೆ. ೧೯೫೧ರಲ್ಲಿ ಅನುಚ್ಛೇದ ೩೧-ಬಿ ಯನ್ನು ಸಂವಿಧಾನದಲ್ಲಿ ಅಳವಡಿಸುವ ಉದ್ದೇಶ ಸ್ಪಷ್ಟವಾಗಿದ್ದರೂ, ಕೇಶವಾನಂದ ಭಾರತಿ ಪ್ರಕರಣದಲ್ಲಿ ಅದನ್ನು ಸರ್ವೋಚ್ಚ ನ್ಯಾಯಾಲಯ ಅಲ್ಪ ಬಹುಮತದಿಂದ ಅಳಕಗೊಳಿಸಿತು. ಒಂಬತ್ತನೇ ಅನುಸೂಚಿಯಲ್ಲಿ ಸೇರಿಸಲ್ಪಡುವ ಕಾಯ್ದೆಗಳನ್ನು ಮೂಲಭೂತ ಹಕ್ಕುಗಳ ಒರೆಗೆ ಹಚ್ಚಿ ಅಸಿಂಧುಗೊಳಿಸಲಾಗುವುದಿಲ್ಲ ಎಂಬುದು ಸ್ಪಷ್ಟವಾಗಿ ಅನುಚ್ಛೇದ ೩೧-ಬಿ ಯಲ್ಲಿದ್ದರೂ ಮೂಲಭೂತ ಹಕ್ಕುಗಳು ಮತ್ತು ನ್ಯಾಯಿಕ ಪುನರ್ವಿಮರ್ಶೆಯ ನ್ಯಾಯಾಂಗದ ಅಧಿಕಾರ ಮೂಲ ಲಕ್ಷಣಗಳೆಂದೂ ಮತ್ತು ಇವನ್ನು ತಿದ್ದುಪಡಿಸುವ ಅಧಿಕಾರ ಪಾರ್ಲಿಮೆಂಟ್‌ಗಿಲ್ಲವೆಂದೂ ತೀರ್ಪಿತ್ತು ಶಾಸಕಾಂಗದ ಅಧಿಕಾರಕ್ಕೆ ನ್ಯಾಯಾಂಗ ಕಡಿವಾಣ ಹಾಕಿತು. ಜೊತೆಗೇ ಸಂವಿಧಾನದ ರೂಪ ಹಾಗೂ ಗತಿಯನ್ನು ನಿರ್ಧರಿಸುವ ಮುಂದಿನ ಪೀಳಿಗೆಯ ಹಕ್ಕನ್ನು ಮಿತಿಗೊಳಿಸಿತು.

ಕೇಶವಾನಂದ ಭಾರತಿ ಪ್ರಕರಣದ ತೀರ್ಪು ಬರುವ ಹೊತ್ತಿಗೆ (೨೪ ಏಪ್ರಿಲ್ ೧೯೭೩) ಸುಮಾರು ಅರವತ್ತಾರು ಕಾಯ್ದೆಗಳು ಒಂಬತ್ತನೇ ಅನುಸೂಚಿಗೆ ಸೇರಿಸಲ್ಪಟ್ಟಿದ್ದವು. ಈ ಎಲ್ಲ ಸಂವಿಧಾನ ತಿದ್ದುಪಡಿಗಳು ಸಂವಿಧಾನಾತ್ಮಕವಾಗಿವೆಯೆಂದು ಎತ್ತಿಹಿಡಿದರೂ, ಒಂಬತ್ತನೇ ಅನುಸೂಚಿಗೆ ನಂತರದಲ್ಲಿ ಸೇರಿಸಲ್ಪಡುವ ಕಾಯ್ದೆಗಳ ಸಿಂಧುತ್ವವನ್ನು ಮತ್ತು ಅದಕ್ಕಾಗಿ ತರುವ ಸಂವಿಧಾನ ತಿದ್ದುಪಡಿಗಳನ್ನು ಮೂಲಭೂತ ಲಕ್ಷಣಗಳ ಒರೆಗೆ ಹಚ್ಚಬಹುದೆಂಬ ಅಭಿಪ್ರಾಯ ಮೂಡಿಸಿತು. ೧೯೮೧ರಲ್ಲಿ ಸರ್ವೋಚ್ಚ ನ್ಯಾಯಾಲಯ ವಾಮನರಾವ್ ಪ್ರಕರಣದಲ್ಲಿ ಕೇಶವಾನಂದ ಭಾರತಿ ಪ್ರಕರಣ ತೀರ್ಮಾನದ ನಂತರ ಸಂವಿಧಾಸ ತಿದ್ದುಪಡಿಗಳ ಮೂಲಕ ಒಂಬತ್ತನೇ ಅನುಸೂಚಿಗೆ ಸೇರಿಸಲ್ಪಟ್ಟಿರುವ ಎಲ್ಲ ಕಾಯ್ದೆಗಳೂ ಈ ಪರೀಕ್ಷೆಗೊಳಪಡುತ್ತವೆ ಎಂದು ತೀರ್ಪಿತ್ತಿತು.

### ಕರ್ವಾಲ್ಹೊ ಪ್ರಕರಣ - ಸಾಮಾಜಿಕ ನ್ಯಾಯಕ್ಕೆ ಹಿನ್ನಡೆ

ಬಾಲ್‌ಮಾಡೀಸ್ ಪ್ಲಾಂಟೇಶನ್ – ವಿರುದ್ಧ – ತಮಿಳುನಾಡು ಎಂಬ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ಗುಡಲೂರು ಜನ್ಮಂ ಎಸ್ಟೇಟ್ (ರದ್ದತಿ ಮತ್ತು ರಯತ್‌ವಾರಿಗೆ ಪರಿವರ್ತನೆ) ಕಾಯ್ದೆ ೧೯೬೯ನ್ನು ಅಸಿಂಧುವೆಂದು ತೀರ್ಪಿತ್ತಿತು. ಅದೇ ರೀತಿ ಪಶ್ಚಿಮ ಬಂಗಾಳ ಲೀಸ್ ಹೋಲ್ಡಿಂಗ್ ರೆವಿನ್ಯೂ ಕಾಯ್ದೆ ೧೯೭೯ ಕೂಡ ಅಸಿಂಧುವೆಂದು ನ್ಯಾಯಾಲಯ ತೀರ್ಪುಕೊಟ್ಟಿತು. ಈ ಎರಡೂ ಕಾಯ್ದೆಗಳನ್ನು ೩೪ನೇ ಮತ್ತು ೬೬ನೇ ಸಂವಿಧಾನ ತಿದ್ದುಪಡಿಗಳ ಮೂಲಕ ಒಂಬತ್ತನೇ ಅನುಸೂಚಿಗೆ ಸೇರಿಸಲಾಯಿತು. ಈ ಸೇರ್ಪಡೆಯ ಸಿಂಧುತ್ವದ ಪ್ರಶ್ನೆ ಸರ್ವೋಚ್ಚ ನ್ಯಾಯಾಲಯದ ಐದು ನ್ಯಾಯಮೂರ್ತಿಗಳ ನ್ಯಾಯಪೀಠದ ಮುಂದೆ ಬಂದಾಗ ೧೯೮೧ರ ವಾಮನರಾವ್ ಪ್ರಕರಣದ ತೀರ್ಪನ್ನು ಗಮನದಲ್ಲಿಟ್ಟುಕೊಂಡು ಒಂಬತ್ತು ನ್ಯಾಯಮೂರ್ತಿಗಳ ನ್ಯಾಯಪೀಠ ಇದನ್ನು ನಿರ್ಧರಿಸಬೇಕೆಂದು ಉಲ್ಲೇಖಿಸಲಾಯಿತು. ಈ ಪ್ರಕರಣವೇ (ಐ.ಆರ್. ಕರ್ವಾಲ್ಹೊ - ವಿರುದ್ಧ – ತಮಿಳುನಾಡು) ಜನವರಿ ೧೧, ೨೦೦೭ರಂದು ಒಂಬತ್ತು ನ್ಯಾಯಮೂರ್ತಿಗಳು ತೀರ್ಮಾನಿಸಿ ಹೊಸ ವಿವಾದದ ಅಲೆಯನ್ನು ಎಬ್ಬಿಸಿರುವುದು.

ಸರ್ವೋಚ್ಚ ನ್ಯಾಯಾಲಯ ವ್ಯಕ್ತಪಡಿಸಿರುವ ಕಾಳಜಿಯೆಂದರೆ ಪಾರ್ಲಿಮೆಂಟ್ ಅನುಚ್ಛೇದ ೩೧-ಬಿಯನ್ನು ಯಥೇಚ್ಛವಾಗಿ ಬಳಸಿ ೧೯೫೧ರಿಂದ ೧೯೫ರವರೆಗೆ ೨೮೪ ಕಾಯ್ದೆಗಳನ್ನು ಒಂಬತ್ತನೇ ಅನುಸೂಚಿಗೆ ಸೇರಿಸಿದೆ ಎಂದು. ಕೇಶವನಾನಂದ ಭಾರತಿ ಪ್ರಕರಣದ ನಂತರ ೨೧೮ ಕಾಯ್ದೆಗಳು ಒಂಬತ್ತನೇ ಅನುಸೂಚಿಗೆ ಸೇರಿಸಿರುವುದರ ಬಗ್ಗೆ ಹುಬ್ಬೇರಿಸಿದೆ. ಇದರಿಂದಾಗಿ ಪಾರ್ಲಿಮೆಂಟ್ ತನ್ನ ಮಿತಿಯನ್ನು ಏರಿಸಿಕೊಂಡಿರುವುದು ಸಂವಿಧಾನದ ಸೂಕ್ಷ್ಮ ಸಮತೋಲನಕ್ಕೆ ಹಾನಿಯಾಗಿದೆಯೆಂದು ಮತ್ತು ಈ ಎಲ್ಲ ಕಾನೂನುಗಳನ್ನು ನ್ಯಾಯಾಲಯದ ಪುನರ್ವಿಮರ್ಶೆಯ ವ್ಯಾಪ್ತಿಯಿಂದ ಹೊರಗಿಟ್ಟಿರುವುದು ಸಂವಿಧಾನದ ಮೂಲ ಲಕ್ಷಣಗಳ ಉಲ್ಲಂಘನೆಯೆಂದು ಅಭಿಪ್ರಾಯಪಟ್ಟಿದೆ. ಆದರೆ ಒಂಬತ್ತನೇ ಅನುಸೂಚಿಗೆ ಸೇರಿಸಲ್ಪಟ್ಟ ಕಾನೂನುಗಳನ್ನು ಸಾಮಾಜಿಕ ನ್ಯಾಯದ ಒರೆಗೆ ಹಚ್ಚುವ ಗೋಜಿಗೆ ಹೋಗಿಲ್ಲ. ಅಂತಹ ಪ್ರಯತ್ನ ಸಾಧ್ಯವೂ ಇರಲಿಲ್ಲ. ಹೀಗಾಗಿ ರಾಜ್ಯನೀತಿ ನಿರ್ದೇಶನ ತತ್ವಗಳ ಸಾಕಾರ ಬಯಸಿ, ಸಾಮಾಜಿಕ ಹಾಗೂ ಆರ್ಥಿಕ ನ್ಯಾಯ ಬಯಸಿ ಒಂಬತ್ತನೇ ಅನುಸೂಚಿಗೆ ಸೇರಿಸಲ್ಪಟ್ಟ ಅನೇಕ ಕಾಯ್ದೆಗಳ ಸಿಂಧುತ್ವವನ್ನು ನ್ಯಾಯಾಲಯದ ಮುಂದೆ ಪ್ರಶ್ನಿಸಬಹುದಾದ ಸಾಧ್ಯತೆ ಬಂದಿದೆ.

### ನ್ಯಾಯಾಂಗದ ಮೇಲೆ ಜಾಗತೀಕರಣದ ಪ್ರಭಾವ

ಸಂವಿಧಾನದ ಅನುಚ್ಛೇದ ೩೧-ಬಿ ಮೂಲಕ ಒಂಬತ್ತನೇ ಅನುಸೂಚಿಗೆ ಸೇರಿಸಲ್ಪಟ್ಟ ಎಲ್ಲ ಕಾಯ್ದೆಗಳನ್ನು ನ್ಯಾಯಾಲಯದಲ್ಲಿ ಪ್ರಶ್ನಿಸಬಹುದು ಮತ್ತು ನ್ಯಾಯಾಲಯ ಅವುಗಳ ಸಿಂಧುತ್ವವನ್ನು ಮೂಲಭೂತ ಹಕ್ಕುಗಳ ಒರೆಗೆ ಹಚ್ಚಿ ತೀರ್ಮಾನಿಸಬಹುದು ಎಂದು ಸರ್ವೋಚ್ಚ ನ್ಯಾಯಾಲಯ ಕರ್ವಾಲ್ಹೊ ಪ್ರಕರಣದಲ್ಲಿ ತೀರ್ಮಾನಿಸಿರುವುದು ೧೯೫೧ರಲ್ಲಿ ಪಾರ್ಲಿಮೆಂಟ್ ಮೊದಲನೇ ತಿದ್ದುಪಡಿಯ ಮೂಲಕ ತಂದ ಅನುಚ್ಛೇದ ೩೧-ಬಿ ಯನ್ನೇ ನಿರರ್ಥಕವಾಗಿಸಿದೆ. ಸಂವಿಧಾನದ ಭಾಗ-೪ರಲ್ಲಿರುವ ಸಾಮಾಜಿಕ ಮತ್ತು ಆರ್ಥಿಕ ನ್ಯಾಯದ ಆಶಯಗಳು ಮೂಲಭೂತ ಹಕ್ಕುಗಳನ್ನು ಮೊಟಕು ಮಾಡಲು ಅಥವಾ ಚ್ಯುತಿಗೊಳಿಸಲು ಸಾಧ್ಯವಿಲ್ಲವೆಂದಿರುವ ಸರ್ವೋಚ್ಚ ನ್ಯಾಯಾಲಯ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ನೀತಿಯತ್ತ ವಾಲಿದೆ ಎಂಬುದು ಕರ್ವಾಲ್ಹೊ ಪ್ರಕರಣ ದೃಢಪಡಿಸಿದೆ. ಸಮಾಜವಾದ, ಸಾಮಾಜಿಕ ನ್ಯಾಯ, ಸಮಾನತೆ ಇತ್ಯಾದಿಗಳೆಲ್ಲವೂ ಸಂವಿಧಾನದಲ್ಲಿ ಉದ್ಧೃತವಾಗಿದ್ದರೂ ಸರ್ವೋಚ್ಚ ನ್ಯಾಯಾಲಯದ ಮೇಲ್ಕಂಡ ತೀರ್ಪಿನಿಂದ ಅರ್ಥಹೀನವಾಗಿವೆ. ಅನುಚ್ಛೇದ ೩೧-ಬಿಯನ್ನು ಸಂವಿಧಾನಕ್ಕೆ ಅಳವಡಿಸಿದ್ದು ಒಂಬತ್ತನೇ ಅನುಸೂಚಿಯೊಳಗೆ ಸೇರಿಸಲ್ಪಡುವ ಕಾಯ್ದೆಗಳು ಮೂಲಭೂತ ಹಕ್ಕುಗಳ ಒರೆಗೊಳಗಾಗಿ ಅಸಿಂಧುವೆಂದು ನ್ಯಾಯಾಲಯಗಳು ತೀರ್ಮಾನಿಸುವುದನ್ನು ತಪ್ಪಿಸಲಿಕ್ಕಾಗಿ. ಆದರೆ ಕೇಶವಾನಂದ ಭಾರತಿ (೧೯೭೩) ಮತ್ತು ಕರ್ವಾಲ್ಹೊ (೨೦೦೭) ಪ್ರಕರಣಗಳಲ್ಲಿ ಈ ಅನುಚ್ಛೇದದ ವ್ಯಾಪ್ತಿಯನ್ನು ಸಂಕುಚಿತಗೊಳಿಸಿರುವುದನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಸರ್ವೋಚ್ಚ ನ್ಯಾಯಾಲಯ ತನ್ನ ಮೇಲುಗೈ ಸಾಧಿಸಲು ಮಾಡಿದ ಪ್ರಯತ್ನವೇನೋ ಎಂಬ ಸಂಶಯ ಮತ್ತೆ ಮತ್ತೆ ಕಾಡುತ್ತದೆ. ಹಿರಿಯ ನ್ಯಾಯವಾದಿ ಇಂದಿರಾ ಜಯಸಿಂಗ್ ಪ್ರಕಾರ ಕರ್ವಾಲ್ಹೊ ತೀರ್ಪಿನ ನಂತರ ಸರ್ವೋಚ್ಚ ನ್ಯಾಯಾಲಯ ಜಗತ್ತಿನ ನ್ಯಾಯಾಲಯಗಳ ಪೈಕಿ ಹೆಚ್ಚು ಅಧಿಕಾರ ಹೊಂದಿರುವಂತಹದ್ದು ಮತ್ತು ಯಾರಿಗೂ ಉತ್ತರಿಸಬೇಕಾಗಿಲ್ಲ.

### ಇಳಿಮುಖಗೊಳ್ಳುತ್ತಿರುವ ನ್ಯಾಯಾಂಗದ ವರ್ಚಸ್ಸು

ಶಾಸಕಾಂಗ ಮತ್ತು ಕಾರ್ಯಾಂಗಗಳು ಮಾಡಿದ ಮತ್ತು ಮಾಡುತ್ತಿರುವ ಅತಿರೇಕಗಳು ಮಾಧ್ಯಮಗಳ ಮೂಲಕ ಬಯಲಿಗೆ ಬರುತ್ತವೆ. ಆದರೆ ನ್ಯಾಯಾಂಗ ಮಾಡಿದ ಮತ್ತು ಮಾಡುತ್ತಿರುವ – ನ್ಯಾಯಿಕ ಪುನರ್ವಿಮರ್ಶೆಯ ಹೆಸರಿನಲ್ಲಿ – ಅತಿರೇಕಗಳು ಬಯಲಿಗೆ ಎಳೆಯಲು ಮಾಧ್ಯಮಗಳು ಹಿಂಜರಿಯುತ್ತವೆ. ಹಾಗೆ ಮಾಡಿದರೆ ಎಲ್ಲಿ ನ್ಯಾಯಾಂಗ ನಿಂದನೆ ಎಂದು ಪರಿಗಣಿಸಿಬಿಡುತ್ತಾರೋ ಎಂಬ ಹೆದರಿಕೆ ಇವರಿಗೆ ಇರುವಂತಿದೆ. ನ್ಯಾಯಾಂಗ ಇಂದು ತಾನು ಲಂಚ, ರುಷುವತ್ತು, ಪಕ್ಷಪಾತ ಇತ್ಯಾದಿ ಕಳಂಕಗಳಿಂದ ತನ್ನ ವರ್ಚಸ್ಸು ಮತ್ತು ನಂಬಿಕೆ ಕಳೆದುಕೊಂಡಿಲ್ಲ ಎಂದು ಹೇಳುವ ನೈತಿಕ ಸ್ಥೈರ್ಯವನ್ನು ಕಳೆದುಕೊಂಡಿದೆ. ಶಾಸಕಾಂಗ ಮತ್ತು ಕಾರ್ಯಾಂಗಗಳ ನೈತಿಕ ಅಧಃಪತನ ನ್ಯಾಯಾಂಗಕ್ಕೂ ಹಬ್ಬುತ್ತಿದೆ. ಆದ್ದರಿಂದ ನ್ಯಾಯಾಲಯಗಳು ಶಾಸಕಾಂಗ ಮತ್ತು ಕಾರ್ಯಾಂಗಗಳ ವೈಫಲ್ಯಗಳ ಬಗ್ಗೆ ವ್ಯಾಖ್ಯಾನಿಸಿದ್ದಾಗ ನ್ಯಾಯಾಂಗದ ಇಂದಿನ ಸ್ಥಿತಿ-ಗತಿಯ ಪರಿಚಯವಿರುವವರಿಗೆ ಮತ್ತು ಕಾಳಜಿಯಿರುವವರಿಗೆ ಬಹಳ ಮುಜುಗರವಾಗುತ್ತದೆ.

### ಜನತೆಯ ಆಶೋತ್ತರಕ್ಕೆ ಕಡಿವಾಣ

ಸ್ವಾಮಿ ಕೇಶವಾನಂದ ಭಾರತಿ ಪ್ರಕರಣದಲ್ಲಿ ಪಾರ್ಲಿಮೆಂಟ್‌ಗೆ ಸಂವಿಧಾನದ ಮೂಲ ಲಕ್ಷಣಗಳನ್ನು ಬದಲಾಯಿಸುವ ಅಧಿಕಾರವಿಲ್ಲವೆಂದು ಸರ್ವೋಚ್ಚ ನ್ಯಾಯಾಲಯ ತೀರ್ಮಾನಿಸಿತು. ಹಾಗಾದರೆ ಸಮಾಜದ ಮೂಲ ಲಕ್ಷಣಗಳನ್ನೇ ಬದಲಾಯಿಸಬೇಕೆಂದು ಸಂವಿಧಾನವನ್ನು ತನಗೇ ಕೊಟ್ಟುಕೊಂಡಿರುವ ಪ್ರಜೆಗಳು ಬಯಸಿದರೆ ಜನಗಳಿಂದ ನೇರವಾಗಿ ಚುನಾಯಿಸಲ್ಪಟ್ಟ ಪ್ರತಿನಿಧಿಗಳು ಜನಾದೇಶಕ್ಕೆ ಮನ್ನಣೆ ಕೊಡಬೇಕೋ ಅಥವಾ ಜನತೆಯಿಂದ ಚುನಾಯಿಸಲ್ಪಡದ ನ್ಯಾಯಮೂರ್ತಿಗಳು ಕೊಟ್ಟಂತಹ ಕೇಶವಾನಂದ ಭಾರತಿ ತೀರ್ಪಿನ ಪ್ರಕಾರ ಮೂಲ ಲಕ್ಷಣಗಳಿಗೇ ಶರಣಾಗಬೇಕೋ ? ಸಂವಿಧಾನದ ಅನುಚ್ಛೇದ ೩೧-ಬಿಯಲ್ಲಿರುವ ಅಧಿಕಾರದನ್ವಯ ಶಾಸನಗಳನ್ನು ಒಂಬತ್ತನೇ ಅನುಸೂಚಿಗೆ ಸೇರಿಸುವ ಮೂಲಕ ಸಾಮಾಜಿಕ ಹಾಗೂ ಆರ್ಥಿಕ ನ್ಯಾಯವನ್ನು ಬಹು ಜನರಿಗೆ ದೊರಕುವಂತೆ ಮಾಡುವ ರಾಜ್ಯ ನೀತಿ ನಿರ್ದೇಶಕ ತತ್ವಗಳನ್ನು ಜಾರಿಗೊಳಿಸುವ ಆದೇಶ ಹೊತ್ತಿರುವ ಶಾಸಕಾಂಗ ಈ ಅಧಿಕಾರವನ್ನೇ ಕಳೆದುಕೊಳ್ಳಬೇಕೆ? ಸಮಾಜದ ಸ್ಥಿತಿ-ಗತಿಗಳು ಜನತೆಯಿಂದ ನಿರ್ಧಾರವಾಗುತ್ತವೆ. ಸಂವಿಧಾನದ ಮೂಲ ಲಕ್ಷಣಗಳ ನೆಪದಲ್ಲಿ ಅವುಗಳನ್ನು ತಡೆಹಿಡಿಯುವುದು ಸಾಧ್ಯವೆ ?

ಬಂಡವಾಳಶಾಹಿ ಜಾಗತೀಕರಣದ ಹುಚ್ಚಿಗೊಳಗಾಗಿರುವ ಸಮಾಜದ ಎಲ್ಲ ಅಂಗಗಳೂ ತಮ್ಮ ಮೌಲ್ಯವನ್ನು ಕಳೆದುಕೊಳ್ಳುತ್ತಿವೆ. ಇದಕ್ಕೆ ನ್ಯಾಯಾಂಗ ಹೊರತಾಗಿದೆಯೆಂದು ಭಾವಿಸಿದಲ್ಲಿ ಅದು ಆತ್ಮವಂಚನೆಯಾದೀತು. ಹಾಗಾಗಿ ಸಾಮಾಜಿಕ ನ್ಯಾಯದ ಕಾಳಜಿ ಹಿಂದೆ ಸರಿಯುತ್ತಿದೆ. ಬೀದಿಕಾಳಗಕ್ಕೆ ಕಾಲ ಕೂಡಿಬರುತ್ತಿದೆ.

ಮುರಳೀಧರ್
ವಕೀಲರು, ನಂ. ೮೩, ಮಲ್ಲೇಶ್ವರಂ ವೃತ್ತ, ಬೆಂಗಳೂರು - ೫೬೦ ೦೦೩



# ಹಿನ್ನಡೆಯ ವಿವರಣೆಗೆ ಸದವಕಾಶ

**ಮೋ**ಡ ಮುಸುಕಿರುವ ಈ ತಿಂಗಳ ರಾತ್ರಿಗಳಲ್ಲಿ ಅಕಸ್ಮಾತ್ ಒಂದು ಸಂಜೆ ನಕ್ಷತ್ರಲೋಕ ಕ್ಷಣಕಾಲವಾದರೂ ಪ್ರತ್ಯಕ್ಷವಾದರೆ ವೀಕ್ಷಿಸಲು ಮರೆಯದಿರಿ. ಏಕೆಂದರೆ ಆಕಾಶಗಂಗೆಯ ಸುಂದರ ನೋಟಕ್ಕೆ ಇದು ಸದವಕಾಶ. ಪೂರ್ವದಿಂದ ಸ್ವಲ್ಪ ಎತ್ತರಕ್ಕೆ ಕಾಣುವ ವೃಶ್ಚಿಕರಾಶಿಯ ಸೊಬಗು ಸವಿಯಲು ಗುರು ಗ್ರಹವನ್ನು ಮಾರ್ಗದರ್ಶಿಯಂತೆ ಬಳಸಿ. ಅದರ ಆಸುಪಾಸನ್ನು ದುರ್ಬೀನು ಅಥವಾ ದೂರದರ್ಶಕದಿಂದ ಪರಿಶೀಲಿಸಿ. ಅಸಂಖ್ಯಾತ ನೆಬ್ಯುಲಾಗಳು ಕಾಣುತ್ತವೆ. ಈ ಭಾಗ ಮೋಡದಂತೆ ಕಾಣುತ್ತದೆಯಾದರೂ ಇವು ಮಳೆ ಸುರಿಸಲಾರವು ಮತ್ತು ಆಕಾಶ ಶುಭ್ರವಾದಷ್ಟೂ ಹೆಚ್ಚು ಸ್ಪಷ್ಟವಾಗಿ ಕಾಣುವುವು ಎಂಬುದನ್ನು ಗಮನಿಸಬಹುದು. ನಕ್ಷತ್ರಗಳ ಮೆರವಣಿಗೆಯಲ್ಲಿ ಇವೂ ಭಾಗಿಗಳು ಎಂಬ ಅಂಶ ಸ್ಪಷ್ಟವಾಗಲು ಕೆಲವು ಗಂಟೆಗಳಾದರೂ ಕಾಯಬೇಕು. ದಕ್ಷಿಣದ ಅಂಚನ್ನು ಗಮನಿಸಿ. ಅಲ್ಲಿ ಸೆಂಟಾರಸ್ (ಕಿನ್ನರ) ಗುಚ್ಛದ ಎರಡು ಪ್ರಕಾಶಮಾನ ನಕ್ಷತ್ರಗಳು; ಅಲ್ಲದೆ ತ್ರಿಶಂಕು ಅಥವಾ ದಕ್ಷಿಣ ಶಿಲುಬೆ ಕಾಣುತ್ತವೆಯಷ್ಟೇ. ಆಕಾಶ ಗಂಗೆಯ ಹರಿವು ಇವುಗಳ ಮೂಲಕ ಸಾಗುವುದನ್ನೂ ಕಾಣಬಹುದು. ಈ ದೃಶ್ಯದ ವೀಕ್ಷಣೆಗೆ ವರುಣನ (ಅವ) ಕೃಪೆ ಬೇಕೇ ಬೇಕು.

ನೆತ್ತಿಯ ಮೇಲಿನ ನೀಲಿ ನಕ್ಷತ್ರ ಚಿತ್ರಾ; ಸ್ವಲ್ಪ ಉತ್ತರಕ್ಕೆ ಸ್ವಾತಿ. ಇಲ್ಲಿ ಆಕಾಶಗಂಗೆಯ ಹರಿವಿಲ್ಲ. ಮರುಭೂಮಿಯಂತೆ ಬರಡು. ನಕ್ಷತ್ರಗಳಿಗೆ ಬರ. ಹಾಗೇ ಉತ್ತರಕ್ಕೆ ಕಣ್ಣು ಹಾಯಿಸಿ. ಸಪ್ತರ್ಷಿಮಂಡಲದಲ್ಲಿ ಅರುಂಧತಿಯ ದರ್ಶನವಾದರೆ ಆಕಾಶ ನಿಜಕ್ಕೂ ಶುಭ್ರ ಎಂದೇ ಅರ್ಥ.




ಈ ತಿಂಗಳಲ್ಲಿ ಒಂದೋ ಎರಡೋ ರಾತ್ರಿ ಮಾತ್ರ ಈ ನೋಟ ದೊರಕಬಹುದು. ಉಳಿದ ದಿನಗಳಲ್ಲಿ ಮೋಡದ ಮರೆಯಲ್ಲೂ ಕಾಣುವ ಶುಕ್ರ, ಗುರು, ಕೆಲವೊಮ್ಮೆ ಶನಿಯೂ ಕಾಣಬಹುದು. ಅವಕಾಶ ಸಿಕ್ಕಾಗಲೆಲ್ಲಾ ಶುಕ್ರನನ್ನು ಗಮನಿಸುತ್ತಿದ್ದರೆ, ಹಿನ್ನಡೆ ಎಂಬ ಪದದ ವಿವರಣೆ ಸಿಗುವುದು.

ತಿಂಗಳ ಆರಂಭದಲ್ಲಿ ಶುಕ್ರದ ಪಕ್ಕದಲ್ಲೇ ಶನಿ ಕಾಣುವುದು. ಆ ಮುಂದೆ ಶನಿ ಕ್ರಮೇಣ ದಿಗಂತದ ಅಂಚಿಗೆ ಸರಿಯುವುದು. ವಾಸ್ತವದಲ್ಲಿ ಶುಕ್ರದ್ದೇ ವೇಗದ ಓಟ. ಕಟಕದಿಂದ ಸಿಂಹಕ್ಕೆ ಅದು ಓಡುತ್ತದೆ. ಆದರೆ ಶನಿ ಓಡುತ್ತಿದೆ ಎಂಬ ಭ್ರಮೆ ಉಂಟಾಗುತ್ತದೆ. ೧೬ರಂದು ಗಮನಿಸಿ. ಆಗಲೂ ಶುಕ್ರದ ಪಕ್ಕ ಚುಕ್ಕೆ ಇದೆಯಲ್ಲ ಎನ್ನಿಸಬಹುದು. ಆದರೆ ಅದು ಶನಿ ಅಲ್ಲ; ಮಘ ನಕ್ಷತ್ರ. ೧೭ರಂದು ಇವೆರಡರೊಡನೆ ಚಂದ್ರನೂ ಸೇರಿ ಸುಂದರ ನೋಟ ಒದಗಿಸುತ್ತಾನೆ.

ಆ ಮುಂದಿನ ದಿನಗಳಲ್ಲಿ ಶುಕ್ರ ಮಘವನ್ನೂ ಹಿಂದೆ ಹಾಕಿ ಓಡುತ್ತದೆ. ಆದರೆ ಅದರ ವೇಗ ಕಡಿಮೆಯಾಯಿತೇನೋ ಅನ್ನಿಸಿದರೆ ಆಶ್ಚರ್ಯವಿಲ್ಲ. ೨೫ರಂದು ಅದು ತಟಸ್ಥವಾಗುತ್ತದೆ. ಇದರ ಅರ್ಥ ಸರಳ - ಹಿನ್ನಡೆ ಆರಂಭವಾಗಿದೆ ಎಂದು.



೧೬ನೇ ಜುಲೈ ಸಂಜೆ ಪಶ್ಚಿಮ ದಿಕ್ಕಿನತ್ತ ಕಾಣುವ ನೋಟ. ಶುಕ್ರ, ಶನಿ ಮತ್ತು ಮಘಾ ನಕ್ಷತ್ರ

ಶುಕ್ರ ಭೂಮಿಯನ್ನು ಹಿಂದೆ ಹಾಕಿ ಓಡುತ್ತಿದೆ ಎಂಬುದೇ ಹಿನ್ನಡೆ ಎಂಬ ಭ್ರಮೆಯನ್ನು ಉಂಟುಮಾಡುತ್ತದೆ. ಬುಧವೂ ಹಿಂದೆ ಹಾಕಿ ಓಡಿತ್ತು – ಕಳೆದ ತಿಂಗಳು. ೧೦ರಂದು ಅದರ ಹಿನ್ನಡೆ ಮುಕ್ತಾಯವಾಯಿತು. ಇದೀಗ ಶುಕ್ರದ ಸರದಿ. ಶುಕ್ರದ ಪ್ರಕಾಶ ೧೨ರಂದು ಗರಿಷ್ಠವಾಗುವುದೂ ಇದೇ ಕಾರಣದಿಂದ.

ಹಿನ್ನಡೆಯನ್ನು ಗುರುತಿಸಲು ಈಗೊಂದು ಒಳ್ಳೆಯ ಅವಕಾಶವಿದೆ. ೧೬ರಂದು ಮಘವನ್ನು ಹಿಂದೆ ಹಾಕಿ ಓಡಿದ್ದ ಇದು ಈಗ ಪುನಃ ಮಘದ ದಿಕ್ಕಿಗೇ ಹೊರಟಿದೆ. ಅಂದರೆ ಚಲನೆಯ ದಿಕ್ಕು ಮೊದಲಿನದರ ವಿರುದ್ಧವಾಯಿತು. ಮಘ ನಕ್ಷತ್ರವನ್ನು ಪುನಃ ಆಗಸ್ಟ್ ಮೂರರಂದು ಸಮೀಪಿಸಲಿದೆ. ಹೀಗೆ ಮುಂದುವರೆದು ಸೂರ್ಯನನ್ನು ಹಾದು ಆಗಸ್ಟ್ ಉತ್ತರಾರ್ಧದಿಂದ ಮುಂದೆ ಬೆಳಗಿನ ಜಾವ ಕಾಣತೊಡಗುವುದು ಎಂಬುದರ ಸುಳಿವೇ ಈ ಹಿನ್ನಡೆ.

ಹೀಗೆ ಹಿನ್ನಡೆ ಎಂಬುದರ ಸುಲಭ ಪ್ರಾತ್ಯಕ್ಷಿಕೆಗೆ ಶುಕ್ರ ಒಳ್ಳೆಯ ಅವಕಾಶ ಮಾಡಿಕೊಟ್ಟಿದೆ.

ಅಕ್ವಾರಿಡ್ಸ್ ಎಂಬ ಹೆಸರಿನ ಉಲ್ಕಾ ವೃಷ್ಟಿಯ ಗರಿಷ್ಠ ಚಟುವಟಿಕೆ ೨೫ರಂದು. ಅಕ್ವೇರಿಯಸ್ ಅಂದರೆ ಕುಂಭರಾಶಿಯಿಂದ ಹೊರಟಂತೆ ಕಾಣುವ ಅನೇಕ ಉಲ್ಕೆಗಳನ್ನು ಬೆಳಗಿನ ಜಾವ ನೋಡಬಹುದು. ಗಂಟೆಗೆ ಸುಮಾರು ೨೦-೩೦ ಕಾಣುವವು.

ಸೂರ್ಯನನ್ನು ಭೂಮಿ ಸುತ್ತುವ ಕಕ್ಷೆ ದೀರ್ಘವೃತ್ತವಾದದ್ದರಿಂದ ಅವೆರಡರ ಅಂತರ ವರ್ಷದುದ್ದಕ್ಕೂ ವ್ಯತ್ಯಾಸವಾಗುತ್ತಿರುತ್ತದೆ. ಜುಲೈ ೬ರಂದು ಆ ಅಂತರ ಗರಿಷ್ಠವಾಗಲಿದೆ.

**ಖಗೋಳ ದಿನಚರಿ**

೨ ಶುಕ್ರ-ಶನಿ ಸಮಾಗಮ*
೩ ನೆಪ್ಚ್ಯೂನ್-ಚಂದ್ರ ಸಮಾಗಮ (ಆಚ್ಛಾದನೆ ಕಾಣುವುದಿಲ್ಲ)
೫ ಯುರೇನಸ್-ಚಂದ್ರ ಸಮಾಗಮ; ಚಂದ್ರ ರಾಹು ಬಿಂದುವಿನಲ್ಲಿ
೬ ಭೂಮಿ - ಸೂರ್ಯ ನಡುವೆ ಗರಿಷ್ಠ ಅಂತರ
೭ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೯ ಚಂದ್ರ-ಮಂಗಳ ಸಮಾಗಮ* ಚಂದ್ರ - ಭೂಮಿ ನಡುವಿನ ಅಂತರ ಗರಿಷ್ಠ
೧೦ ಬುಧ ಗ್ರಹದ ಹಿನ್ನಡೆ ಮುಕ್ತಾಯ
೧೨ ಶುಕ್ರದ ಪ್ರಕಾಶ ಗರಿಷ್ಠ*
೧೩ ಬುಧ-ಚಂದ್ರ ಸಮಾಗಮ
೧೪ ಅಮಾವಾಸ್ಯೆ ೧೭:೩೪ ಕ್ಕೆ
೧೬ ಮಘ-ಶುಕ್ರ ಸಮಾಗಮ* ಚಂದ್ರ-ಶನಿ ಸಮಾಗಮ* (ಆಚ್ಛಾದನೆ ಕಾಣುವುದಿಲ್ಲ)
೧೭ ಶುಕ್ರ-ಚಂದ್ರ-ಮಘ ಸಮಾಗಮ * (ಮಘ ಆಚ್ಛಾದನೆ ಕಾಣುವುದಿಲ್ಲ)
೧೮ ಚಂದ್ರ ಕೇತು ಬಿಂದುವಿನಲ್ಲಿ
೨೦ ಬುಧ ಗ್ರಹದ ಗರಿಷ್ಠ ಕೋನೋನ್ನತಿ (೨೦ ಡಿಗ್ರಿ)
೨೨ ಚಾಂದ್ರಮಾಸದ ಪ್ರಥಮ ಪಾದ (ಚಂದ್ರಾಸ್ತ ನಡುರಾತ್ರಿಗೆ)
೨೫ ಶುಕ್ರ ಗ್ರಹ ತಟಸ್ಥ (ಹಿನ್ನಡೆ ಆರಂಭ) ಚಂದ್ರ-ಗುರು ಸಮಾಗಮ*
ಅಕ್ವಾರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ*
೩೦ ಹುಣ್ಣಿಮೆ ೦೬:೧೮ಕ್ಕೆ
೩೧ ನೆಪ್ಚ್ಯೂನ್-ಚಂದ್ರ ಸಮಾಗಮ (ಆಚ್ಛಾದನೆ ಕಾಣುವುದಿಲ್ಲ)
ಆಗಸ್ಟ್ ೩ ಶುಕ್ರ-ಮಘ ಸಮಾಗಮ*
* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ

**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್,
ಬೆಂಗಳೂರು - ೫೬೦ ೦೦೧

## ೮ರ ಕೂಟದ ತಂಟೆ ಬೇಡ, ಪರ್ಯಾಯ ವ್ಯವಸ್ಥೆ ಬೇಕು

ಶ್ರೀಮಂತ ರಾಷ್ಟ್ರಗಳ ೮ರ ಕೂಟದ ಶೃಂಗ ಸಮಾವೇಶ ಈ ಸಲ ನಡೆದದ್ದು ಜರ್ಮನಿಯಲ್ಲಿ. ಮೂವತ್ತೆರಡು ವರ್ಷಗಳಿಂದ ತಪ್ಪದೆ ವರ್ಷಕ್ಕೊಮ್ಮೆ ಜರುಗುವ ಈ ಸಮಾವೇಶದ ಮುಖ್ಯ ಗುರಿ ಪ್ರಪಂಚದ ಆರ್ಥಿಕದ ಮೇಲೆ ತಮ್ಮ ನಿಯಂತ್ರಣವನ್ನು ಬಲಪಡಿಸುವುದು ಹೇಗೆ, ಲಾಭ ಕಿಂಚಿತ್ತೂ ಕಡಿಮೆಯಾಗದಂತೆ ನೋಡಿಕೊಂಡು, ಅದನ್ನು ಮತ್ತಷ್ಟು ವರ್ಧಿಸುವುದು ಹೇಗೆ, ಬಡರಾಷ್ಟ್ರಗಳ ಸಂಪನ್ಮೂಲಗಳನ್ನು ದೋಚುವುದು ಹೇಗೆ ಎಂಬುದನ್ನು ಚರ್ಚಿಸಿ ಸೂಕ್ತ ನಿರ್ಧಾರಗಳನ್ನು ಕೈಗೊಳ್ಳುವುದು. ಇದನ್ನು ಈ ಕೂಟ ಜಾಣತನದಿಂದ ನಡೆಸಿಕೊಂಡು ಬಂದಿದೆ. ಜರ್ಮನಿಯಲ್ಲಿ ಜರುಗಿದ ಸಮಾವೇಶವೂ ಕೂಡ ಅದೇ ಸಾಲಿಗೆ ಸೇರುತ್ತದೆ. ಪರಿಸರ ಸಂರಕ್ಷಣೆಗೆ ಜಾಗತಿಕ ತಾಪಮಾನ ಏರಿಕೆಗಳ ಕುರಿತು ಉದ್ದುದ್ದ ಭಾಷಣಗಳನ್ನು, ಹಿತವಚನಗಳನ್ನು ಬೋಧಿಸುವ ಈ ಶ್ರೀಮಂತ ರಾಷ್ಟ್ರಗಳು ತಮ್ಮ ತೈಲ ಬಳಕೆಯನ್ನು ಕಡಿಮೆ ಮಾಡಿಕೊಳ್ಳುವ ವಿಚಾರವನ್ನು ಬದಿಗೊತ್ತಿ, ಬಡರಾಷ್ಟ್ರಗಳ ಮೇಲೆ ಗೂಬೆ ಕೂರಿಸಿ, ಪರಿಸರ ಸಂರಕ್ಷಣೆಗೆ ಈ ಬಡರಾಷ್ಟ್ರಗಳು ಹೆಚ್ಚು ಆಸಕ್ತಿ ತೋರಬೇಕೆಂದು ಒತ್ತಾಯ ಮಾಡುತ್ತಿವೆ. ಈ ದೇಶಗಳು ಇಂಧನವನ್ನು ಕಡಿಮೆ ಬಳಸಬೇಕೆಂದು ಆಗ್ರಹಪಡಿಸುತ್ತಿವೆ. ಮಾಮೂಲಿನಂತೆ ಬಂಡವಾಳ ಹೂಡಿಕೆಗೆ ಅಭಿವೃದ್ಧಿಶೀಲ ರಾಷ್ಟ್ರಗಳು ಸೂಕ್ತ ವಾತಾವರಣವನ್ನು ಕಲ್ಪಿಸಬೇಕು ಎಂದು ಹೇಳುತ್ತವೆ. ಅರ್ಥಾತ್ ಬೃಹತ್ ಬಹುರಾಷ್ಟ್ರೀಯ ಸಂಸ್ಥೆಗಳಿಗೆ ಮುಕ್ತ ಅವಕಾಶ ನೀಡಬೇಕೆಂದು ಹೇಳುತ್ತವೆ. ಇನ್ನು ತಮ್ಮ ಸ್ವಂತ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುವ ವಿಚಾರವನ್ನೆಲ್ಲ ಶ್ರೀಮಂತ ರಾಷ್ಟ್ರಗಳು ರಹಸ್ಯ ಮಾತುಕತೆಗಳಿಗೆ ಸೀಮಿತಗೊಳಿಸುತ್ತವೆ. ಪರಿಸರ ಕಾಪಾಡುವ ವಿಚಾರವಾಗಲಿ, ಆರ್ಥಿಕ ನೆರವಿನ ವಿಚಾರವಾಗಲಿ ಅಥವಾ ಬೇರಾವುದೇ ವಿಚಾರವಾಗಲಿ ತಮ್ಮ ಹೊಣೆಗಾರಿಕೆಯಿಂದ ಜಾರಿಕೊಳ್ಳುವುದನ್ನು ಎಂಟರಕೂಟ ಕರಗತಮಾಡಿಕೊಂಡಿದೆ.



ಒಂದು ಕಾಲದಲ್ಲಿ ಪ್ರಪಂಚದ ತೈಲ ನಿಕ್ಷೇಪಗಳ ಮೇಲೆ ನಿಯಂತ್ರಣ ಹೊಂದಿದ್ದ ಶ್ರೀಮಂತ ರಾಷ್ಟ್ರಗಳು ಅಗ್ಗದರದಲ್ಲಿ ತೈಲವನ್ನು ಪಡೆದುಕೊಂಡು ವರ್ಧಿಸಿದುವು. ಈಗಲೂ ಈ ದೇಶಗಳು ಪ್ರಪಂಚದ ತೈಲೋತ್ಪನ್ನದಲ್ಲಿ ಅರ್ಧದಷ್ಟನ್ನು ಕಬಳಿಸುತ್ತಿವೆ. ಅಂದರೆ ಪರಿಸರ ಮಾಲಿನ್ಯದಲ್ಲಿ ಇವುಗಳ ಪಾಲೇ ಅಧಿಕ. ೮ರ ಕೂಟ ಹುಟ್ಟಿಕೊಂಡದ್ದೇ ತೈಲ ಬಿಕ್ಕಟ್ಟಿನಿಂದ, ತೈಲ ಬೆಲೆ ಹೆಚ್ಚಾಗತೊಡಗಿದ್ದರಿಂದ. ೧೯೭೨ರಲ್ಲಿ ಒಂದು ಬ್ಯಾರಲ್ ತೈಲದ ಬೆಲೆ ೩ ಡಾಲರುಗಳಿದ್ದುದು ೧೯೭೪ರಲ್ಲಿ ೧೨ ಡಾಲರುಗಳಿಗೇರಿತು. (ಈಗ ಬೆಲೆ ಇನ್ನೂ ನಾಲ್ಕು ಪಟ್ಟು ಹೆಚ್ಚಾಗಿದೆ. ಅದು ಬೇರೆ ವಿಷಯ.) ಇದು ವಿನಿಮಯ ದರಗಳ ಮೇಲೆ ತೀವ್ರವಾದ ಪರಿಣಾಮ ಉಂಟುಮಾಡಿತು. ಇದರಿಂದ ಗಾಬರಿಗೊಂಡ ಆರು ಶ್ರೀಮಂತ ರಾಷ್ಟ್ರಗಳು – ಅಮೆರಿಕ, ಬ್ರಿಟನ್, ಫ್ರಾನ್ಸ್, ಇಟಲಿ, ಜರ್ಮನಿ, ಜಪಾನ್ – ೧೯೭೫ರಲ್ಲಿ ಸಮಾಲೋಚನೆ ನಡೆಸಿ ಸೂಕ್ತ ಕ್ರಮ ಕೈಗೊಳ್ಳಲು ನಿರ್ಧರಿಸಿದುವು. ಮರು ವರ್ಷವೇ ಕೆನಡಾ ಸದಸ್ಯ ರಾಷ್ಟ್ರವಾಗಿ ಸೇರಿ ೭ರ ಕೂಟ ಎಂದು ಹೆಸರು ಪಡೆದು ಅಸ್ತಿತ್ವಕ್ಕೆ ಬಂದಿತು. ವರ್ಲ್ಡ್ ಬ್ಯಾಂಕ್, ಐ.ಎಂ.ಎಫ್.ಗಳನ್ನು ತನ್ನ ತೆಕ್ಕೆಯಲ್ಲಿರಿಸಿಕೊಂಡಿರುವ ಈ ೭ರ ಕೂಟ ಪ್ರಪಂಚದ ಇತರ ರಾಷ್ಟ್ರಗಳನ್ನು ಶೋಷಣೆ ಮಾಡುತ್ತಾ ಬಂದಿದೆ. ೧೯೯೮ರಲ್ಲಿ ರಷ್ಯಾ ಸದಸ್ಯತ್ವ ಪಡೆದ ಮೇಲೆ ೮ರ ಕೂಟ ಎನಿಸಿಕೊಂಡಿತು. ಈಚೆಗೆ ಕೆಲವು ವರ್ಷಗಳಿಂದ ಐದು ಅಭಿವೃದ್ಧಿಶೀಲ ರಾಷ್ಟ್ರಗಳನ್ನು ಎಂದರೆ ಭಾರತ, ಚೀಣ, ಬ್ರೆಜಿಲ್, ದಕ್ಷಿಣ ಆಫ್ರಿಕಾ ಮತ್ತು ಮೆಕ್ಸಿಕೋ ದೇಶಗಳನ್ನು ಈ ಕೂಟದ ಸಭೆಗಳಿಗೆ ಆಮಂತ್ರಿಸಲಾಗುತ್ತಿದೆ. ಇದಕ್ಕೆ ಮುಖ್ಯ ಕಾರಣ ಪ್ರಪಂಚದ ಜನಸಂಖ್ಯೆಯಲ್ಲಿ ಸುಮಾರು ಅರ್ಧದಷ್ಟು ಜನಸಂಖ್ಯೆಯನ್ನು ಹೊಂದಿದ್ದು ವಿಸ್ತಾರಗೊಳ್ಳುತ್ತಿರುವ ಮಾರುಕಟ್ಟೆಯಾಗಿರುವುದಲ್ಲದೆ, ಈ ದೇಶಗಳು ಪ್ರಾದೇಶಿಕವಾಗಿ ಪ್ರಭಾವಶಾಲಿಗಳಾಗಿರುವುದರಿಂದ. ಹಾಗಾಗಿ ಈ ದೇಶಗಳನ್ನು ತಮ್ಮ ಪ್ರಭಾವ ವಲಯದಲ್ಲಿ ಸೆಳೆದುಕೊಳ್ಳುವುದು, ಬೇರೆ ಬಡರಾಷ್ಟ್ರಗಳಿಂದ ಪ್ರತ್ಯೇಕಿಸುವುದು ಮೂಲ ಉದ್ದೇಶ. ಆಹ್ವಾನಿತ ರಾಷ್ಟ್ರಗಳಿಗೆ ಶ್ರೀಮಂತ ರಾಷ್ಟ್ರಗಳ ಜೊತೆ ಒಡನಾಟದ ಪ್ರತಿಷ್ಠೆ ಬಿಟ್ಟರೆ ಬೇರೇನೂ ಲಾಭವಿಲ್ಲ. 'ವಿಭಜಿಸಿ ಆಳು' ಎನ್ನುವ ನೀತಿಯ ಇನ್ನೊಂದು ಅವತಾರ ಇದು.

ಅಂತಾರಾಷ್ಟ್ರೀಯ ಕ್ಷೇತ್ರದಲ್ಲಿ ಏಕಕೇಂದ್ರೀಯ ಶಕ್ತಿಯ ಉಗಮ, ಅದರ ಹಿಂದೆಯೇ ಬಂದ ಜಾಗತೀಕರಣದ ಭರಾಟೆ, ವಿಶ್ವವ್ಯಾಪಾರ ಸಂಸ್ಥೆಯ ಸ್ಥಾಪನೆ, ಇದಕ್ಕೆ ಸಂಬಂಧಿಸಿದಂತೆ ಹಲವಾರು ಪ್ರಮುಖ ವಿಷಯಗಳ ಮೇಲೆ ಸಂಧಾನಗಳು, ಇವೆಲ್ಲ ಹೊಸ ಪರಿಸ್ಥಿತಿಯನ್ನು ಸೃಷ್ಟಿಸಿದುವು. ಶ್ರೀಮಂತ ರಾಷ್ಟ್ರಗಳ ಕೂಟ ಬಡರಾಷ್ಟ್ರಗಳ ಮೇಲೆ ಬಲವಂತವಾಗಿ ಹೇರಲು ಬಯಸಿದ್ದ ಷರತ್ತುಗಳನ್ನು ಎದುರಿಸುವುದು ಅನಿವಾರ್ಯವಾಯಿತು. ಅದು ಎಲ್ಲ ಬಗೆಯಲ್ಲಿಯೂ ಬಡರಾಷ್ಟ್ರಗಳಿಗೆ ಉಳಿವು, ಅಳಿವಿನ ಪ್ರಶ್ನೆಯಾಗಿದ್ದು ಒಂದುಗೂಡಿದ ಪ್ರಯತ್ನ ಅಗತ್ಯವಾಯಿತು. ಏಷಿಯಾ, ಆಫ್ರಿಕಾ, ಲ್ಯಾಟಿನ್ ಅಮೆರಿಕಾಗಳ ನೂರಾರು ದೇಶಗಳನ್ನು ಪ್ರತಿನಿಧಿಸಿ ಶ್ರೀಮಂತ ರಾಷ್ಟ್ರಗಳೊಂದಿಗೆ ಸಂಧಾನ ನಡೆಸಲು ಆಗ ಹುಟ್ಟಿಕೊಂಡದ್ದೇ ಇಪ್ಪತ್ತು ಅಭಿವೃದ್ಧಿಶೀಲ ರಾಷ್ಟ್ರಗಳ ತಂಡ. ಮೊದಲೇ ಹೇಳಿರುವ ಹಾಗೆ ಈ ೨೦ರ ತಂಡದಲ್ಲಿ ಭಾರತ, ಬ್ರೆಜಿಲ್, ಮೆಕ್ಸಿಕೋ, ಚೀಣ, ದಕ್ಷಿಣ ಆಫ್ರಿಕಾ ಪ್ರಮುಖವಾಗಿರುವುದರಿಂದ ಅವನ್ನು ತಮ್ಮೆಡೆಗೆ ಸೆಳೆದುಕೊಳ್ಳಲು ಶ್ರೀಮಂತ ರಾಷ್ಟ್ರಗಳು ಬಲೆಬೀಸಿವೆ, ಒಡಕುಂಟುಮಾಡಲು ನೋಡುತ್ತಿವೆ.

ಇಂಥ ಸನ್ನಿವೇಶದಲ್ಲಿ, ೮ರ ಕೂಟದ ಪ್ರಯತ್ನಗಳನ್ನು ಹಿಮ್ಮೆಟ್ಟಿಸಲು ಇರುವ ಮಾರ್ಗಗಳಲ್ಲೊಂದು, ಬಡ ಅಭಿವೃದ್ಧಿಶೀಲ ದೇಶಗಳು ಕೂಟದ ಆಮಿಷಗಳಿಗೆ ಬಲಿಯಾಗದೆ ಐಕ್ಯತೆಯನ್ನು ಬಲಪಡಿಸಿಕೊಂಡು ಪರ್ಯಾಯ ವ್ಯವಸ್ಥೆ ರೂಪಿಸಲು ಕ್ರಮ ಕೈಗೊಳ್ಳುವುದು. ಅಂಥ ಪ್ರಯತ್ನವನ್ನು ಮಾಡುವುದಕ್ಕೆ ಕಾಲ ಸನ್ನಿಹಿತವಾಗಿದೆ. ಕಳೆದ ವರ್ಷ ಜರುಗಿದ ಅಲಿಪ್ತ ರಾಷ್ಟ್ರಗಳ ಸಮಾವೇಶದಲ್ಲಿ ಇಂಥ ಒಂದು ಪ್ರಸ್ತಾಪ ಬಂದಿದ್ದನ್ನು ನೆನಪಿಸಿಕೊಳ್ಳಬಹುದು. ಈಚಿನ ವರ್ಷಗಳಲ್ಲಿ ದಕ್ಷಿಣ ಅಮೆರಿಕಾದ ದೇಶಗಳು ದೀರ್ಘಕಾಲದಿಂದ ಇರುವ ಅಮೆರಿಕಾದ ಪ್ರಾಬಲ್ಯವನ್ನು ಮುರಿದು ಪರ್ಯಾಯ ವ್ಯವಸ್ಥೆ ರೂಪಿಸಿಕೊಳ್ಳುವ ದಿಶೆಯಲ್ಲಿ ಕ್ರಮಿಸುತ್ತಿರುವುದನ್ನು ಗಮನದಲ್ಲಿರಿಸಿಕೊಳ್ಳಬೇಕು. ಈ ಹಿನ್ನೆಲೆಯಿಂದ ಪರಿಶೀಲಿಸಿದಾಗ ಜರ್ಮನಿಯಲ್ಲಿ ಜರುಗಿದ ೮ರ ಕೂಟದ ಶೃಂಗ ಸಮಾವೇಶದಲ್ಲಿ ಆಮಂತ್ರಿತವಾಗಿ ಭಾಗವಹಿಸಿದ್ದ ಐದು ಅಭಿವೃದ್ಧಿಶೀಲ ದೇಶಗಳ ನಾಯಕರು ಅನೌಪಚಾರಿಕವಾಗಿ ನಡೆಸಿದ ಸಭೆ ಮಹತ್ವದ್ದಾಗಿದೆ. ಈ ಸಭೆಯಲ್ಲಿ ಬ್ರೆಜಿಲ್‌ನ ಅಧ್ಯಕ್ಷರಾದ ಲೂಲಾ ಡಿ ಸಿಲ್ವ ೮ರ ಕೂಟಕ್ಕೆ ಪ್ರತಿಯಾಗಿ ಶೀಘ್ರದಲ್ಲೇ ಐದು ಅಭಿವೃದ್ಧಿಶೀಲ ರಾಷ್ಟ್ರಗಳ ಶೃಂಗ ಸಮಾವೇಶ ನಡೆಸಲು ಸೂಚನೆ ಮಂಡಿಸಿದರು. ಈ ಸೂಚನೆಗೆ ಬೆಂಬಲವೂ ದೊರೆತಿದೆ. ಇದು ಸ್ವಾಗತಾರ್ಹ ಬೆಳವಣಿಗೆ. ಮೀನ-ಮೇಷ ಎಣಿಸದೆ ಈ ಐದು ದೇಶಗಳ ಶೃಂಗ ಸಮಾವೇಶ ಶೀಘ್ರವಾಗಿ ನಡೆದು, ಪರ್ಯಾಯ ವ್ಯವಸ್ಥೆಯ ರೂಪುರೇಷೆಗಳನ್ನು ತಯಾರಿಸಿದರೆ ಒಳಿತು. ಅಂಥ ಪ್ರಯತ್ನಕ್ಕೆ ಎಲ್ಲ ಬಡರಾಷ್ಟ್ರಗಳ ಬೆಂಬಲ ಖಚಿತ. ಭಾರತದ ಯು.ಪಿ.ಎ. ಸರಕಾರ ದೇಶವನ್ನು ಅಮೆರಿಕಾದ ಬಾಲಂಗೋಚಿ ಮಾಡುವ ಹುನ್ನಾರ ಕೈಬಿಟ್ಟು ಈ ವಿಷಯದಲ್ಲಿ ಆಸಕ್ತಿ ವಹಿಸಿ, ಅಗತ್ಯ ಉಪಕ್ರಮಗಳನ್ನು ಕೈಗೊಂಡು, ಕ್ರಿಯಾಶೀಲವಾಗಿ ಭಾಗಿಯಾಗಬೇಕು. ಇಂದಿನ ಜಾಗತಿಕ ಪರಿಸ್ಥಿತಿಯಲ್ಲಿ ಪರ್ಯಾಯ ವ್ಯವಸ್ಥೆಯೊಂದು ರೂಪುಗೊಂಡು ಶ್ರೀಮಂತ ರಾಷ್ಟ್ರಗಳ ಸವಾಲನ್ನು ಎದುರಿಸುವುದು ಅತ್ಯವಶ್ಯಕವಾದ್ದಾಗಿದೆ.

## ಅಮೆರಿಕಾದೊಂದಿಗೆ ೧೨೩ ಒಪ್ಪಂದ ತಿರಸ್ಕರಿಸಿ

ನವದೆಹಲಿಯಲ್ಲಿ ಭಾರತ ಮತ್ತು ಅಮೆರಿಕಾದ ಅಧಿಕಾರಿಗಳು ನ್ಯೂಕ್ಲಿಯರ್ ಒಪ್ಪಂದ ಕುರಿತು ನಡೆಸಿದ ಮಾತುಕತೆಗಳು ಫಲಕಾರಿಯಾಗಲಿಲ್ಲ. ಅಮೆರಿಕಾದ ಶಾಸಕಾಂಗ ಅಂಗೀಕರಿಸಿರುವ ಈ ಸಂಬಂಧದ ಹೈಡ್ ಕಾಯಿದೆಗನುಸಾರವಾಗಿ ತಯಾರಿಸಿರುವ ೧೨೩ ಒಪ್ಪಂದ ಎಂದು ಕರೆಯಲ್ಪಡುತ್ತಿರುವ ಕರಡನ್ನು ಭಾರತ ಒಪ್ಪುವಂತೆ ಮಾಡಲು ಸಕಲ ಪ್ರಯತ್ನಗಳೂ ನಡೆಯುತ್ತಿವೆ. ಜರ್ಮನಿಯಲ್ಲಿ ಜರುಗಿದ ೮ರ ಕೂಟದ ಸಮಾವೇಶದ ಸಮಯದಲ್ಲಿ ಪ್ರಧಾನಿ ಮನಮೋಹನ್ ಸಿಂಗ್ ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್‌ರನ್ನು ಭೇಟಿಯಾಗಿದ್ದರು. ಭಿನ್ನಾಭಿಪ್ರಾಯಗಳು ಬಗೆಹರಿಯುವ ಬಗ್ಗೆ ಇಬ್ಬರೂ ಆಶಾಭಾವನೆ ವ್ಯಕ್ತಗೊಳಿಸಿದ್ದಾರೆ. ಕಗ್ಗಂಟಾಗಿರುವ ಈ ಒಪ್ಪಂದ ಸಾಧ್ಯವಾದೀತು; ಸಾಧ್ಯವಾಗದಿದ್ದರೆ ಭಾರತ-ಅಮೆರಿಕಾ ಸಂಬಂಧಗಳಿಗೇನೂ ತೊಡಕಾಗದು ಎಂಬ ಭಾವನೆಯನ್ನು ವಿದೇಶಾಂಗ ಸಚಿವ ಪ್ರಣವ್ ಮುಖರ್ಜಿ ಸಂದರ್ಶನವೊಂದರಲ್ಲಿ ವ್ಯಕ್ತಗೊಳಿಸಿದ್ದಾರೆ. ಅಮೆರಿಕಾ ಇತರ ದೇಶಗಳೊಂದಿಗೆ ನಡೆಸುವ ವ್ಯವಹಾರಗಳಲ್ಲಿ ಸಂಬಂಧಪಟ್ಟ ದೇಶಗಳನ್ನು ಸಮಾನವಾಗಿ ಪರಿಗಣಿಸಿ, ಆ ದೇಶಗಳ ಆತಂಕಗಳಿಗೆ ಗಮನಹರಿಸಿ ಸಮಸ್ಯೆಗಳನ್ನು ಬಗೆಹರಿಸಿರುವ ನಿದರ್ಶನಗಳಿಲ್ಲ. ಏಕಪಕ್ಷೀಯವಾಗಿ, ತನ್ನ ಹಿತಾಸಕ್ತಿಗೆ ಪೂರಕವಾದ ಒಪ್ಪಂದಗಳನ್ನು ಇತರ ದೇಶಗಳ ಮೇಲೆ ಹೊರಿಸುವುದು ಅದರ ಜಾಯಮಾನ. ಭಾರತದ ವಿಷಯದಲ್ಲೂ ಅಮೆರಿಕಾ ತಳೆದಿರುವ ಧೋರಣೆ ಇದು. ೨೦೦೫ರ ಜುಲೈನಲ್ಲಿ ಮತ್ತು ೨೦೦೬ರ ಮಾರ್ಚ್ ತಿಂಗಳಲ್ಲಿ ನ್ಯೂಕ್ಲಿಯರ್ ಸಹಕಾರ ಕುರಿತು ಎರಡೂ ದೇಶದ ವರಿಷ್ಠರು ಸಮ್ಮತಿಸಿದ ಜಂಟಿ

ನ್ಯೂಯಾರ್ಕ್

ಪ್ರಕಟಣೆಯನ್ನು ಮೀರಿ ೧೨೩ ಒಪ್ಪಂದವನ್ನು ಅಮೆರಿಕಾ ಸಿದ್ಧಗೊಳಿಸಿದೆ. ಮೊದಲನೆಯದಾಗಿ, ಜಂಟಿ ಪ್ರಕಟಣೆಯಲ್ಲಿ ನ್ಯೂಕ್ಲಿಯರ್ ಸಹಕಾರ ಕುರಿತ ಅಂಶಗಳೇ ಭಾರತದ ಸ್ವಾತಂತ್ರ್ಯ ಮತ್ತು ಸಾರ್ವಭೌಮತ್ವವನ್ನು ಅಮೆರಿಕಾಗೆ ಒತ್ತೆ ಇರಿಸುವಂಥದ್ದು, ಭಾರತ ನ್ಯೂಕ್ಲಿಯರ್ ನೀತಿಗೆ ಮಾರಕವಾದದ್ದು. ಈ ಒಪ್ಪಂದಕ್ಕೆ ದೇಶದ ವಿಜ್ಞಾನಿಗಳ ಹಾಗೂ ಜನತೆಯ ತೀವ್ರ ವಿರೋಧ ಬಂದುದು ಸರ್ವವಿದಿತ. ಅದನ್ನು ಮೀರಿ, ಹೊಸ ನಿರ್ಬಂಧಗಳನ್ನು ಒಳಗೊಂಡಿರುವ ೧೨೩ ಒಪ್ಪಂದ ಎಲ್ಲ ಬಗೆಯಲ್ಲೂ ಸರ್ವನಾಶ ತರುವಂಥದ್ದಾಗಿದೆ.

ಜಾರ್ಜ್ ಬುಷ್-ಮನಮೋಹನ್ ಸಿಂಗ್ ಪರಸ್ಪರ ಭೆಟ್ಟಿಯ ನಂತರ ನೀಡಿದ ಜಂಟಿ ಪ್ರಕಟಣೆಗೆ ತೀವ್ರವಾದ ವಿರೋಧ ಎಲ್ಲೆಡೆಗಳಿಂದ, ಮುಖ್ಯವಾಗಿ ವಿಜ್ಞಾನಿಗಳಿಂದ, ಸರಕಾರಕ್ಕೆ ಹೊರಗಿನಿಂದ ಬೆಂಬಲ ನೀಡುತ್ತಿರುವ ಎಡ ಪಕ್ಷಗಳಿಂದ ಬಂದುದರಿಂದ ಪ್ರಧಾನಿ ಮನಮೋಹನ್ ಸಿಂಗ್ ಪಾರ್ಲಿಮೆಂಟಿನಲ್ಲಿ ಹೇಳಿಕೆ ನೀಡಿ ಎಲ್ಲ ಆಕ್ಷೇಪಗಳನ್ನು ಗಮನಕ್ಕೆ ತೆಗೆದುಕೊಂಡು ವ್ಯವಹರಿಸುವುದಾಗಿ ಹೇಳಿದರು. ಭಾರತದ ಸ್ವಾತಂತ್ರ್ಯ, ಸಾರ್ವಭೌಮತ್ವಗಳನ್ನು ಎತ್ತಿಹಿಡಿಯುವುದಾಗಿ ಘೋಷಿಸಿದರು. ಆದರೆ ಬುಷ್ ಸರಕಾರ ಅವೆಲ್ಲವನ್ನು ಕಡೆಗಣಿಸಿ, ತನಗೆ ಬೇಕಾದ ರೀತಿಯಲ್ಲಿ ಒಪ್ಪಂದಕ್ಕೆ ಸಹಿಹಾಕಿಸಿಕೊಳ್ಳಲು ನೋಡುತ್ತಿದೆ. ಆಮಿಷಗಳಿಗೆ ಒತ್ತಡಗಳಿಗೆ ಮಣಿದು ಒಪ್ಪಂದ ಮಾಡಿಕೊಂಡರೆ ಈ ಸರಕಾರ ಅಧಿಕಾರದಲ್ಲಿರಲು ನಾಲಾಯಕ್ಕಾಗುತ್ತದೆ. ಎಡಪಕ್ಷಗಳು ಅಂಥ ಸರಕಾರಕ್ಕೆ ಬೆಂಬಲ ನೀಡುವುದರಲ್ಲಿ ಅರ್ಥವಿಲ್ಲ. ಒಂದು ದೃಷ್ಟಿಯಿಂದ ನೋಡಿದರೆ ಮತೀಯವಾದಿ ಶಕ್ತಿಗಳಿಗಿಂತಲೂ ಅಮೆರಿಕಾದೊಂದಿಗೆ ಶಾಮೀಲಾಗುವುದರ ಅಪಾಯವೇ ಹೆಚ್ಚು. ಅದು ನಮ್ಮ ಸ್ವಾತಂತ್ರ್ಯವನ್ನೇ ಹರಣಮಾಡುವಂಥದ್ದು. ಇದನ್ನು ಕುರಿತು ಜನ ಜಾಗೃತಿ ಉಂಟುಮಾಡುವುದು ಅಗತ್ಯ. ನ್ಯೂಕ್ಲಿಯರ್ ಒಪ್ಪಂದದಲ್ಲಿ ಆಕ್ಷೇಪಾರ್ಹವಾದ ಅಂಶಗಳನ್ನು ಕುರಿತು ಇಲ್ಲಿ ಹೇಳುವುದು ಅನಗತ್ಯ. ರಾಜಕೀಯ ದೃಷ್ಟಿಯಿಂದ ಅವಲೋಕಿಸಿ, ಈ ಹೀನಾಯ ೧೨೩ ಒಪ್ಪಂದವನ್ನು ತಿರಸ್ಕರಿಸುವುದು ಒಳಿತು. ದೃಢವಾದ ನಿಲುವಿನಿಂದ ಎಡಪಕ್ಷಗಳು ಈ ನಿಟ್ಟಿನಲ್ಲಿ ಸರಕಾರದ ಮೇಲೆ ಒತ್ತಡ ತರಬೇಕು, ಇದು ಅವುಗಳ ಜವಾಬುದಾರಿಯೂ ಆಗಿದೆ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ೧ನೇ ಮೇನ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಎರಡು ಗಜಲುಗಳು

ಜೀವನಕ್ಕಿಂತ ಉದ್ದವಾದ ನಗರದ ಈ ರಸ್ತೆಗಳಲ್ಲಿ
ಪಾರ್ಶ್ವಪೀಡಿತ ಕಾಲೆಳೆಯುತ ನಿತ್ಯ ಕುಂಟುತ ಸಾಗುವೆ

ರಸ್ತೆಯ ಮೇಲೆ ರಸ್ತೆಗಳು, ಮುಖವಾಡ ಧರಿಸಿದ ಮುಖಗಳು
ಪರಿಚಿತ ಗಲ್ಲಿಗಳಲ್ಲಿ ನಾ ಅಪರಿಚಿತ ಜೀವನ ಹುಡುಕುತ ಸಾಗುವೆ

ಮೇಲೆದ್ದ ಮಹಲುಗಳು, ಕುಸಿದು ಕುಂತ ಜೋಪಡಿಪಟ್ಟಿಗಳು
ಪಕ್ಕ ತಿರುಗಿದ ಕಾಲರಸ್ತೆಯಲ್ಲಿ ನಾ ಕಾಲು ಹಾಕುತ ಸಾಗುವೆ

ಸಾಲುಗಟ್ಟಿ ಓಡುವ ವಾಹನಗಳು, ಆತುರದಲಿ ತುಳಿಯುವ ಜನಗಳು
ದ್ವಂದ್ವ, ಅಸಂಗತಗಳೆಬ್ಬಿಸಿದ ಧೂಳಿನಲಿ ಕಳೆದ ನನ್ನನು ನಾ ಹುಡುಕುತ ಸಾಗುವೆ

ಕೂತಲ್ಲಿ ಕೂಡಲಾಗದೆ, ನಿಂತಲ್ಲಿ ನಿಲ್ಲದೆ, ಸದಾ ಏನೋ ಧ್ಯಾನಿಸುತ್ತ
ನಿವೃತ್ತಿ ಜೀವನ ಹೊತ್ತು ನಿತ್ಯಜೀವನೋತ್ಪತ್ತಿ ಅರೆಸುತ ಸಾಗುವೆ

ರಸ್ತೆಯಲ್ಲಿ ಹರಡಿರುವ ಜೀವನ ಕಾವ್ಯ ವಸ್ತುವನು ಆರಿಸುತ
ಚಿಂದಿ ಆರಿಸುವ ಹುಡುಗನಂತೆ ಹೃದಯ ಬುಟ್ಟಿಗೆ ತುಂಬುತ ಸಾಗುವೆ

ನಿಷ್ಠೆ, ವಿಶ್ವಾಸದ ನಾಯಿಯೊಂದು ನನ್ನ ಹಿಂಬಾಲಿಸಿ ಬರುತ್ತಿರಲು
ಅದರ ಬೆನ್ನು ಸವರುತ್ತ, ಮಾತಾಡುತ ನಿಜ ನಿವಾಸ ಹುಡುಕುತ ಸಾಗುವೆ

ಜೀವನಕ್ಕಿಂತ ಉದ್ದವಾದ ನಗರದ ಈ ರಸ್ತೆಗಳಲ್ಲಿ
ಪಾರ್ಶ್ವ ಪೀಡಿತ ಕಾಲೆಳೆಯುತ ನಿತ್ಯ ಕುಂಟುತ ಸಾಗುವೆ





ಹೇಳು ಮಗುವಿನಂಥ ಮುಗ್ಧ ಮನವೇ, ದಗ್ಧಗೊಂಡ ಮನವೇ
ದೊಡ್ಡವರ ಈ ಜಗ ಕಂಡು ದೊಡ್ಡವನಾಗಲು ಹೆದರಿದೆ ಏನು ?

ನೀನೊಬ್ಬನಲ್ಲ ಬಿಡು, ದಮನಕ್ಕೊಳಗಾದವನು ಈ ಜಗದಲಿ
ತುಳಿತ ದಾರಿಯಲಿ ಧೂಳಾದವರನು ನೀನು ಕಾಣದೆ ಹೋದೆ ಏನು ?

ಉಳ್ಳವರು ಕಟ್ಟಬಹುದು, ಪ್ರೇಮಮಹಲು, ತಾಜಮಹಲು
ಮನವೇ ಪ್ರೇಮಮಂದಿರವೆಂಬುದು ನೀ ಮರೆತುಹೋದೆ ಏನು ?

ಮುಳುಗಿದಲ್ಲಿ ಮತ್ತೆ ತೇಲು, ಸುಳಿ ದಡ ಮಾಡಿಕೊಂಡು ಏಳು
ಕಳೆದುಕೊಂಡಲ್ಲಿ ಮತ್ತೆ ಹುಡುಕುವ ಛಲ ತೊರೆದುಹೋದೆ ಏನು ?

ಹೇಳು, ಮಗುವಿನಂಥ ಮುಗ್ಧ ಮನವೇ, ದಗ್ಧಗೊಂಡ ಮನವೇ
ದೊಡ್ಡವರ ಈ ಜಗಕಂಡು ದೊಡ್ಡವನಾಗಲು ಹೆದರಿದೆ ಏನು ?

ಜಂಬಣ್ಣ ಅಮರಚಿಂತ
೮-೧೧-(೮)/೭೯೬, ವಿದ್ಯಾನಗರ, ರಾಯಚೂರು - ೫೮೪ ೧೨೩



## ಅಮರನಾಥ ದರ್ಶನಪಥ

*ಶ್ರೀಪಾದ್ ಪೂಜಾರ್*

**ಪುಟ : xii + ೧೧೬** **ಬೆಲೆ : ರೂ. ೬೦**

**ಕಾಮಧೇನು ಪುಸ್ತಕ ಭವನ,** ಶಾಸಕರ ಭವನದ ಆವರಣ, ಬೆಂಗಳೂರು - ೫೬೦ ೦೦೧

ಅಮರನಾಥಕ್ಕೆ ಯಾತ್ರೆ ಹೊರಡಲು ಅನಿರೀಕ್ಷಿತವಾಗಿ ಮೂಡಿದ ಪ್ರೇರಣೆಯಿಂದ ಮೊದಲ್ಗೊಂಡು ಆರಂಭ ವಾಗುವ ನಿರೂಪಣೆ ಪ್ರಕೃತಿಯ ಸೊಬಗಿನಲ್ಲಿ ಮಿಂದ, ಪುಳಕಿತಗೊಂಡ ಮನಸ್ಸಿನ ಭಾವನೆಗಳನ್ನೆಲ್ಲ ಹಿಡಿದಿಡುವಲ್ಲಿ ಸಫಲವಾಗಿದೆ. ಏರೋಪ್ಲೇನಿನಲ್ಲಿ ಮೊದಲ ಪಯಣ, ದೂರ ಪ್ರಯಾಣದ ಹಿಂಜರಿಕೆಗಳು, ದೋಣಿಯ ವಿಹಾರ, ಕುದುರೆ ಸವಾರಿ, ರೋಪ್‌ವೇ ಅನುಭವ, ಕಾಶ್ಮೀರದ ಗುಲ್‌ಮಾರ್ಗ್, ಶ್ರೀನಗರದ ದಾಲ್ ಸರೋವರ, ಹಿಮಾವೃತ ಪರ್ವತಗಳು, ವಿಸ್ಮಯದ ಗುಹೆಗಳು, ಹಸಿರು ಹುಲ್ಲುಗಾವಲುಗಳು ಇವೆಲ್ಲವೂ ಕಾಣಸಿಗುವ ಒಂದು ಸುಂದರ ಚಿತ್ರದಂತೆ ಪುಸ್ತಕ ತೋರುತ್ತದೆ.

ಪಯಣದಲ್ಲಿ ಭೆಟ್ಟಿಯಾದ, ಸಹಕರಿಸಿದ, ಜೊತೆಯಾದ ಜನರು, ಅವರ ನಂಬುಗೆ, ಅಭಿಪ್ರಾಯಗಳು, ಸಂತಸ, ನಿರಾಸೆಗಳಲ್ಲದೆ ಯುದ್ಧಭೀತಿಯಿಂದ ತತ್ತರಿಸಿದ ಪ್ರಕೃತಿಯ ಸೊಬಗನ್ನೂ ಇಲ್ಲಿ ಕಾಣಬಹುದು.

ಭಾಷೆ ಸ್ವಗತಕ್ಕೆ ಬರೆದುಕೊಂಡಂತೆ ಸರಳವಾಗಿದೆ. ಓದುಗರನ್ನೂ ಯಾತ್ರೆಗೆ ಪ್ರೇರೇಪಿಸುವ ಚೊಕ್ಕ ಪುಸ್ತಕ.





## ಮೇರಿಯ ಕತೆ

*ಶಾಂತಾರಾಮ ಸೋಮಯಾಜಿ*

**ಪುಟ : ೧೬೦** **ಬೆಲೆ : ರೂ. ೭೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೪೯, ಬೆಂಗಳೂರು - ೧

ಬಾಳಿನ ಪಯಣದಲ್ಲಿ ಹೊಂಗನಸಿನ ಕಣಿವೆಗಳನ್ನು ಏರುತ್ತಿರುವಾಗಲೇ ಕ್ಯಾನ್ಸರಿಗೆ ತತ್ತರಿಸಿದ ಸೋಮಯಾಜಿ ಯವರ ಪತ್ನಿ ಮೇರಿಯ ಕತೆ.

ಐ.ಐ.ಟಿ.ಯಲ್ಲಿನ ಕೆಲಸ, ಪ್ರೇಮ ವಿವಾಹ, ಅಮೆರಿಕೆಯಲ್ಲಿನ ಜೀವನ, ಮಕ್ಕಳು ಇವುಗಳೊಂದಿಗೆ ಪ್ರೀತಿಯ ಪತ್ನಿಗೆ ಬಂದ ಕ್ಯಾನ್ಸರ್ ಬರಸಿಡಿಲು. ಕಾಯಿಲೆಯನ್ನು ಒಪ್ಪದ ಮನಸ್ಸು, ಭಯ, ಉದ್ವಿಗ್ನತೆ, ನೋವು, ಕ್ಯಾನ್ಸರಿನೊಂದಿಗೆ ರಾಜಿ ಮಾಡಿಕೊಳ್ಳಬೇಕಾದ ಅನಿವಾರ್ಯತೆ, ಗೊಂದಲ, ಕೆಲಸದ ಒತ್ತಡ, ಸಂಸಾರದ ತಲ್ಲಣಗಳು ಎಲ್ಲವೂ ಇಲ್ಲಿ ಹೃದಯಸ್ಪರ್ಶಿಯಾಗಿ ಚಿತ್ರಣಗೊಂಡಿವೆ. ಬದುಕಿನ ಹೋರಾಟಗಳು, ಸೋಲು, ಗೆಲುವು ಇವುಗಳ ಕುರಿತು ಓದುಗರನ್ನು ಗಾಢ ಚಿಂತನೆಗೆ ಎಳೆದೊಯ್ಯುವ ಸತ್ಯ ಕತೆ.

ಕಹಿನೆನಪುಗಳನ್ನು ಹೆಕ್ಕಿ ಪೋಣಿಸಿರುವುದಲ್ಲದೆ ಸೋಮಯಾಜಿಯವರು ಮೇರಿಯ ಪತಿಯಾಗಿ, ಮಕ್ಕಳ ತಂದೆಯಾಗಿ ತಮ್ಮ ಪಾತ್ರ, ತಪ್ಪುಗಳು, ಬದುಕು ಕಲಿಸಿದ ಪಾಠವನ್ನು ಅನುಮಾನ, ಅಂಜಿಕೆಗಳಿಂದಲೇ ನಿರೂಪಿಸಿದ್ದಾರೆ. ಇಲ್ಲಿಯ ಪ್ರತಿಯೊಂದು ಸಾಲೂ ಅನುಭವಿಸಿದ್ದು, ಬರೆದದ್ದಲ್ಲ, ಆದದ್ದು.

## ವರ್ತಮಾನ

*ಸಂ. : ವಿಜಯ ಅಮೃತರಾಜ್, ಶಂ. ನಿಂ. ತಿಮ್ಮನಗೌಡ್ರ*

**ಪುಟ : xvi + ೧೯೨** **ಬೆಲೆ : ರೂ. ೧೩೦**

**ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ,** ಸರಸ್ವತಿ ಗೋದಾಮ, ಗುಲಬರ್ಗಾ - ೫೮೫ ೧೦೧



'ತಳಮಳ' ವಾರಪತ್ರಿಕೆಯಲ್ಲಿ 'ಪ್ರಚಲಿತ' ಎಂಬ ಶೀರ್ಷಿಕೆ ಯಡಿಯಲ್ಲಿ ಪ್ರಕಟವಾದ ಅಲ್ಲಮಪ್ರಭು ಬೆಟ್ಟದೂರು ಅವರ ಅಂಕಣ ಬರಹಗಳ ಸಂಗ್ರಹ.

ಬಸವಣ್ಣನ ವೈಭವೀಕರಣವೂ ಸರಿಯಲ್ಲ; ಉಪೇಕ್ಷಿಸುವುದೂ ಸಲ್ಲ. ಗ್ರಾಮೀಣ ಕೃಪಾಂಕಕ್ಕೆ ಪರ್ಯಾಯ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಮತ್ತು ವಿಕೇಂದ್ರೀಕರಣ, ವಾಸ್ತು ಅಂದರೆ ಏನು ? ಪತ್ರಿಕೆಗಳು ಮತ್ತು ಜನಸಾಮಾನ್ಯರು – ಹೀಗೆ ಅನೇಕ ಸಮಕಾಲೀನ ಚರ್ಚೆಗಳ ಕುರಿತು ಅರವತ್ತು ಲೇಖನಗಳು ಇವೆ.

ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಮೌಲ್ಯಗಳಿಂದ ಕೂಡಿದ ವಿಚಾರಧಾರೆ. ಎಲ್ಲಿಯೂ ವ್ಯಂಗ್ಯ, ಪಾಂಡಿತ್ಯ ಪ್ರದರ್ಶನ ಇಲ್ಲ. ಸಾಮಾನ್ಯ ಜನರಿಗೆ ಅರ್ಥವಾಗುವಂಥ ಸರಳ ಭಾಷೆ ಮತ್ತು ಶೈಲಿಯಲ್ಲಿ ಲೇಖನಗಳು ಮೂಡಿಬಂದಿವೆ.

## ಪರಂಪರೆ : ಪರಿವರ್ತನೆ

*ಮಹೇಶ ತಿಪ್ಪಶೆಟ್ಟಿ*

**ಪುಟ : viii + ೧೬೬** **ಬೆಲೆ : ರೂ. ೧೦೦**

**ದಾಳಿಂಬ ಪ್ರಕಾಶನ,** ಹುನಗುಂದ - ೫೮೭ ೧೧೮, ಬಾಗಲಕೋಟೆ ಜಿಲ್ಲೆ

ಸಂಶೋಧನೆಗೆ ಮಾರ್ಗಸೂಚಿ ಆಗುವಂಥ ಲೇಖನಗಳ ಸಂಗ್ರಹ. ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಲಿಂಗಾಯತ ಅಥವಾ ವೀರಶೈವ ಚಿಂತನೆಯ ಲೇಖನಗಳು, ಬಸವಣ್ಣನನ್ನು ವೈಭವೀಕರಿಸದೆ ಮಾನವ ನೆಲೆಯಲ್ಲಿ ಆ ಕಾಲದ ಚಿಂತನೆಗಳನ್ನು ಅವಲೋಕಿಸುವ ಪ್ರಯತ್ನ ಇಲ್ಲಿ ನಡೆದಿದೆ. ಲಿಂಗಾಯತದ ವಿರಕ್ತ ಮಠಗಳಲ್ಲಿ ಹಲವು ಗೊಂದಲಗಳಿವೆ. ಈ ಮಠಗಳ ಚಾರಿತ್ರಿಕ ಸಂದರ್ಭಗಳನ್ನು ಇಲ್ಲಿನ ಹಲವು ಲೇಖನಗಳಲ್ಲಿ ದಾಖಲಿಸಲಾಗಿದೆ. ಬಾಗಲಕೋಟೆ ಜಿಲ್ಲೆಯ ಧಾರ್ಮಿಕ ಕ್ಷೇತ್ರ, ಪ್ರಾಚ್ಯ ವಸ್ತುಸಂಶೋಧನಾ ಇಲಾಖೆ ಮತ್ತು ಪ್ರವಾಸೋದ್ಯಮ ಇಲಾಖೆಗಳು ಅಲಕ್ಷಿಸಿದ ಮಹಾಕೂಟದ ಬಗ್ಗೆ ಒಂದು ಲೇಖನ, ಜೊತೆಗೆ ಕೆಲವು ಪುಸ್ತಕಗಳ ವಿಮರ್ಶೆಗಳೂ ಇವೆ.



## ಕುಮಾರವ್ಯಾಸ - ಪುನರ್‌ಪರಿಶೀಲನೆ

*ಚೆನ್ನಬಸವಪ್ಪ ಬೆಟ್ಟದೂರು*

**ಪುಟ : xvi + ೧೦೪** **ಬೆಲೆ : ರೂ. ೬೦**

**ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ,** ಸರಸ್ವತಿ ಗೋದಾಮ, ಗುಲಬರ್ಗಾ - ೫೮೫ ೧೦೧

ಸಂಶೋಧನೆ, ವಿಮರ್ಶೆ, ತೌಲನಿಕ ಅಧ್ಯಯನದಿಂದ ಕೂಡಿರುವ ವೈಚಾರಿಕ ಕೃತಿ. ಕುಮಾರವ್ಯಾಸ ಬಸವಯುಗಕ್ಕೆ ಸೇರಿದವನೆಂದು ಪ್ರತಿಪಾದಿಸುವುದು ಇದರ ಉದ್ದೇಶ.

'ಕುಮಾರವ್ಯಾಸ – ಪುನರ್‌ಪರಿಶೀಲನೆ' ಕವಿ-ಕಾವ್ಯ ಕುರಿತು ಈಗಾಗಲೇ ಪಂ. ಸೂಗವೀರ ಶರ್ಮ, ಡಾ|| ಆರ್. ಸಿ. ಹಿರೇಮಠ, ಬಿ. ಮಹಾದೇವಪ್ಪ ಮುಂತಾದವರು ಮಾಡಿದ ಸಂಶೋಧನೆಗಳನ್ನು ಆಧರಿಸಿ ರಚಿಸಿರುವ ಕೃತಿ ಇದು. ಪುಸ್ತಕದ ಕಡೆಯಲ್ಲಿ ಕನ್ನಡ ನುಡಿಯ ಸಂಪಾದಕರಾಗಿದ್ದ ಶ್ರೀ ಜಿ. ಎಂ. ಶ್ರೀಕಂಠಯ್ಯನವರಿಗೆ ಪಂ. ಡಿ. ಎಂ. ಸೂಗವೀರ ಶರ್ಮರು ಬರೆದ ಪತ್ರವಿದೆ. ಈ ಕೃತಿ ರಚನೆಗೆ ಸಹಾಯ ಮಾಡಿದ ಆಧಾರ ಗ್ರಂಥಗಳ ಪಟ್ಟಿ ಇದೆ.



## ಬೆಳಕಿನ ಹಾಡು

*ಸಂಪಾದಕ : ಎ. ಎಸ್. ಮಕಾನದಾರ*

**ಪುಟ : xi + ೫೩** **ಬೆಲೆ : ರೂ. ೫೦**

**ನಿರಂತರ ಪ್ರಕಾಶನ,** 'ಮಾಸೂಮ್-ಮಂಜಿಲ್', ಟೆಕ್ಕೇದ ಓಣಿ, ಗಜೇಂದ್ರಗಡ - ೫೮೨ ೧೧೪, ಗದಗ ಜಿಲ್ಲೆ

ಸೌಹಾರ್ದತೆಯ ಆಶಯವನ್ನು ಹೊತ್ತ ಕವನಗಳ ಸಂಗ್ರಹ. ವಿವಿಧ ಕವಿಗಳ ನಲವತ್ತೈದು ಕವನಗಳು ಇಲ್ಲಿವೆ. ಧಾರ್ಮಿಕ ಕೇಂದ್ರಗಳು ವಿವಾದದ ಸುಳಿಗೆ ಸಿಲುಕುತ್ತಿವೆ. ಜನರ ನೆಮ್ಮದಿಯನ್ನು ಕದಡುವಂಥ ಕಾರ್ಯಗಳು ಹೆಚ್ಚುತ್ತಿವೆ. ಈ ಸಂದರ್ಭದಲ್ಲಿ ಹಲವು ಸಮಾನ ಮನಸ್ಕ ಚಿಂತನೆಗಳನ್ನು ಒಂದೆಡೆಗೆ ತರುವ ಪ್ರಯತ್ನವನ್ನಿಲ್ಲಿ ಎ. ಎಸ್. ಮಕಾನದಾರ ಮಾಡಿದ್ದಾರೆ. ವಿಶ್ವಭ್ರಾತೃತ್ವ ಕುರಿತು ಕರ್ನಾಟಕದ ವಿವಿಧ ಕವಿಗಳ ಅಭಿಪ್ರಾಯ, ಆಶಯ ಏನೆಂದು ತಿಳಿಸುವ ಕವನಗಳ ಮಾಲೆ ಇದು.

– **ಸಹನ**, ನಂ. ೩, 'ಕೆರಮನೆ' ಅಪಾರ್ಟ್‌ಮೆಂಟ್ಸ್
'ದೇವರಕೆರೆ' ಎಕ್ಸ್‌ಟೆನ್ಷನ್, ಇಸ್ರೋ ಲೇಔಟ್, ಬೆಂಗಳೂರು - ೫೬೦ ೦೭೮

# ತಾಯಿ

ಎಲ್ಲಿಂದಲೋ ಒಂದು ದನಿ ಮತ್ತೆ ಮತ್ತೆ ನನ್ನ ಕಿವಿಗೆ ಅಪ್ಪಳಿಸತೊಡಗಿತು. ''ಸಾರ್, ನಿನ್ನೆ ಅಮ್ಮ ನಿಮ್ಮನ್ನು ನೋಡಲೆಂದು ಬಂದಿದ್ದರಂತಲ್ಲ. ನನ್ನ ಕುರಿತು ತುಂಬಾ ಪುರಾಣ ಮಾಡಿರಬೇಕು ಅಲ್ಲ? ನನಗೆಲ್ಲವೂ ಗೊತ್ತು ಸಾರ್. ಅವಳು ಏನೇನೆಲ್ಲಾ ಕಂಪ್ಲೇಂಟ್ ಮಾಡಿ ಹೋಗಿದ್ದಾಳೆ ಎಂಬುದು. ಆದರೆ ನೀವೇ ಹೇಳಿ ಸಾರ್, ನಾನೇನು ಚಿಕ್ಕ ಮಗುವಾ ? ನನ್ನ ಒಳ್ಳೆಯದು, ಕೆಟ್ಟದು ನನಗೆ ಗೊತ್ತಿಲ್ಲವ ? ಅದನ್ನು ಕೂಡ ಇಷ್ಟು ದೊಡ್ಡವಳಾದ ನನಗೆ ಅಮ್ಮ ಹೇಳಿಕೊಡಬೇಕಾ ? ಇದೆಲ್ಲಾ ಯಾಕೆ ಇವಳಿಗೆ ಅರ್ಥವಾಗೋಲ್ಲ?'' ದನಿ ಯಾರದು ? ಸಂಧ್ಯಳದೇ ? ಅರುಂಧತಿಯದೇ ? ಇಲ್ಲ ಇನ್ನಾರದೋ ಮಗಳ ದನಿಯೇ ! ಗುರುತು ಹಿಡಿಯಲು ಪ್ರಯತ್ನಿಸಿದೆ. ಸಾಧ್ಯವಾಗಲಿಲ್ಲ. ಪುಟ್ಟ ಬಾಗಿಲನ್ನು ತಳ್ಳಿ ಸಂಧ್ಯ ಹೊರಬೀಳುವುದನ್ನು ನೋಡುತ್ತ ಸುಮ್ಮನೆ ಕುಳಿತೆ.

'ಎಕ್ಸ್‌ಕ್ಯೂಸ್ ಮೀ ಸರ್' ಹೆಣ್ಣುದನಿ ಕೇಳಿ ತಲೆ ಎತ್ತಿದೆ. ಅವಳು ಕೌಂಟರಿನಲ್ಲಿ ನಿಂತಿದ್ದಳು. ಮಧ್ಯವಯಸ್ಸು ದಾಟಿದ, ನೋಡಲು ಸ್ಫುರದ್ರೂಪಿಯಾದ ಹೆಂಗಸು. ''ಬನ್ನಿ, ಆದರೆ ಆಫೀಸು ಮುಗೀತಲ್ಲ, ಏನಿದ್ದರೂ ನಾಳೆಯೇ ಆಯ್ತು. ನಾಳೆ ಹತ್ತು ಗಂಟೆಗೆ'' ಎಂದೆ. ''ನನಗೆ ನಿಮ್ಮೊಡನೆಯೇ ಮಾತಾಡುವುದಿದೆ ಸರ್. ನಿಮ್ಮನ್ನೇ ನೋಡಲೆಂದು ಬಂದೆ'' ಅಂದಳು. ''ಹಾಗಾದರೆ ಬನ್ನಿ. ದಯವಿಟ್ಟು ಬನ್ನಿ'' ಎಂದೆ.

ಇನ್ನೊಂದರ್ಧ ಗಂಟೆಯ ಕೆಲಸ ಬಾಕಿ ಇತ್ತು. ಇವಳು ಬರದಿದ್ದರೆ ಅದಷ್ಟನ್ನು ಮಾಡಿ ಮುಗಿಸಬಹುದಿತ್ತು. ಈಗ ಅದೆಲ್ಲ ಸಾಧ್ಯವಿಲ್ಲ. ಅವಳು ಕೌಂಟರಿನ ಉದ್ದಕ್ಕೆ ಹೋದುದೂ ಒಂದು ತುದಿಯಲ್ಲಿ ನಿಂತುದೂ ಪುಟ್ಟ ತಳ್ಳುಬಾಗಿಲನ್ನು ದೂಡಿ ಒಳಗೆ ಬಂದುದೂ ಟೇಬಲ್ಲಿನ ಎದುರು ಬಂದು ನಿಂತುದೂ ಎಲ್ಲವನ್ನೂ ಅಂದಾಜಿನಿಂದಲೇ ಗಮನಿಸಿದೆ. ''ಕುಳಿತುಕೊಳ್ಳಿ. ಒಂದ್ನಿಮಿಷ. ಇದಿಷ್ಟನ್ನು ಮುಗಿಸಿಬಿಡ್ತೇನೆ'' ಎಂದು ಎದುರುಗಡೆಯ ಚೇರು ತೋರಿಸಿದೆ. ''ಆಗಲಿ ಸರ್. ನನಗೇನೂ ಅವಸರವಿಲ್ಲ'' ಎನ್ನುತ್ತ ಕುಳಿತುಕೊಂಡಳು.

ಎರಡು ಮೂರು ನಿಮಿಷ ನಮ್ಮಿಬ್ಬರ ಮಧ್ಯೆ ಸದ್ದಿಲ್ಲದೆ ಕಳೆಯಿತು. ಲೆಡ್ಜರು ಪುಸ್ತಕ ಪೆನ್ಸಿಲ್ಲು ಪೆನ್ನುಗಳನ್ನೆಲ್ಲ ಪಕ್ಕಕ್ಕೆ ಸರಿಸುತ್ತ ''ಹಾಂ ಈಗ ಹೇಳಿ'' ಎಂದು ತಲೆಯೆತ್ತಿ ಅವಳ ಮೋರೆ ದಿಟ್ಟಿಸಿದೆ. ಎಲ್ಲೋ ನೋಡಿದ ಮೋರೆ ಅನ್ನಿಸಿತು. ನೆನಪನ್ನು ಕೆದರಿದೆ. ಊಂಹೂಂ. ನೆನಪಾಗುತ್ತಿಲ್ಲ. ಪೋಸ್ಟಾಫೀಸು ಎಂದ ಮೇಲೆ ನಿತ್ಯ ನೂರಾರು ಮಂದಿಯನ್ನು ನೋಡುತ್ತಿರುತ್ತೇವಲ್ಲ. ಅವರಲ್ಲಿ ಹಲವು ಮೋರೆಗಳನ್ನು ಮತ್ತೆ ಮತ್ತೆ ನೋಡುತ್ತಿರುತ್ತೇವಾದ್ದರಿಂದ ಅವು ಮನಸ್ಸಿನಲ್ಲಿ ಅಚ್ಚೊತ್ತಿದಂತೆ ಇದ್ದುಬಿಡುತ್ತವೆ. ಅಂಥದೊಂದು ಮೋರೆಯಿದ್ದಿರಲು ಸಾಕು. ಅವಳು ಮುಗುಳುನಕ್ಕಳು. ಆತ್ಮೀಯವಾದ ಆ ನಗುವನ್ನು ಕೂಡ ಹಿಂದೆ, ಎಷ್ಟೋ ಬಾರಿ ಸ್ವೀಕರಿಸಿದಂತಿದೆ. ಕೈಯಲ್ಲಿ ಕೀಗೊಂಚಲು ಹಿಡಿದು ವಾಚಮನ್ ಬಂದ. ''ಪುಟ್ಟಪ್ಪ ಒಂದ್ನಿಮಿಷ ಇರು'' ಎಂದೆ. ''ಆಗ್ಲಿ ಸೋಮಿ, ನಿಧಾನಕ್ಕೆ ಆಗ್ಲಿ'' ಅಂದ. ''ಹಾಂ, ಈಗ ಹೇಳಿ ಮೇಡಂ. ನನ್ನಿಂದ ಏನಾಗಬೇಕಿತ್ತು?'' ಕೇಳಿದೆ, ಅವಳ ಮೋರೆಯನ್ನೇ ದಿಟ್ಟಿಸುತ್ತ. ''ಸರ್, ನನ್ನ ಗುರುತು ಸಿಗಲಿಲ್ಲವಾ ?'' ಅವಳು ನನ್ನ ಮೋರೆ ದಿಟ್ಟಿಸುತ್ತ ಇನ್ನೊಮ್ಮೆ ಮೃದುವಾಗಿ ನಕ್ಕಳು. ನಾನೂ ನಗುತ್ತ ''ಮೊದಲ ಸಲ ನೋಡಿದಾಗಲೇ ನಿಮ್ಮನ್ನು ಎಲ್ಲೋ ನೋಡಿದ್ದೇನೆ ಅನ್ನಿಸಿತು. ಪರಿಚಿತ ಮೋರೆ ಎಂದೂ ಅನ್ನಿಸಿತು. ಆಗಿನಿಂದಲೂ ನನ್ನ ನೆನಪನ್ನು ಕೆದಕುತ್ತಲೇ ಇದ್ದೇನೆ'' ಎಂದೆ. ''ನಾನು ಸಂಧ್ಯ'' ಅವಳು ಮಧ್ಯೆಯೇ ಬಾಯಿ ಹಾಕಿದಳು. ''ಎಸ್. ಆರ್. ಸಂಧ್ಯ. ಬ್ರಿಗೇಡ್ ರೋಡ್ ಆಫೀಸಿನಲ್ಲಿ ನಾವೆಲ್ಲ ಒಟ್ಟಿಗೇ ಇದ್ದೆವಲ್ಲ ಸರ್. ನಾನು, ನೀವು, ಉಮಾ, ಶಕುಂತಲಾ, ಪ್ರಿಯದರ್ಶಿನಿ... ಆ ಮಾತಿಗೆ ತುಂಬಾ ವರ್ಷಗಳಾದುವು ಸರ್. ಮಿಸೆಸ್ ರಾಜಮ್ಮ ಪೋಸ್ಟ್ ಮಿಸ್ಟ್ರೆಸ್ ಆಗಿದ್ದರು ಆಗ.'' ಅವಳು ಮತ್ತೆ ನನ್ನ ಮೋರೆ ದಿಟ್ಟಿಸಿದಳು. ''ಓ ! ಹೌದಲ್ಲ. ಎಷ್ಟೆಲ್ಲಾ ವರ್ಷಗಳಾದವು ಸಂಧ್ಯ ನಿಮ್ಮನ್ನು ನೋಡಿ ! ಈ ದೀರ್ಘ ಅವಧಿಯಲ್ಲಿ ನೀವು ಹೆಚ್ಚೇನೂ ಬಡವಾಗಿಲ್ಲ. ವಯಸ್ಸು ನಿಮ್ಮ ಮೇಲೆ ಏನೇನೂ ಪರಿಣಾಮ ಮಾಡಲು ಸಾಧ್ಯವಾಗಿಲ್ಲ. ಹೌದೂ, ಇಷ್ಟೆಲ್ಲಾ ವರ್ಷಗಳ ಕಾಲ ಎಲ್ಲಿದ್ದಿರಿ ? ಈಗಲೂ ಇದೇ ಡಿಪಾರ್ಟ್‌ಮೆಂಟಿನಲ್ಲೇ ಇದ್ದೀರಾ ? ಇದೇ ಸಿಟಿಯಲ್ಲಿ? ಇರಲಿಕ್ಕಿಲ್ಲ ಅನ್ನಿಸುತ್ತದೆ ಅಲ್ಲ? ನಿಮ್ಮ ಕುರಿತು ಹೇಳಿ ಸಂಧ್ಯ. ನಿಮ್ಮ ಸ್ವಂತದ ಕುರಿತು, ಯಜಮಾನರು, ಮಕ್ಕಳು, ಸಂಸಾರ, ಮನೆ...'' ನಾನು ಉದ್ವೇಗಕ್ಕೊಳಗಾದವನಂತೆ ಒಂದೇ ಉಸುರಿಗೆ ಕೇಳಿಬಿಟ್ಟೆ.

ಅವಳು ಒಮ್ಮೆಲೇ ಸುಸ್ತಾದವಳಂತೆ ಕಂಡಳು. ಟೇಬಲ್ಲಿನ ಮೇಲಿಟ್ಟ ಅವಳ ಮುಂಗೈ ಮೃದುವಾಗಿ ಕಂಪಿಸುತ್ತಿರುವುದು ನನ್ನ ಗಮನಕ್ಕೆ ಬಂತು. ಉದ್ವೇಗದಿಂದಲೋ ಇಲ್ಲ ನನ್ನ ಪ್ರಶ್ನೆ ಮಾಡಿದ ಪರಿಣಾಮದಿಂದಲೋ ತಿಳಿಯಲಿಲ್ಲ. ಬಹುಶಃ ನನ್ನ ಪ್ರಶ್ನೆಗಳು ಅವಳಿಗಿಷ್ಟವಾಗಲಿಲ್ಲವೇನೋ. ಗಂಡ ಮಕ್ಕಳ ಕುರಿತು ನಾನು ಕೇಳಬಾರದಿತ್ತೇನೋ. ನನ್ನ ಯಾವ ಪ್ರಶ್ನೆಗೂ ಏನೊಂದೂ ಹೇಳದೆ ಅವಳು ಸುಮ್ಮನೆ ಕುಳಿತಳು. ನಮ್ಮ ಮಧ್ಯೆ ಹೆಪ್ಪುಗಟ್ಟುತ್ತಿದ್ದ ಮೌನವನ್ನು ತಿಳಿಯಾಗಿಸಲು ''ಪುಟ್ಟಪ್ಪಾ ಹೋಗಿ ಕಾಫಿಗೆ ಹೇಳಿ ಬಾ'' ಎಂದೆ. ಆತ ಬೆನ್ನು ತಿರುಗಿಸುತ್ತಿದ್ದಾಗ ಥಟ್ಟನೆ ನೆನಪಾಯ್ತು, ''ಸಂಧ್ಯ ನೀವು ಕಾಫಿ ಕುಡಿಯೋಲ್ಲ ಅಲ್ಲ? ನಿಮಗೆ ಹಾಲು ತರಲು ಹೇಳಲಾ ?'' ಕೇಳಿದೆ. ''ಬೇಡ ಸರ್. ಕಾಫಿಯೇ ಆದೀತು'' ಎಂದಳು ಸಂಭ್ರಮಪಡುತ್ತ. ಅವಳಿಗೆ ಖುಷಿಯಾಗಿತ್ತು. ಅದರ ಕಾರಣವನ್ನು ಊಹಿಸಲು ನನಗೆ ಕಷ್ಟವಾಗಲಿಲ್ಲ. ಅಂತಹ ಪುಟ್ಟ ಸಂಗತಿಯನ್ನೂ ಕೂಡ ಇಷ್ಟೆಲ್ಲಾ ವರ್ಷಗಳ ನಂತರವೂ ನಾನು ನೆನಪಿಟ್ಟುಕೊಂಡಿದ್ದೆ. ಈ ಅವಕಾಶವನ್ನು ಬಿಡಲು ಮನಸ್ಸಾಗದೆ ಅವಳತ್ತ ತಿರುಗಿ ಹೇಳಿದೆ, ''ಸಂಧ್ಯ, ಎಂಥ ಒಳ್ಳೆಯ ದಿನ ಇದು ! ಇಲ್ಲವಾದಲ್ಲಿ ಸಂಧ್ಯ ಹೆಸರಿನ ಆ ಪುಟ್ಟ ಹುಡುಗಿ ಮಿಂಚು ಹೊಳೆದಂತೆ ಒಮ್ಮೆ ಹೊಳೆದು ಮರುಕ್ಷಣವೇ ಮಾಯವಾಗಿಬಿಟ್ಟವಳು ಇಷ್ಟು ವರ್ಷ ಬರಿಯ ನೆನಪಾಗಿ ಉಳಿದಿದ್ದ ಆ ಹುಡುಗಿ ಇದ್ದಕ್ಕಿದ್ದಂತೆ ಪ್ರತ್ಯಕ್ಷಳಾಗಿ ನನ್ನ ಗುರುತಾಗಲಿಲ್ಲವ, ನಾನು ಸಂಧ್ಯ ಎಂದು ಹೇಳಬೇಕಾದರೆ !'' ನಾನವಳ ಕಣ್ಣುಗಳಲ್ಲಿ ದೃಷ್ಟಿ ನೆಟ್ಟು ಮೃದುವಾಗಿ ನಕ್ಕೆ.



ಅವಳು ಕರವಸ್ತ್ರದಿಂದ ಒಮ್ಮೆ ಇಡಿಯ ಮೋರೆಯನ್ನು ಒರೆಸಿಕೊಂಡಳು. ಕಣ್ಣುಗಳನ್ನು ಒರೆಸಿಕೊಳ್ಳುತ್ತಿದ್ದುದನ್ನು ನನ್ನಿಂದ ಮರೆಮಾಚಲಾಗಲಿಲ್ಲ. ನನಗೆಲ್ಲವೂ ಅರ್ಥವಾಯ್ತು. ಮೊದಲಿನಿಂದಲೂ ಅಷ್ಟೇ. ತುಂಬಾ ಭಾವುಕಳಾದ ಹುಡುಗಿಯಾಗಿದ್ದಳು ಅವಳು. ಚಿಕ್ಕಪುಟ್ಟ ಸಂಗತಿಗಳನ್ನೆಲ್ಲ ತುಂಬಾ ಗಂಭೀರವಾಗಿ ಪರಿಗಣಿಸಿಬಿಡುತ್ತಿದ್ದಳು. ಅದವಳ ದೌರ್ಬಲ್ಯ ಕೂಡ ಆಗಿತ್ತು. ಎಲ್ಲವನ್ನೂ ಎಲ್ಲರನ್ನೂ ನಂಬಿಬಿಡುವುದು, ಎದುರಿಗೆ ಕಾಣುವುದು ಮಾತ್ರ ಸತ್ಯ ಅಂತ ತಿಳಿದುಬಿಡುವುದು. ಭ್ರಮೆ ಮತ್ತು ವಾಸ್ತವಗಳ ನಡುವಿನ ಕೊರಕಲನ್ನು ತಿಳಿದುಕೊಳ್ಳುವ ಗೋಜಿಗೇ ಹೋಗದೆ ಕಲ್ಪನೆಯನ್ನೇ ವಾಸ್ತವವೆಂದು ಭ್ರಮಿಸಿ ನಂತರ ಅದಕ್ಕಾಗಿ ಪಶ್ಚಾತ್ತಾಪ ಪಡುವುದು. ಆ ಒಂದು ದೌರ್ಬಲ್ಯದಿಂದಾಗಿಯೇ ಅಲ್ಲವ ಅವಳು ಏನೇನೆಲ್ಲಾ ನೋವು ಅನುಭವಿಸಿದ್ದು, ತಾನು ಅನುಭವಿಸಿದ್ದು ಮಾತ್ರವಲ್ಲದೆ ಆ ತಂದೆ ತಾಯಿಯರಿಗೂ ಎಲ್ಲಿಲ್ಲದ ಮಾನಸಿಕ ಹಿಂಸೆ ನೀಡಿದ್ದು. ಇವಳ ದೆಸೆಯಿಂದಾಗಿ ಆ ತಾಯಿಯಂತೂ ಎಷ್ಟೊಂದು ಘಾಸಿಗೊಂಡಳೆಂದರೆ... ತಾಯಿಯ ಕುರಿತು ಕೇಳುವಾ ಎಂದುಕೊಂಡವನಿಗೆ ಕೂಡಲೇ ಬೇಡ, ಅವಳ ಬಾಯಿಯಿಂದಲೇ ಬರಲಿ, ಆಗ ನೋಡುವಾ ಎಂದುಕೊಂಡೆ.

ಒಮ್ಮೆ ಸುತ್ತಲೂ ದಿಟ್ಟಿಸಿದ ಅವಳು ತಲೆಬಗ್ಗಿಸಿ ಕೈಯಲ್ಲಿದ್ದ ಕರವಸ್ತ್ರವನ್ನು ಮಡಚುವುದು, ಬಿಚ್ಚುವುದು ಮಾಡುತ್ತ ಹೇಳತೊಡಗಿದಳು. ''ಎಂಥ ಆಕಸ್ಮಿಕ ಹಾಗೂ ಎಂಥ ಆಶ್ಚರ್ಯ ನೋಡಿ ಸಾರ್, ನಾವಿಬ್ಬರೂ ಭೇಟಿಯಾಗ್ತ ಇರೋದು! ನೀವು ಈ ಆಫೀಸಿನಲ್ಲಿ ಇದ್ದುದಾಗಲೀ, ಇದೇ ಡಿವಿಜನ್ನಿನಲ್ಲಿ ಇದ್ದುದಾಗಲೀ ನನಗೆ ತಿಳಿದಿರಲಿಲ್ಲ. ನಾನಿಲ್ಲಿಗೆ ಬಂದದ್ದು ಈ ಆಫೀಸಿನಲ್ಲಿರೋ ಪೋಸ್ಟ್ ಮಾಸ್ಟರರನ್ನು ನೋಡಿ ಹೋಗೋಣ ಎಂದು. ಕೌಂಟರಿನಲ್ಲಿ ನಿಂತಾಗ ನೀವು ಕಾಣಿಸಿದಿರಿ. ಅದೇ – ಏನೋ ಬರೆಯುವುದರಲ್ಲಿ ತಲ್ಲೀನರಾಗಿದ್ದ ನಿಮ್ಮನ್ನು ನೋಡುತ್ತಲೇ ನಾನು ಉದ್ವೇಗಕ್ಕೊಳಗಾದೆ. ಹಳೆಯ ದಿನಗಳೆಲ್ಲ ನೆನಪಾದವು. ನಿಮ್ಮೆಲ್ಲರ ಸಹವಾಸದಲ್ಲಿ ಕಳೆದ ದಿನಗಳು, ಆಗಿನ ಆಫೀಸು, ಆಫೀಸು ಸ್ಟಾಫು, ಗೆಳತಿಯರು, ಪೋಸ್ಟ್‌ಮಿಸ್ಟ್ರೆಸ್ ಮಿಸೆಸ್ ರಾಜಮ್ಮ ಮತ್ತು ನೀವು! ಎಷ್ಟು ಚೆನ್ನಾಗಿದ್ದವು ಆ ದಿನಗಳು! ನಾವೆಲ್ಲಾ ಒಂದೇ ಮನೆಯವರಂತೆ ಇದ್ದೆವಲ್ಲ, ಎಂತೆಂಥವೆಲ್ಲಾ ಸಂಗತಿಗಳು, ಏನೇನೆಲ್ಲಾ ಸಿಹಿಕಹಿ ನೆನಪುಗಳು! ಕೊನೆಕೊನೆಗೆ ನನ್ನಿಂದಾಗಿ ನೀವುಗಳೆಲ್ಲ ಎಷ್ಟೊಂದು ಚಡಪಡಿಕೆ ಹಿಂಸೆ ಅನುಭವಿಸಿದಿರಿ. ಸ್ವತಃ ನಿಮಗೆ ನನ್ನ ಬಗ್ಗೆ ಎಷ್ಟೊಂದು ಪ್ರೀತಿ ಅಭಿಮಾನ ಅಂತಃಕರಣಗಳಿದ್ದವು! ನಾನದನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ನಿಮಗೆಲ್ಲಾ ಎಷ್ಟೊಂದು ನೋವು ನೀಡಿಬಿಟ್ಟೆ. ನಿಮ್ಮ ಉಪದೇಶ ಮಾರ್ಗದರ್ಶನಗಳಿಗೆ ಸರಿಯಾದ ರೀತಿಯಲ್ಲಿ ಪ್ರತಿಕ್ರಿಯಿಸದಿದ್ದಾಗ ನೀವು ಎಷ್ಟೆಲ್ಲಾ ಹಿಂಸೆ ಅನುಭವಿಸಿದಿರಿ ಸಾರ್.''

ಇದೇ ಸರಿಯಾದ ಸಂದರ್ಭ ಅನ್ನಿಸಿತು. ಕೇಳಿದೆ, ''ಸಂಧ್ಯ, ಅಮ್ಮನ ಕುರಿತು ಹೇಳಿ. ನಿಮ್ಮ ತಾಯಿ ಕುರಿತು.'' ನಾನು ಉತ್ತರಕ್ಕಾಗಿ ಕಾದೆ. ಅವಳ ಮೋರೆ ಇದ್ದಕ್ಕಿದ್ದಂತೆ ಕಪ್ಪಿಟ್ಟಿತು. ''ಅಮ್ಮ ಈಗ ಬದುಕಿಲ್ಲ ಸಾರ್. ಅವಳು ಹೋಗಿಬಿಟ್ಟು ಸುಮಾರು ಹನ್ನೆರಡು ವರ್ಷಗಳೇ ಆದವು. ಅಮ್ಮನ ಸಾವಿನ ನಂತರ ಅಪ್ಪ ಇಲ್ಲಿಯದನ್ನೆಲ್ಲ ತೊರೆದು ಹಳ್ಳಿಯಲ್ಲಿ ಹೋಗಿ ನೆಲೆಸಿದ್ದಾರೆ. ಅವರು ಮೊದಲಿಂದಲೂ ಒಂದು ಬಗೆಯ ವಿರಕ್ತ ಬದುಕನ್ನು ಇಷ್ಟಪಟ್ಟವರೇ ಆಗಿದ್ದರು. ಸಂಸಾರವೊಂದಿಗರಾಗಿದ್ರೂ ಯಾವುದಕ್ಕೂ ಅಂಟಿಕೊಳ್ಳದೆ ಇದ್ದವರಾಗಿದ್ರು. ನಾನು ಬಹಳ ಮೊದಲೇ ಅವರುಗಳ ಸಂಬಂಧ ಬಂಧನದಿಂದ ಕಳಚಿಕೊಂಡು ಹೊರಟು ಹೋಗಿ, ಬದುಕಿದ್ದೂ ಅವರುಗಳ ಪಾಲಿಗೆ ಸತ್ತುಹೋದವಳಾಗಿದ್ದೆ. ಅಮ್ಮ ಶಾಶ್ವತವಾಗಿ ಹೊರಟುಹೋದಳು. ಅದರ ಮಾರನೆಯ ವರ್ಷವೇ ಅಪ್ಪ ಕೆಲಸದಿಂದ ರಿಟೈರ್ ಆದರು. ಮೊದಲಿನಿಂದಲೂ ಸೇವಾಸಂಸ್ಥೆಗಳ ಜೊತೆಗೆ ಹುಚ್ಚು ಎನ್ನುವ ಮಟ್ಟಿಗೆ ಸಂಪರ್ಕವಿರಿಸಿಕೊಂಡಿದ್ದ ಅವರು ರಿಟೈರ್ ಆದಮೇಲೆ, ಅಮ್ಮನೂ ಹೊರಟುಹೋದಮೇಲೆ ಹೇಳುವವರು ಕೇಳುವವರೇ ಇಲ್ಲವಾದರು. ಅವರು ತಮ್ಮನ್ನು ಪೂರ್ಣವಾಗಿ ಅಂಥ ಕೆಲಸಗಳಲ್ಲಿ ತೊಡಗಿಸಿಕೊಂಡುಬಿಟ್ಟರು.'' ಅವಳು ಒಮ್ಮೆಲೇ ಸುಮ್ಮನಾದಳು.

ನಾನು ಅವಳ ತಂದೆಯನ್ನು ನೋಡಿರಲಿಲ್ಲ. ಆದರೆ ಅವರ ಕುರಿತು ಸಾಕಷ್ಟು ಸಂಗತಿಗಳನ್ನು ಕೇಳಿದ್ದೆ. ಪ್ರಾಪಂಚಿಕ ವಿಷಯಗಳಲ್ಲಿ ಅವರಿಗೆ ಒಂದು ಚೂರೂ ಆಸಕ್ತಿಯಿದ್ದಿರಲಿಲ್ಲ. ಅವರ ದಿನಚರಿ ಬೆಳಗ್ಗೆ ಐದಕ್ಕೇ ಪ್ರಾರಂಭವಾಗುತ್ತಿತ್ತು. ಐದು ಗಂಟೆಗೆ ಮನೆಬಿಟ್ಟ ಅವರು ಹಿಂತಿರುಗುವುದು ರಾತ್ರಿ ಹತ್ತುಗಂಟೆಯ ನಂತರವೇ ಆಗಿತ್ತು. ಎಂಟು ತಾಸುಗಳ ಆಫೀಸು ಕೆಲಸಬಿಟ್ಟರೆ ಮತ್ತೆಲ್ಲ ಸಮಯವನ್ನು ಅವರು ತಾವು ಸಂಪರ್ಕವಿರಿಸಿಕೊಂಡಿದ್ದ ಸೇವಾಸಂಸ್ಥೆಗಳಿಗಾಗಿ ವಿನಿಯೋಗಿಸುತ್ತಿದ್ದರು. ಭಾನುವಾರ ಹಾಗೂ ರಜಾದಿನಗಳನ್ನು ಕೂಡ ಅವರು ತಮಗಾಗಿ, ತಮ್ಮ ಮನೆಯವರಿಗಾಗಿ ಮೀಸಲಿಡುತ್ತಿರಲಿಲ್ಲ. ಈ ಹುಚ್ಚು ಎಲ್ಲಿಯವರೆಗೆ ಹೋಗಿಬಿಟ್ಟಿತ್ತು ಎಂದರೆ ಸಂಬಳದ ಹಣದಲ್ಲಿ ಕೂಡ ಸಾಕಷ್ಟು ದೊಡ್ಡ ಮೊತ್ತವನ್ನು ಅವರು ಪ್ರತಿತಿಂಗಳೂ ಇದಕ್ಕಾಗಿ ಖರ್ಚುಮಾಡಿಬಿಡುತ್ತಿದ್ದರು. ಗಂಡ ಹೆಂಡತಿ ಹಾಗೂ ಒಬ್ಬಳೇ ಮಗಳ ತಮ್ಮ ಸಂಸಾರವನ್ನು ಕೂಡ ಅವರು ಹೆಚ್ಚುಕಮ್ಮಿ ನಿರ್ಲಕ್ಷಿಸಿಬಿಟ್ಟಿದ್ದರು. ತಮ್ಮ ಒಬ್ಬಳೇ ಮಗಳು ಹೇಗಿದ್ದಾಳೆ? ಏನು ಮಾಡುತ್ತಿದ್ದಾಳೆ? ಅವಳ ಬೇಕು ಬೇಡಗಳೇನು, ಅವಳ ಬಗ್ಗೆ ತಂದೆಯಾಗಿ ತನ್ನ ಕರ್ತವ್ಯವೇನು, ಕಾಲೇಜಿಗೆಂದು ಹೋದ ಮಗಳು ಕಾಲೇಜಿಗಷ್ಟೇ ಹೋಗಿ ಬರುತ್ತಾಳಾ, ಆಫೀಸಿಗೆಂದು ಹೋದವಳು ಕೇವಲ ಆಫೀಸು ಕೆಲಸಗಳಲ್ಲಿ ಮಾತ್ರ ತನ್ನನ್ನು ತೊಡಗಿಸಿಕೊಳ್ಳುತ್ತಾಳೋ ಹೇಗೆ? ಮುಂದೆ ಅವಳಿಗೆ ಮದುವೆ ಮಾಡಬೇಡವೇ? ಅದಕ್ಕಾಗಿ ಈಗಿನಿಂದಲೇ ಸಾಕಷ್ಟು ತಯಾರಿಯಲ್ಲಿರಬೇಡವೇ ಎಂಬುದರ ಕುರಿತೂ ಕೂಡ ಅವರು ದಿವ್ಯ ನಿರ್ಲಕ್ಷ್ಯ ತಾಳಿದ್ದರು. ಪುಟ್ಟ ಹುಡುಗಿಯಾಗಿದ್ದಾಗ ಎತ್ತಿಕೊಂಡು ಮುದ್ದು ಮಾಡಲಿಲ್ಲ. ಆಫೀಸಿನಿಂದ ಬರುವಾಗ ಪ್ರೀತಿಯಿಂದ ಒಂದು ಚೂರು ತಿಂಡಿ ತಂದುಕೊಡಲಿಲ್ಲ. ಹಬ್ಬ ಹರಿದಿನಗಳಲ್ಲಿ ಒಂದು ಜೊತೆ ಬಟ್ಟೆ ತರಲಿಲ್ಲ. ಕಾಯಿಲೆಬಿದ್ದು ಮಲಗಿದಾಗ ತಲೆಯಪಕ್ಕ ಕುಳಿತು ಹೇಗಿದ್ದೀಯಮ್ಮಾ? ಏನಾಗುತ್ತಮ್ಮಾ? ಎಂದು ಪ್ರೀತಿಯಿಂದ ತಲೆ ನೇವರಿಸಲಿಲ್ಲ. ಪ್ರತಿತಿಂಗಳೂ ಸಂಬಳ ಸಿಗುತ್ತಲೇ ಒಂದಷ್ಟು ಹಣವನ್ನು ಹೆಂಡತಿಯ ಕೈಗೆ ಹಾಕಿಬಿಟ್ಟರೆ ತನ್ನ ಜವಾಬ್ದಾರಿ ಮುಗಿದೇಹೋಯ್ತು. ಮತ್ತೆ ಯಾವ ಸಂಗತಿಗಳಿಗೂ ತಲೆಬಿಸಿ ಮಾಡಿಕೊಳ್ಳದೆ ನಿರುಮ್ಮಳಾಗಿ ಉಳಿದುಬಿಟ್ಟರು.

ತಂದೆಯ ಈ ಬಗೆಯ ನಿರ್ಲಕ್ಷ್ಯದಲ್ಲಿ ಬೆಳೆದ ಮಗಳು ವಯಸ್ಸಾದಂತೆ ಅವರಿಬ್ಬರ ಕುರಿತು ಎಂತಹ ಭಾವನೆಗಳನ್ನು ಬೆಳೆಸಿಕೊಳ್ಳುತ್ತ ನೀಗಿದಳು ಎಂದರೆ, ಅವಳು ಹದ್ದುಮೀರುತ್ತ ಹೋಗಿ ಒಂದು ಹಂತದಲ್ಲಿ ಕೈತಪ್ಪಿ ಹೋಗುವಂತಾಗಲು ತಂದೆಯ ಈ ಅನಾಸ್ಥೆಯೇ ಮುಖ್ಯ ಕಾರಣವಾಗಿತ್ತು. ಇವೆಲ್ಲ ನನಗೆ ಸಂಧ್ಯಳ ತಾಯಿಯಿಂದ ತಿಳಿದ ಸಂಗತಿಗಳಾಗಿದ್ದವು.

ಪುಟ್ಟಪ್ಪ ಕಾಫಿ ತಂದ. ಒಂದು ಕಪ್ಪನ್ನು ಅವಳಿಗೆ ನೀಡಿದೆ. ಕಾಫಿ ಬಟ್ಟಲನ್ನು ಕೈಗೆ ತೆಗೆದುಕೊಂಡವಳು ಪಕ್ಕದಲ್ಲಿಡುತ್ತ, ''ಸಾರ್, ನಿಮ್ಮ ಕುರಿತು ಏನೂ ಹೇಳೋಲ್ಲವಾ?'' ಕೇಳಿದಳು. ''ನನ್ನ ಕುರಿತು ಹೇಳಲು ಹೆಚ್ಚೇನೂ ಇಲ್ಲ ಸಂಧ್ಯ. ಇಡಿಯ ಸರ್ವಿಸ್ಸು ಇದೇ ಡಿಪಾರ್ಟ್‌ಮೆಂಟಿನಲ್ಲಿ ಇದೇ ಡಿವಿಜನ್ನಿನಲ್ಲಿ ಈ ನಗರದ ಕೆಲವೇ ಆಫೀಸುಗಳಲ್ಲಿ ಕಳೀತು. ಇನ್ನು ಒಂದೂವರೆ ವರ್ಷದ ಸರ್ವೀಸು ಬಾಕಿ ಇದೆ ಅಷ್ಟೇ. ಮೂವರು ಹೆಣ್ಣುಮಕ್ಕಳನ್ನು ಮದುವೆಮಾಡಿ ಗಂಡನ ಮನೆಗೆ ಸಾಗಹಾಕುವಲ್ಲಿ ಸುಸ್ತಾಗಿಬಿಟ್ಟೆದೆ. ಸಿಕ್ಕಾಪಟ್ಟೆ ಸಾಲ ಮಾಡಿಕೊಂಡುಬಿಟ್ಟೆ. ಆ ಸಾಲ ತೀರಿಸುವುದಿರಲಿ, ಪ್ರತಿತಿಂಗಳೂ ನನಗೆ ಅದರ ಬಡ್ಡಿ ಕಟ್ಟುವುದಕ್ಕೇ ಸುಸ್ತಾಗತೊಡಗಿತು. ಇನ್ನೇನು ಮಾಡೋದು? ಯಾವಾಗಲೋ ಕೊಂಡ ಒಂದು ಸೈಟಿತ್ತು. ರಿಟೈರ್ ಆದಾಗ ಒಂದಷ್ಟು ಹಣ ಬರುತ್ತದಲ್ಲ. ಅದರಿಂದ ಪುಟ್ಟ ಮನೆಯೊಂದನ್ನು ಕಟ್ಟಿಕೊಳ್ಳುವ ಅಂತಿದ್ದೆ. ಆದರೆ ಎಲ್ಲವೂ ನಾವೆಣಿಸಿದಂತೆಯೇ ಎಲ್ಲಿ ನಡಿಯುತ್ತೆ? ಸೈಟು ಮಾರಿ ಸಾಲ ತೀರಿಸಿಬಿಟ್ಟೆ. ನೆಮ್ಮದಿಯ ಸಂಗತಿ ಏನೂ ಅಂದ್ರೆ ರಿಟೈರ್ ಆಗುವಾಗ ಹತ್ತು ಪೈಸೆ ಸಾಲವಾಗಲೀ ಹತ್ತು ಪೈಸೆ ಬ್ಯಾಂಕ್ ಬ್ಯಾಲನ್ಸ್ ಆಗಲೀ ಇರೋಲ್ಲವೆಂಬುದು. ಹೂಂ ನೀವು ಕಾಫಿ ಕುಡೀರಿ ಆರಿಹೋಗುತ್ತೆ'' ಎಂದೆ.

ಅವಳು ಮೆಲ್ಲನೆ ಬಟ್ಟಲನ್ನು ಎತ್ತಿಕೊಂಡವಳು ಕಾಫಿ ಹೀರತೊಡಗಿದಳು. ಕತ್ತಲಾಗುತ್ತಿತ್ತು. ಬಾಗಿಲು ಹಾಕಲು ಬಂದ ವಾಚಮನ್ ಅಷ್ಟು ದೂರ ಗೋಡೆಗೊರಗಿ ಕುಳಿತು ಆದೇನನ್ನೋ ಧೇನಿಸುತ್ತಿದ್ದ. ನಾನು ಅವಳ ಕುರಿತು ಯೋಚಿಸತೊಡಗಿದೆ. ನೀವಿಲ್ಲಿದ್ದದ್ದು ಗೊತ್ತಿರಲಿಲ್ಲ ಎಂದಳಲ್ಲ, ಈ ಆಫೀಸಿನಲ್ಲಿರೋ ಪೋಸ್ಟ್ ಮಾಸ್ಟರರನ್ನು ನೋಡಿ ಹೋಗಲು ಬಂದೆ ಎಂದಳಲ್ಲ, ಯಾವ ಉದ್ದೇಶದಿಂದ ಇದ್ದಿರಬಹುದು? ಎಲ್ಲವೂ ನನಗೆ ಗೋಜಲಾಗತೊಡಗಿದವು. ಇವಳೇಕೆ ತನ್ನ ಕುರಿತು ಏನನ್ನೂ ಹೇಳುತ್ತಿಲ್ಲ? ಗಂಡ ಮಕ್ಕಳು ಸಂಸಾರದ ಕುರಿತು ಕೇಳಿದಾಗ ಸುಸ್ತಾದವಳಂತೆ ಮುಖ ಮಾಡಿ ಮಾತನ್ನು ಎತ್ತೆತ್ತಲೋ ಹೊರಳಿಸಿದಳಲ್ಲ. ಒಂದು ಕಾಲದಲ್ಲಿ ಬದುಕನ್ನ ಎಷ್ಟು ಹಗುರವಾಗಿ ತೆಗೆದುಕೊಂಡವಳಾಗಿದ್ದಳು ಇವಳು. ನನಗೆ ಆ ದಿನ ನೆನಪಾಯ್ತು, ಸಂಧ್ಯಳ ತಾಯಿ ನಮ್ಮ ಆಫೀಸಿಗೆ ಬಂದ ದಿನ.

ಮಗಳ ಇತ್ತೀಚಿನ ದೈನಂದಿನ ಚಟುವಟಿಕೆಗಳಿಂದ ರೋಸಿಹೋಗಿ ತನ್ನ ಹಿತವಚನ ಅವಳ ಮೇಲೆ ಏನೇನೂ ಪರಿಣಾಮ ಬೀರದಿದ್ದಾಗ ಆಫೀಸಿನಲ್ಲಾದರೂ ಅವಳ ಮೇಲೆ

## ಮಾಯೆ

ಭೂಮಿಯನು ಹೊಕ್ಕು ಬಂದ
ಇರುವೆಗಳು ತಂದವು ಮಣ್ಣ ಗುಡ್ಡೆ
ಕೆಳಗಿಳಿದು ಅಚ್ಚರಿಪಡುತ್ತವೆ
ಹಿಮಾಲಯ ಯಾರು ತಂದಿಟ್ಟರು ?

ವಾಸುದೇವ ನಾಡಿಗ್
ಜವಾಹರ್ ನವೋದಯ ವಿದ್ಯಾಲಯ
ಏನಿಗದಲೆ, ಚಿಂತಾಮಣಿ, ಕೋಲಾರ

ಪ್ರಭಾವ ಬೀರಬಲ್ಲ ಹಿತೈಷಿಯಿಂದ ಅವಳಿಗೊಂದಷ್ಟು ಹೇಳಿಸುವ ಇಲ್ಲದ ಆಸೆಯಿಂದ ಅವರು ಬಂದಿದ್ದರು. ಸುದೈವದಿಂದಲೋ, ದುರ್ದೈವದಿಂದಲೋ ಅವರಿಗೆ ನಾನೇ ಸಿಕ್ಕಿಬಿಟ್ಟೆ. ಪರಿಚಯದ ಮೊದಲ ಹಂತದಲ್ಲೇ ಅವರಿಗೆ ನನ್ನ ಮೇಲೆ ವಿಶ್ವಾಸ ಮೂಡಿತು. ಅವರು ಮತ್ತೆ ಮತ್ತೆ ಬಂದರು. ನಮ್ಮ ನಡುವಿನ ವಿಶ್ವಾಸ ಆತ್ಮೀಯತೆಗೆ ತಿರುಗಿ ಕೊನೆಗದು ನಾನು ಅವರ ಯಾವುದೋ ಜನ್ಮದ ಬಂಧನವಿದ್ದಿರಲು ಸಾಕು ಎನ್ನುವ ಮಟ್ಟಿಗೆ ಹೋಗಿ ತಲ್ಪಿತ್ತು. ಯಾವುದೊಂದು ಮುಚ್ಚುಮರೆಯೂ ಇಲ್ಲದೆ ಅವರು ಸಂಧ್ಯಳ ಕುರಿತು ನನಗೆಲ್ಲವನ್ನೂ ಹೇಳಿದರು. ಆದರೆ ಇದಕ್ಕೂ ಮುನ್ನವೇ ನಾನು ಸಂಧ್ಯಳ ಕುರಿತು ಸಾಕಷ್ಟು ತಿಳಿದವನಾಗಿದ್ದೆ.

ಆ ಹುಡುಗಿ ನಮ್ಮ ಆಫೀಸಿಗೆ ಸೇರಿ ಆಗಲೇ ಒಂದು ವರ್ಷ ಕಳೆದಿತ್ತು. ಈ ಒಂದು ವರ್ಷದ ಅವಧಿಯಲ್ಲಿ ನಾನವಳನ್ನು ತುಂಬಾ ಹತ್ತಿರದಿಂದ ಗಮನಿಸಿದವನಾಗಿದ್ದೆ. ನನ್ನ ಬಗ್ಗೆ ಅವಳಿಗೆ ವಿಪರೀತ ಗೌರವವಿತ್ತು. ನನಗವಳಲ್ಲಿ ಒಂದು ಬಗೆಯ ಅಧಿಕಾರಯುತ ಪ್ರೀತಿಯಿತ್ತು, ಕಾಳಜಿಯಿತ್ತು. ಬಹುಶಃ ಅದು ನನ್ನ ವಯಸ್ಸಿನಿಂದ ಬಂದುದಾಗಿರಬೇಕು. ಆದರೆ ಒಂದು ವಿಷಯದಲ್ಲಿ ಮಾತ್ರ ನನಗವಳಲ್ಲಿ ಅಸಮಾಧಾನವಿತ್ತು. ಅದವಳ ಪ್ರೇಮಪ್ರಕರಣಕ್ಕೆ ಸಂಬಂಧಿಸಿದುದು.

ಪ್ರೇಮ ಪ್ರೀತಿಯಂತಹ ಸಂಗತಿಗಳು ತೀರಾ ವೈಯಕ್ತಿಕ ವಿಚಾರಗಳು ಎಂಬುದನ್ನು ಒಪ್ಪಿಕೊಂಡರೂ ಸಹ ಪ್ರೇಮ ಒಂದು ಬದುಕನ್ನು ಸುಂದರಗೊಳಿಸಬೇಕು, ಹಸನಾಗಿಸಬೇಕು, ಅದನ್ನು ಹಾಳು ಮಾಡಬಾರದು ಎಂಬ ನಿಲುವಿನವನಾಗಿದ್ದೆ. ಟ್ರೈನಿಂಗು ಮುಗಿಸಿ ಆರ್ಡರ್ ಹಿಡಿದು ಡ್ಯೂಟಿಗೆ ರಿಪೋರ್ಟು ಮಾಡಿಕೊಳ್ಳಲು ಬರುವಾಗಲೇ ಅವಳು ತನ್ನ ಜೊತೆಗೆ ಒಬ್ಬ ನೀಳಕಾಯದ, ನೋಡಲು ಅಷ್ಟೇನೂ ಸುಂದರನಲ್ಲದ ಆದರೆ ಅರಳು ಹುರಿದಂತೆ ಇಂಗ್ಲಿಷ್ ಮಾತಾಡುವ ತರುಣನನ್ನು ಕರೆದುಕೊಂಡು ಬಂದಳು. ಅಂದಿನಿಂದ ನಮಗೆಲ್ಲ ಆತನನ್ನು ನಿತ್ಯವೂ ದಿನಕ್ಕೆರಡು ಬಾರಿ ನೋಡುವ ಸಹಿಸುವ ಕೆಲಸ ಅನಿವಾರ್ಯವಾಯ್ತು. ಇಷ್ಟ ಬಂದಾಗಲೆಲ್ಲ ಅವಳಿಗೆ ಅವನಿಂದ ಫೋನುಕರೆ ಬರುತ್ತಿತ್ತು. ಇಷ್ಟ ಬಂದಾಗಲೆಲ್ಲ ಬಂದು ಆತ, ಅವಳ ಕೌಂಟರಿನೆದುರು ತನ್ನ ಕಂತೆ ಬಿಚ್ಚಿಕೊಂಡು ನಿಂತಿರುತ್ತಿದ್ದ. ಅವರಿಬ್ಬರೂ ಎಲ್ಲೆಲ್ಲೂ ನೋಡಲು ಸಿಗುತ್ತಿದ್ದರು. ಪಾರ್ಕು, ಸಿನೆಮಾ ಹಾಲ್, ಹೋಟೆಲ್ಲು, ಬಸ್‌ಸ್ಟಾಪು, ಟ್ಯಾಕ್ಸಿ, ರಿಕ್ಷಾ ಸ್ಟ್ಯಾಂಡುಗಳಲ್ಲಿ ಹಾಗೂ ಇನ್ನೂ ಎಲ್ಲೆಲ್ಲೋ. ಆಫೀಸಿನಲ್ಲಿ ಅವರಿಬ್ಬರನ್ನೂ ಬೇಕಾಬಿಟ್ಟಿಯಾಗಿ ಆಡಿಕೊಳ್ಳುತ್ತ ಪುಕ್ಕಟೆ ಮನರಂಜನೆ ಹೊಂದತೊಡಗಿದರು. ನಗರದಲ್ಲಿ ಹುಟ್ಟಿ ಬೆಳೆದು ಓದಿದವರಾದ್ದರಿಂದ ವಯಸ್ಸು ಕೂಡ ಅಂತಹದೇ ಆದ್ದರಿಂದ ಇವೆಲ್ಲಾ ಸರ್ವೇಸಾಮಾನ್ಯ ಎಂದು ಮೊದ ಮೊದಲು ಒಪ್ಪಿಕೊಂಡರೂ ಇವರದು ತುಂಬಾ ಅತಿಯಾಯ್ತೇನೋ ಅನ್ನಿಸತೊಡಗಿತು. ಸಂಧ್ಯ ನೋಡಲು ತುಂಬಾ ಮುದ್ದಾದ ಹುಡುಗಿಯಾಗಿದ್ದರಿಂದ ಈ ಹುಡುಗನ ಸ್ನೇಹ ಪ್ರೇಮವೆಲ್ಲಾ ಕೇವಲ ಅವಳ ಸೌಂದರ್ಯದ ಆಕರ್ಷಣೆಯಿಂದ ಪ್ರೇರಿತವಾದದ್ದಾಗಿ ಕೊನೆಗೊಮ್ಮೆ ಅವಳಿಗೆ ನೋವು ನೀಡಿ ಕಳಚಿಕೊಳ್ಳುವ ಸಂಬಂಧವಾದೀತೇನೋ ಎಂಬ ಗುಮಾನಿಯುಂಟಾಗತೊಡಗಿತು. ದಿನಕಳೆದಂತೆ ಆ ಹುಡುಗನ ಕುರಿತು ನನಗೆ ಒಂದೊಂದೇ ವಿವರಗಳು ತಿಳಿದುಬರತೊಡಗಿದವು. ಆತ ಅವಳ ಜೊತೆಗೆ ಓದಿದವನಾಗಿರಲಿಲ್ಲ, ಬಾಲ್ಯ ಸ್ನೇಹಿತನೂ ಆಗಿರಲಿಲ್ಲ, ಅವರ ನಡುವೆ ಬಹಳ ವರ್ಷಗಳ ಸ್ನೇಹವೂ ಇದ್ದಿರಲಿಲ್ಲ. ಇದು ಸಾಲದು ಎಂಬಂತೆ ಆತ ಬೇರೆ ಕೋಮಿಗೆ ಸೇರಿದವನಾಗಿದ್ದ. ಆ ಹುಡುಗನ ಮೊದಲ ಭೆಟ್ಟಿ, ಪರಿಚಯ, ಸ್ನೇಹ ಎಲ್ಲವೂ ಅವಳಿಗಾದದ್ದು ಬಸ್‌ಸ್ಟಾಪಿನಲ್ಲಿ. ಆತ ತಂದೆಗೆ ಒಬ್ಬನೇ ಮಗನಾಗಿದ್ದು ಬೆನ್ನ ಹಿಂದೆ ಐವರು ತಂಗಿಯರನ್ನು ಹೊಂದಿದ್ದ. ಡಿಗ್ರಿ ಮುಗಿಸಿದ ಆತನಿಗೆ ಸರಕಾರಿ ನೌಕರಿಯಾಗಲೀ ಅಥವಾ ಯಾವುದಾದರೂ ಕಾಯಂ ಉದ್ಯೋಗವಾಗಲೀ ಇದ್ದಿರಲಿಲ್ಲ. ಈ ಹುಡುಗಿಯ ಮುಗ್ಧತೆಯನ್ನು ಉಪಯೋಗಿಸಿಕೊಂಡು ಆತ ಅವಳಿಂದ ಬೇಕಾಬಿಟ್ಟಿ ಹಣ ಕೀಳುತ್ತಿದ್ದನೆಂದು ಕಾಣಿಸುತ್ತದೆ. ಅವನ ಅಗತ್ಯಗಳನ್ನು ಪೂರೈಸಲು ಅವಳಿಗೆ ತನ್ನ ಸಂಬಳದ ಹಣ ಏನೇನೂ ಸಾಲದೆ ಹೋದಾಗ ಕ್ರಮೇಣ ಅವಳು ಅಲ್ಲಿ ಇಲ್ಲಿ ಸಾಲ ಮಾಡತೊಡಗಿದಳು. ನಾನು ಕೆಲವು ಬಾರಿ ಕೊಟ್ಟೆ, ತೆಗೆದುಕೊಂಡ ಹಣವನ್ನು ಅವಳಿಗೆ ಹಿಂತಿರುಗಿಸಲು ಸಾಧ್ಯವಾಗುತ್ತಿರಲಿಲ್ಲ. ನನಗೆ ಆ ಹುಡುಗಿಯ ಕುರಿತು ಚಿಂತೆಯಾಗತೊಡಗಿತು. ತಾಯಿ ತಂದೆಯರಿಗೆ ಒಬ್ಬಳೇ ಮಗಳಾದ ಇವಳಲ್ಲಿ ಅವರುಗಳೆಲ್ಲ ಏನೇನೆಲ್ಲಾ ಆಸೆಗಳನ್ನಿಟ್ಟುಕೊಂಡಿರಬಹುದು. ಇದೆಲ್ಲಾ ಅವರಿಗೆ ತಿಳಿದಿದೆಯೇ? ಒಮ್ಮೆ ಗೊತ್ತಿದ್ದೂ ಅವಳ ಪಾಡಿಗೆ ಅವಳನ್ನು ಬಿಟ್ಟಿರಬಹುದು? ಜಾತಿ ಧರ್ಮ ಏನಾದರೂ ಹಾಳಾಗಲಿ ಆ ಹುಡುಗನದು ನಿಜವಾದ ಪ್ರೀತಿಯೇ? ತನ್ನವರನ್ನೆಲ್ಲ ಎದುರು ಹಾಕಿಕೊಂಡು ಆತ ಅವಳನ್ನು ಮದುವೆ ಮಾಡಿಕೊಳ್ಳಲು ಸಿದ್ಧನಿದ್ದಾನೆಯೇ? ಅಥವಾ ಅವನದು ಬರಿಯ ದೈಹಿಕ ಆಕರ್ಷಣೆ ಮಾತ್ರವೇ? ಆ ಹುಡುಗನ ಮೋಡಿಗೆ ಒಳಗಾಗಿ ಅವನಿಗೆ ಹಣದ ನೆರವು ಒದಗಿಸುವ ಭರಾಟೆಯಲ್ಲಿ ಎಲ್ಲಾದರೂ ಡಿಪಾರ್ಟ್‌ಮೆಂಟಿನ ಹಣಕ್ಕೆ ಕೈಹಾಕಿ ಕೆಲಸ ಕಳೆದುಕೊಂಡುಬಿಟ್ಟರೆ... ನಾನೊಮ್ಮೆ ಅವಳ ತಂದೆ ತಾಯಿಯರನ್ನು ಕಾಣುವಂತಾದರೆ... ಎಂದೆಲ್ಲಾ ಯೋಚಿಸುತ್ತಿದ್ದ ದಿನಗಳಲ್ಲೇ ಅವಳ ತಾಯಿ ಒಂದು ಸಂಜೆ ಆಫೀಸಿಗೆ ಬಂದುದಾಗಿತ್ತು. ಮಗಳ ದೆಸೆಯಿಂದಾಗಿ ಅವರು ತುಂಬಾ ಘಾಸಿಗೊಂಡಿದ್ದರು. ಎಂಥದೋ ಭಯ, ಶಂಕೆ ಅವರನ್ನು ಕಾಡುತ್ತಿತ್ತು. ಮಂಕುತನ ಆವರಿಸಿಕೊಂಡಿತು, ಇನ್ನೊಬ್ಬರೊಡನೆ ಹೇಳಲೂ ಸಹ ಆಗದ, ಸ್ವತಃ ಅನುಭವಿಸಲೂ ಆಗದ ಸಂದಿಗ್ಧತೆ ಅವರನ್ನು ಕಾಡುತ್ತಿತ್ತು.

ಬೆಳಗಾಗುತ್ತಲೇ ಮನೆ ಬಿಟ್ಟು ರಾತ್ರಿ ಎಂಟು ಗಂಟೆಗೆ ಮನೆ ಸೇರುವ ಮಗಳು ಹಾಗೂ ಅವಳ ಸ್ನೇಹಿತನನ್ನು ಒಟ್ಟೊಟ್ಟಿಗೆ ಎಲ್ಲೆಲ್ಲೋ ನೋಡಿ ಏನೇನೆಲ್ಲಾ ಕೇಳುವ ಸಂಬಂಧಿಕರ, ಸ್ನೇಹಿತರ, ಹಿತೈಷಿಗಳ, ಕೊನೆಗೆ ಅಕ್ಕಪಕ್ಕದ ಮನೆಯವರ ನೂರಾರು ಪ್ರಶ್ನೆಗಳಿಗೆ ಉತ್ತರಿಸಿ ಉತ್ತರಿಸಿ ಅವರು ಸುಸ್ತಾಗಿದ್ದರು. ಮೊದಲಿನಿಂದಲೂ ತಾಯಿ ತಂದೆಯರ ಜೊತೆಗೆ ಅಷ್ಟಕ್ಕಷ್ಟೇ ಎಂಬಂತಹ ಸಂಬಂಧ ಹೊಂದಿದ್ದ ಈ ಹುಡುಗಿ ನೌಕರಿಯಾದ ನಂತರ ಅವರನ್ನು ತೀರಾ ಕಡೆಗಣಿಸಿಬಿಟ್ಟಿದ್ದಳು. ತಂದೆಯಂತೂ ಯಾವುದಕ್ಕೂ ತಲೆಕೆಡಿಸಿಕೊಳ್ಳದೆ ತನ್ನದೇ ಲೋಕದಲ್ಲಿ ಇದ್ದವರಾದ್ದರಿಂದ ಮನೆಯ ಎಲ್ಲಾ ಜವಾಬ್ದಾರಿಯನ್ನು ಮೊದಲಿನಿಂದಲೂ ಕುತ್ತಿಗೆಗೆ ಬೀಳಿಸಿಕೊಂಡ ತಾಯಿ ಈ ಹುಡುಗಿಯ ದೆಸೆಯಿಂದಾಗಿ ಹೇಳಲಾರದಷ್ಟು ಘಾಸಿಗೊಂಡಿದ್ದರು. ಆ ಹುಡುಗನ ಕುರಿತು ಅವರು ಇನ್ನೂ ಹಲವು ಸಂಗತಿಗಳನ್ನು ಬಲ್ಲವರಾಗಿದ್ದರು. ನೌಕರಿಯಿಲ್ಲದ ಬೆನ್ನಿಗೆ ಐವರು ತಂಗಿಯರನ್ನು ಹೊಂದಿದ್ದ, ಬೇರೆ ಕೋಮಿಗೆ ಸೇರಿದ ಆ ಹುಡುಗ ಮಗಳ ಸ್ನೇಹ ಮಾಡಿದ್ದು ಕೇವಲ ಹಣಕ್ಕಾಗಿ ಮತ್ತು ಅವಳ ದೈಹಿಕ ಆಕರ್ಷಣೆಯಿಂದ ಮಾತ್ರ ಎಂಬುದನ್ನು ಅವರ ಮನಸ್ಸು ಚೀರಿ ಚೀರಿ ಹೇಳುತ್ತಿತ್ತು. ಯಾಕೆಂದರೆ ಹುಡುಗಿಯರ ಜೊತೆಗೆ ಸ್ನೇಹ ಸಂಪಾದಿಸುವುದು ಆತನ ಹವ್ಯಾಸವೇ ಆಗಿತ್ತು. ಮೇಲಾಗಿ ಈ ಹುಡುಗಿ ಅವನಿಗೆ ಮೊದಲಿನವಳೂ ಅಲ್ಲ ಕೊನೆಯವಳೂ ಅಲ್ಲ ಎಂಬುದನ್ನೂ ಅವರು ಬಲ್ಲವರಾಗಿದ್ದರು.

ಅವನಿಗಾಗಿ ಮಗಳು ಬೇಕಾಬಿಟ್ಟಿ ಹಣ ಪೋಲು ಮಾಡಿದುದರ ಕುರಿತು ಅವರಿಗೆ ಯೋಚನೆಯಿದ್ದಿರಲಿಲ್ಲ. ಸಾಕಷ್ಟು ದೊಡ್ಡ ಪ್ರಮಾಣದಲ್ಲಿ ಸಂಬಂಧಿಕರನ್ನು ಹೊಂದಿದ್ದ ಅವರಿಗೆ ಈ ಹುಡುಗಿಯ ದೆಸೆಯಿಂದಾಗಿ ಅವರುಗಳೆಲ್ಲ ತನ್ನನ್ನು ಆಡಿಕೊಳ್ಳುವಂತಾಯ್ತಲ್ಲ ಎಂಬುದರ ಕುರಿತೂ ಯೋಚನೆಯಿದ್ದಿರಲಿಲ್ಲ. ಆ ಹುಡುಗ ಮಗಳನ್ನು ಮದುವೆಯಾಗುವುದಾದಲ್ಲಿ ತಮ್ಮಿಬ್ಬರ ಮಧ್ಯೆಯಿದ್ದ ಜಾತಿ ಧರ್ಮಗಳ ಕಟ್ಟುಪಾಡುಗಳ ಚಿಂತೆಮಾಡದೆ ಧಾರೆಯೆರೆದುಕೊಡಲು ಅವರು ಹಿಂದುಮುಂದು ನೋಡುತ್ತಿರಲಿಲ್ಲ. ಅವರ ಯೋಚನೆ ಎಲ್ಲಾ ಮಗಳ ಕುರಿತಾಗಿತ್ತು. 'ಅಜ್ಞಾನದಿಂದಲೋ ಅಹಂಕಾರದಿಂದಲೋ ಹುಂಬತನದಿಂದಲೋ ಇಲ್ಲ ಪ್ರಾಯದ ಉಮೇದಿಯಿಂದಲೋ ತಪ್ಪು ಹೆಜ್ಜೆಯಿಡುತ್ತ ಹೋಗಿ ಈ

ಹುಡುಗಿ ಪ್ರಪಾತಕ್ಕೆ ಬೀಳುತ್ತಿದ್ದಾಳಲ್ಲ, ತನ್ನ ಬದುಕನ್ನು ತನ್ನ ಕೈಯಾರೇ ಹಾಳು ಮಾಡಿಕೊಳ್ಳುತ್ತಿದ್ದಾಳಲ್ಲ' ಎಂಬುದು ಅವರ ಚಿಂತೆಯಾಗಿತ್ತು. ಎಷ್ಟು ದಿನಗಳ ತನಕ ಈ ಹುಡುಗಿ ಈ ರೀತಿಯ ಬದುಕನ್ನು ಬದುಕುತ್ತಾಳೆ? ನಾಳೆ ಇವಳ ಗತಿ ಏನು? ದೈಹಿಕವಾಗಿ ಮಾನಸಿಕವಾಗಿ ಜರ್ಜರಿತಗೊಂಡ ಇವಳನ್ನು ಯಾರು ತಾನೆ ತಮ್ಮ ಮಡಿಲಿಗೆ ಹಾಕಿಕೊಳ್ಳುತ್ತಾರೆ? ತಮ್ಮ ನಂತರ ಇವಳ ಕತೆ ಏನಾದೀತು? ಯಾರು ಇವಳಿಗೆ ಆಸರೆ ನೀಡುತ್ತಾರೆ? ಇವಳ ಬಾಳಿಗೊಂದು ಭದ್ರತೆ ಬೇಡವೆ? ಎಂಬುದೆಲ್ಲಾ ಅವರ ನಿತ್ಯದ ಚಿಂತೆಯಾಗಿತ್ತು.

ಸಂಧ್ಯ ಹೊರಡಲು ರೆಡಿಯಾಗತೊಡಗಿದಳು. ಟೇಬಲ್ ಮೇಲಿಟ್ಟ ಬ್ಯಾಗನ್ನು ಕೈಗೆ ತೆಗೆದುಕೊಂಡಳು. ಕರವಸ್ತ್ರದಿಂದ ಒಮ್ಮೆ ಮೋರೆ ಒರೆಸಿಕೊಂಡಳು. ಕೇಳಿದೆ, ''ಸಂಧ್ಯ, ಪೋಸ್ಟ್‌ಮಾಸ್ಟರರನ್ನು ನೋಡಲು ಬಂದೆ ಎಂದಿರಲ್ಲ, ಹೇಳಿ ಏನು ವಿಷಯ? ಏನಾಗಬೇಕಿತ್ತು?'' ನಾನು ಉತ್ತರಕ್ಕಾಗಿ ಕಾದೆ. ಅವಳು ನನ್ನ ದೃಷ್ಟಿಯಿಂದ ತಪ್ಪಿಸಿಕೊಳ್ಳುತ್ತ, ''ಸಾರ್, ಇಷ್ಟೆಲ್ಲಾ ವರ್ಷಗಳು ನಾನು ಎಲ್ಲಿದ್ದೆ? ಹೇಗಿದ್ದೆ? ಮದುವೆ ಮಕ್ಕಳು ಸಂಸಾರ ಅಂತ ನೆಮ್ಮದಿಯಿಂದ ಬದುಕಿದೆನೆ? ಎಂಬುದೆಲ್ಲದರ ಕುರಿತು ನಿಮಗೆ ಏನೇನೆಲ್ಲಾ ಊಹೆಗಳಿದ್ದಿರಬಹುದು, ಅಲ್ಲ? ಅದೆಲ್ಲಾ ಒಂದು ದೊಡ್ಡ ಕತೆ. ಆ ಕತೆಯಿಂದ ಈಗ ಯಾರಿಗೂ ಏನೂ ಪ್ರಯೋಜನವಿಲ್ಲ ಸಾರ್. ಒಂದು ಕಾಲದಲ್ಲಿ ನಿಮಗೆಲ್ಲಾ ನಾನು ಎಷ್ಟೊಂದು ನೋವು ಹಾಗೂ ಹಿಂಸೆ ನೀಡಿದ್ದೆ ಎಂಬುದು ಈಗಲೂ ನನ್ನನ್ನು ಕಾಡುತ್ತಿದೆ. ಈಗ ಮತ್ತೊಮ್ಮೆ ನನ್ನ ಪುರಾಣ ಓದಿ ನಿಮ್ಮ ನೆಮ್ಮದಿ ಹಾಳುಮಾಡುವ ಮನಸ್ಸು ನನಗಿಲ್ಲ. ಅದೆಲ್ಲಾ ಮುಗಿದುಹೋದ ಅಧ್ಯಾಯ. ಈಗ ನಾನು ಬಂದಿರೋದು ನನ್ನ ಮಗಳ ಸಲುವಾಗಿ ಸಾರ್...'' ಅವಳು ತಲೆಯೆತ್ತಿ ನನ್ನ ಮೋರೆ ದಿಟ್ಟಿಸಿದಳು. ನಾನು ಗಲಿಬಿಲಿಗೊಂಡೆ. ''ನನಗೊಂದೂ ಅರ್ಥವಾಗಲಿಲ್ಲ ಸಂಧ್ಯ'' ಎಂದೆ ಅವಸರಪಡುತ್ತ. ಅವಳು ಮತ್ತೆ ತಲೆತಗ್ಗಿಸಿ ಮೃದು ಸ್ವರದಲ್ಲಿ ''ಅರುಂಧತಿ – ನಿಮ್ಮ ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದಾಳಲ್ಲ – ಎಸ್. ಅರುಂಧತಿ. ಅವಳು ನನ್ನ ಮಗಳು ಸಾರ್...'' ಎಂದಳು. ''ಓಹ್!'' ಎಂಬ ಉದ್ಗಾರ ನನಗರಿವಿಲ್ಲದೆ ಹೊರಬಂತು. ''ಅರುಂಧತಿ! ಅರುಂಧತಿ ನಿಮ್ಮ ಮಗಳಾ ಸಂಧ್ಯ!...'' ಏನನ್ನೋ ಕೇಳಲೆಂದು ಹೊರಟವ ಬಲವಂತವಾಗಿ ತಡೆದುಕೊಂಡೆ. ಇತಿಹಾಸ ಮರುಕಳಿಸಿತ್ತು. ಎಲ್ಲವೂ ಮೊದಲಿನಂತೆಯೇ. ಥೇಟ್ ಮೊದಲಿನಂತೆಯೇ. ವ್ಯತ್ಯಾಸವೆಂದರೆ ಆಗ ಸಂಧ್ಯ ಆಗಿದ್ದವಳು ಈಗ ಅರುಂಧತಿಯಾಗಿದ್ದಳು. ಎಂಥ ವಿಚಿತ್ರ ಇದು! ಒಬ್ಬ ತಾಯಿಯ ನೋವು, ಸಂಕಟ, ಮೂಕವೇದನೆಗಳೆಲ್ಲ ಮಗಳಿಗೆ ಅರ್ಥವಾಗುವುದು ಆ ಮಗಳೂ ತಾಯಿಯಾದಾಗ ಮಾತ್ರವೇನು? ಅವಳು ಚೇರು ಬಿಟ್ಟೆದ್ದು ನನ್ನತ್ತ ತಿರುಗಿ, ''ಸಾರ್, ನಾನಿನ್ನು ಹೊರಡ್ತೇನೆ. ಅರುಂಧತಿ ಕುರಿತು ನಾನು ನಿಮಗೇನನ್ನೂ ಹೇಳುವುದಿಲ್ಲ. ನಿಮಗೆಲ್ಲವೂ ಗೊತ್ತು. ನಿಮಗೆ ಅವಳು ಮಾತ್ರವೇ ಅಲ್ಲದೆ ಅವಳ ತಾಯಿ, ಹಾಗೂ ಆ ತಾಯಿಯ ತಾಯಿ ಯಾರು ಗೊತ್ತು. ಬದುಕಿನಲ್ಲಿ ನಾನು ಬೇಕಾಬಿಟ್ಟಿ ನೋವು ಅನುಭವಿಸಿದ್ದೇನೆ ಸಾರ್. ಇಬ್ಬರು ಗಂಡುಮಕ್ಕಳು ಹಾಗೂ ಒಬ್ಬ ಮಗಳು – ಈಗ ಬದುಕಿರುವವಳು ಅರುಂಧತಿ ಮಾತ್ರ ಸಾರ್. ನಾನು ಬದುಕಿರೋದು ಈ ಹುಡುಗಿಗಾಗಿ...'' ಅವಳ ದನಿ ಚಿಕ್ಕದಾಯ್ತು. ಬಹುಶಃ ಕಣ್ಣು ಒದ್ದೆಯಾಗಿರಬೇಕು. ಕರವಸ್ತ್ರದಿಂದ ಒರೆಸಿಕೊಂಡಳು.

ನಾನು ಮೌನಿಯಾದೆ. ಎಲ್ಲಿಂದಲೋ ಒಂದು ದನಿ ಮತ್ತೆ ಮತ್ತೆ ನನ್ನ ಕಿವಿಗೆ ಅಪ್ಪಳಿಸತೊಡಗಿತು. ''ಸಾರ್, ನಿನ್ನೆ ಅಮ್ಮ ನಿಮ್ಮನ್ನು ನೋಡಲೆಂದು ಬಂದಿದ್ದರಂತಲ್ಲ. ನನ್ನ ಕುರಿತು ತುಂಬಾ ಪುರಾಣ ಮಾಡಿರಬೇಕು ಅಲ್ಲ? ನನಗೆಲ್ಲವೂ ಗೊತ್ತು ಸಾರ್. ಅವಳು ಏನೇನೆಲ್ಲಾ ಕಂಪ್ಲೇಂಟ್ ಮಾಡಿಹೋಗಿದ್ದಾಳೆ ಎಂಬುದು. ಆದರೆ ನೀವೇ ಹೇಳಿ ಸಾರ್, ನಾನೇನು ಚಿಕ್ಕ ಮಗುವಾ? ನನ್ನ ಒಳ್ಳೆಯದು, ಕೆಟ್ಟದ್ದು ನನಗೆ ಗೊತ್ತಿಲ್ಲವ? ಅದನ್ನು ಕೂಡ ಇಷ್ಟು ದೊಡ್ಡವಳಾದ ನನಗೆ ಅಮ್ಮ ಹೇಳಿಕೊಡಬೇಕಾ? ಇದೆಲ್ಲಾ ಯಾಕೆ ಇವಳಿಗೆ ಅರ್ಥವಾಗೋಲ್ಲ?''

ದನಿ ಯಾರದು? ಸಂಧ್ಯಳದೇ? ಅರುಂಧತಿಯದೇ? ಇಲ್ಲ ಇನ್ನಾರದೋ ಮಗಳ ದನಿಯೇ! ಗುರುತು ಹಿಡಿಯಲು ಪ್ರಯತ್ನಿಸಿದೆ. ಸಾಧ್ಯವಾಗಲಿಲ್ಲ. ಪುಟ್ಟ ಬಾಗಿಲನ್ನು ತಳ್ಳಿ ಸಂಧ್ಯ ಹೊರಬೀಳುವುದನ್ನು ನೋಡುತ್ತ ಸುಮ್ಮನೆ ಕುಳಿತೆ.

ಪಿ. ಎಚ್. ನಾಯಕ ಬಾಡ
ನಂ. ೧೩, ಟೀಚರ್ಸ್ ಲೇಔಟ್, ಸುಬ್ರಹ್ಮಣ್ಯಪುರ ರಸ್ತೆ, ಬೆಂಗಳೂರು - ೫೬೦ ೦೬೧

# ನೆನಪುಗಳು ಸಾಯುವುದಿಲ್ಲ



ಹಾಗೆಲ್ಲ ನೆನಪುಗಳು ಸಾಯುವುದಿಲ್ಲ
ಹಡಗಲಿಯ ಕಡುಬಿಸಿಲಲಿ ಕಂಡ ರಂಗಮುಖ,
ಅಪರಿಚಿತನ ಪರಿಚಿತ ನಗು,
ಮಗುವಿನ ಮೈಯ ವಾಸನೆ, ಬೆವರ ಜಳಕ,
ಹೀಗೆ... ನೆನಪುಗಳ ನಿನಾದ
ನನ್ನೆದೆಯೆಂಬ ಪುಟ್ಟ ಗೂಡಲ್ಲಿ,

ದಟ್ಟ ವಿಷಾದದ ಮೌನಗೀತೆ,
ಮೌನಕ್ಕೋ ಮಹಾಮಾತು,
ಸಂತೋಷದ ಮುಖವಾಡ.
ಅಲ್ಲಿ ನೆನಪುಗಳದೇ ಮೆರವಣಿಗೆ
ಆ ನೆನಪುಗಳಿಗೆ ರಂಗುರಂಗಿನ ಬಣ್ಣ,
ಮಲ್ಲಿಗೆಯ ಪರಿಮಳ,
ಪ್ರಕಾಶಮಾನವಾದ ದಟ್ಟ ಬಿಸಿಲು.

ಮುಡಿಯ ಸೇರದ ಮಂದಾರ,
ನಾಯಕಿ ರಂಗನಾಯಕಿಯರ ನಡುವೆ
ಸುಡುವ ಬಿಸಿಲು ಬೆಳದಿಂಗಳು,
ಪರದೆ ಹಿಂದಿನ ಜೀವ ನೇಪಥ್ಯದೊಡಲಲ್ಲಿ
ಅರಳಿ ನಿಂತ 'ರಂಗಮಲ್ಲಿಗೆ' ನಾನು
'ಸಖಿ'ಯ ವೇಷತೊಟ್ಟು, ಅವ ಕೊಟ್ಟ ಮಲ್ಲಿಗೆ
ಮುಡಿದು, ಸಂಭ್ರಮಿಸಿ, ನಟಿಸಿ, ಖುಷಿಯ
ಕ್ಷಣವಾಗುತ್ತೇನೆ, ತೃಪ್ತಳಾಗುತ್ತೇನೆ.

ಮತ್ತೆ ಎಲ್ಲ ರಂಗಮಲ್ಲಿಗೆ ನೆನಪು
ಮುಂದಿನ ಬಾರಿ ಇದೇ ಲಾವಣ್ಯಮಯ
ರಂಗಮಂಟಪದಲ್ಲಿ,
'ಸಖಿ' ಪಾತ್ರ ಮಾಡಿದಾಗ, ಪ್ಲಾಸ್ಟಿಕ್ ಮಲ್ಲಿಗೆ
ಮುಡಿದಾಗ, ನಿಮ್ಮೆದುರು ನಿಂತಾಗ,
ನಿಮ್ಮೆದುರು ನಿಂತಾಗ...
ನಿಮ್ಮೆದುರು ನಿಂತಾಗ.

ಮಂಜುಶ್ರೀ ಕಡಕೋಳ
ಸಂಶೋಧನಾ ವಿದ್ಯಾರ್ಥಿ, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ - ೫೭೭ ೪೫೧

# ನಗರಕ್ಕೆ ವಲಸೆ ಹೋಗದಂತೆ ತಡೆದ ವೃಕ್ಷಾಧಾರಿತ ಬೇಸಾಯ (ವಾಡಿ)

ಪಾವಗಡದ ಇಡೀ ಆರ್ಥಿಕತೆ ನೆಲಗಡಲೆ ಬೆಳೆ ಮೇಲೆ ನಿಂತಿದೆ. ಸುಮಾರು ಶೇಕಡ ೮೦ರಷ್ಟು ಜನರು ವ್ಯವಸಾಯವನ್ನೇ ಅವಲಂಬಿಸಿದರೆ ಇವರಿಗೆ ಮಳೆಯ ಏರುಪೇರಿನ ಸಮಸ್ಯೆಯ ಜೊತೆಗೆ ಮಾರುಕಟ್ಟೆಯ ದರದ ಸಮಸ್ಯೆಯೂ ಇದೆ. ಬದಲಾದ ಸರ್ಕಾರದ ನೀತಿಗಳು ಮತ್ತು ಜಾಗತೀಕರಣದಿಂದಾಗಿ, ನೆಲಗಡಲೆಯ ಮಾರುಕಟ್ಟೆ ದರದಲ್ಲಿನ ಏರುಪೇರುಗಳು ರೈತರ ಮತ್ತು ವ್ಯಾಪಾರಸ್ಥರ ಅಂದಾಜಿಗೇ ಸಿಗುತ್ತಿಲ್ಲ. ಈ ಬೆಳೆಯನ್ನೇ ಅವಲಂಬಿಸಿದ್ದ ನೆಲಗಡಲೆ ವ್ಯಾಪಾರಸ್ಥರ ಪರಿಸ್ಥಿತಿಯೂ ರೈತರ ಪರಿಸ್ಥಿತಿಯಂತೆಯೇ ಆಗಿದೆ. ಕೆಲವರಂತೂ ದಿವಾಳಿ ಎದ್ದುಹೋಗಿದ್ದಾರೆ.

ಅನೇಕಬಾರಿ ನೆಲಗಡಲೆ ಬೆಳೆಯುವ ಖರ್ಚು ಹೊರಡದಿದ್ದರೂ ಸಹ ಕಳೆದ ೨೫-೩೦ ವರ್ಷಗಳಿಂದಲೂ ಇದನ್ನೇ ಬೆಳೆಯುತ್ತಿದ್ದಾರೆ. ಇಲ್ಲಿಯ ಸರಾಸರಿ ವಾರ್ಷಿಕ ಮಳೆ ೫೨ ಸೆಂ.ಮೀ. ಮಣ್ಣು ಕಲ್ಲು ಮರಳುಮಿಶ್ರಿತ ಕೆಮ್ಮಟೆ. ಈಗಂತೂ ಬೀಳು ಬಿಡುವುದು, ಗುತ್ತಿಗೆಗೆ ಕೊಡುವುದು ಸಾಮಾನ್ಯವಾಗಿಬಿಟ್ಟಿದೆ. ಪ್ರಾದೇಶಿಕ ಮಟ್ಟದಲ್ಲಿ ನಷ್ಟವನ್ನು ಲೆಕ್ಕಹಾಕಿದಾಗ ಪರಿಸ್ಥಿತಿಯ ಗಂಭೀರತೆ ಅರಿವಾಗುತ್ತದೆ.

ನೆಲಗಡಲೆಯ ವಿಶೇಷತೆಯೇನೆಂದರೆ ಮಳೆ ಸಕಾಲಕ್ಕೆ ಬಂದರೆ ಮಾತ್ರ ಬಂಪರ್ ಬೆಳೆಯಾಗುತ್ತದೆ. ಅದೂ ಎಕರೆಗೆ ೫ ಕ್ವಿಂಟಾಲ್‌ನಷ್ಟು. ಇಲ್ಲದಿದ್ದರೆ ಎಕರೆಗೆ ೧/೨ ಕ್ವಿಂಟಾಲ್. ಸಾರಜನಕ ಅಗತ್ಯವಿಲ್ಲದ, ಲೆಗ್ಯೂಮ್ ಕುಟುಂಬಕ್ಕೆ ಸೇರಿದ ಈ ಸಸ್ಯ ಇಲ್ಲಿನ ಕಡಿಮೆ ಫಲವತ್ತತೆಯ ಕಲ್ಲು, ಮರಳುಮಿಶ್ರಿತ ಮಣ್ಣು ಇದಕ್ಕೆ ಹೇಳಿ ಮಾಡಿಸಿದಂತಿದೆ. ಮಳೆಗಾಗಿ ನಡೆಯುವ ಜೂಜಿಗೆ ಹಣವನ್ನು ಕಟ್ಟುವ ಬದಲು, ಮಳೆ ಆಶ್ರಿತ ಕೃಷಿಯಲ್ಲಿ ಸಮೃದ್ಧಿ ಸಾಧಿಸಲು ವೃಕ್ಷಾಧಾರಿತ ಬೇಸಾಯವನ್ನು ಅಳವಡಿಸಿಕೊಂಡರೆ ಹೇಗೆ ? ಈಗಿನ ಮಳೆ ಆಶ್ರಿತ ಬೆಳೆಯ ಜೊತೆಯಲ್ಲಿಯೇ ಇತರ ಮಿಶ್ರ ಬೆಳೆಗಳು, ಕೃಷಿ ಅರಣ್ಯ, ವಿವಿಧ ಜಾನವಾರು, ಪೂರಕವಾಗುವ ಕೃಷಿ ಉದ್ದಿಮೆಗಳನ್ನು ಅವಕಾಶಗಳಿಗೆ ತಕ್ಕಂತೆ ಜಾಣತನದಿಂದ ಹೊಂದಿಸಿಕೊಳ್ಳುವ ಯೋಜನೆ ಇದರಲ್ಲಿದೆ. ಪದೇ ಪದೇ ನಷ್ಟ ತರುವ ನೆಲಗಡಲೆಯ ಜೊತೆಗೆ ಇಂತಹ ಕೃಷಿ ಪದ್ಧತಿ ಸೇರಿದರೆ ಇದುವರೆಗೂ ಕಂಡರಿಯದ ಲಾಭ ಪಡೆಯಲು ಸಾಧ್ಯವಾದೀತು.

'**ವಾ**ಡಿ' – ಇದು ಗುಜರಾತಿ ಪದ. ಇದನ್ನು ವೃಕ್ಷಾಧಾರಿತ ಬೇಸಾಯ ಅಂತ ಕರೆಯಬಹುದು. ಇದರ ಮೂಲ ಉದ್ದೇಶ ಸುಸ್ಥಿರ ಕೃಷಿ. ಎಂದರೆ ಒಂದು ಸಂಸಾರಕ್ಕೆ ಅಗತ್ಯವಾದದ್ದನ್ನೆಲ್ಲಾ ಅವರವರ ಹೊಲದಲ್ಲೇ ಬೆಳೆಯುವುದು. ಇದಕ್ಕೆ ಜೀವಂತ ಬೇಲಿ ಅವಶ್ಯ. ಸಣ್ಣ ಹಿಡುವಳಿದಾರರು ಈ ಯೋಜನೆಯ ಫಲಾನುಭವಿಗಳು. ಮಳೆನೀರನ್ನು ಹೊಲದಲ್ಲೇ ನಿಲ್ಲುವಂತೆ ಮಾಡಿ, ಈ ನೀರಲ್ಲೇ ಗಿಡಗಳನ್ನು, ಬೆಳೆಗಳನ್ನು ಬೆಳೆದು, ನಿತ್ಯವೂ ರೈತನಿಗೆ ಆದಾಯ ಬರುವಂತೆ ಮಾಡುವುದು, ಇದರಿಂದ ಸಾಧ್ಯ.

೧೯೯೬ರಲ್ಲಿ ಹಮಾಲಿಯಾಗಿ ದುಡಿಯುತ್ತಿದ್ದ ಭೋಗೆ ನಾಗರಕೊಪ್ಪದ ಬಸಪ್ಪ ವ್ಯವಸಾಯವೇ ಬೇಡವೆಂದು ತನ್ನ ೮ ಎಕರೆ ೧೬ ಗುಂಟೆ ಹೊಲವನ್ನು ಹುಬ್ಬಳ್ಳಿಯವರಿಗೆ ಮಾರಿ ಮುಂಗಡ ಪಡೆದರು. ನಂತರ ಇವರು 'ಮರಳಿ ಮಣ್ಣಿಗೆ' ಹೋಗಿದ್ದಕ್ಕೆ ಬೈಫ್‌ನವರ ಕಾರ್ಯವೈಖರಿ ಒಂದು ಕಾರಣ.

ಇವರ ಹೊಲ ಬೆಟ್ಟದ ಇಳಿಜಾರಿನಲ್ಲಿದ್ದು ಕಲ್ಲುಮಿಶ್ರಿತ ಕೆಮ್ಮಟೆ. ಮಣ್ಣು ಮಳೆನೀರು ಕೊಯ್ಲಿಗೆ ಪ್ರಶಸ್ತವಾಗಿದೆ. ಹರಿಯುವ ನೀರಿಗೆ ಅಡ್ಡವಾಗಿ ಬದುಗಳನ್ನು, ಇಂಗು ಗುಂಡಿಗಳನ್ನು ಹಾಕಿದ್ದಾರೆ. ಈ ಹೊಲದಲ್ಲಿ ಕೃಷಿ ಅರಣ್ಯವನ್ನೇ ನೋಡಬಹುದು. ಜೀವಂತ ಬೇಲಿಗಾಗಿ ತೇಗ, ನುಗ್ಗೆ, ಸೀಮೆ ತಂಗಡಿ, ಸಿಲ್ವರ್, ಸೀಮೆ ಹುಣಸೆ, ಅಕೇಶಿಯಾ, ಸುಬಾಬುಲ್ ಗಳನ್ನು ಬೆಳೆಸಿದ್ದಾರೆ.

ಇವುಗಳಲ್ಲಿ ಕೆಲವು ಮೇವಿಗಾಗಿ ಮಾತ್ರವಲ್ಲದೆ ಟಿಂಬರ್, ಮುಚ್ಚಿಗೆ, ಉರುವಲು ಮತ್ತೆ ಗೊಬ್ಬರಕ್ಕೂ ಬಳಸಬಹುದಾಗಿದೆ. ಹಣ್ಣಿನ ಗಿಡಗಳಾದ ಮಾವು,

ಲಲಿತಾ ರಾವ್ ಎಂ. ಜಿ.



ಮರ, ಮೇವು ಮತ್ತು ಬೆಳೆ ಎಲ್ಲವೂ ಒಟ್ಟಿಗೆ



ಖುಷ್ಕಿಯಲ್ಲಿ ಹೈಬ್ರಿಡ್ ಹುಣಸೆ



ಇಷ್ಟನ್ನೆಲ್ಲ ಸಾಧಿಸಿದ ಶ್ರೀಯುತ ಬಸಪ್ಪ

ಸಪೋಟ, ಪೇರಲ ಹಾಗೂ ಹುಣಸೆ, ನಿಂಬೆ ಈಗ ಇವರಿಗೆ ಆದಾಯ ತರುತ್ತಿವೆ. ಮರಗಳ ಸಾಲಿನ ಮಧ್ಯೆ ತರಕಾರಿ, ಹೂವಿನ ಗಿಡಗಳನ್ನು ಬೆಳೆಸಿದ್ದಾರೆ.

ಶುರುವಿನಲ್ಲಿ ಈ ಎಲ್ಲಾ ಕಸರತ್ತಿಗೆ ಮಳೆ ನೀರಲ್ಲದೆ, ಬೇಸಿಗೆಯಲ್ಲಿ ಸಸಿಗಳನ್ನು ಕಾಪಾಡಲೂ ನೀರನ್ನು ೧ ಕಿ.ಮೀ. ದೂರದಿಂದ ೬ ಕೊಡ ಹಿಡಿಸುವಂತಹ ತಳ್ಳುಗಾಡಿಯಲ್ಲಿ ತಂದು ೮ ದಿನಕ್ಕೊಮ್ಮೆ ಹಾಕಿ ಕಾಪಾಡಿದ್ದಾರೆ. ೪ ವರ್ಷದ ಹಿಂದೆ ಬೋರ್ ಹಾಕಿಸಿದ ನಂತರ ಭತ್ತ, ಅಲಸಂದೆ, ತರಕಾರಿಗಳನ್ನು ಮಾರುವಷ್ಟು ಬೆಳೆಯುತ್ತಿದ್ದಾರೆ.

ಗಿಡಗಳ ಆಯ್ಕೆ ತಂತ್ರಜ್ಞಾನ ಬೈಫ್ ಸಂಸ್ಥೆಯವರದ್ದು. ಇಲ್ಲಿ ಆದಾಯ ಸತತವಾಗಿ ಬರುವಂತೆ ಬಸಪ್ಪ ಜಾಗ್ರತೆ ವಹಿಸಿದ್ದಾರೆ. ಈ ವರ್ಷ ಇವರಿಗೆ ಬಂದ ಆದಾಯ ಸುಮಾರು ೬೭,೦೦೦ ರೂಪಾಯಿಗಳು. ಹಮಾಲಿಯಾಗಿದ್ದಾಗ ಇವರಿಗೆ ಬರುತ್ತಿದ್ದದ್ದು ೧೮,೦೦೦ ರೂ.ಗಳು. ಈಗ ತಮ್ಮ ಹೊಲದಲ್ಲಿ ಕೂಲಿಯವರನ್ನಿಟ್ಟು ಬೇಸಾಯ ಮಾಡುತ್ತಿದ್ದಾರೆ. ಇನ್ನು ಮುಂದೆ ವೃಕ್ಷಗಳಿಂದ ಇವರ ಆದಾಯ ಹೆಚ್ಚಲಿದೆ. ಈ ಎಲ್ಲದರ ಬಾಳಿಕೆ ಮಣ್ಣಿನ ಫಲವತ್ತತೆ ಕಾಪಾಡುವುದರಿಂದ ಆಗುತ್ತದೆ. ಹಾಗಾಗಿ ಗೇಯ್ಮೆಗಾಗಿ ಎತ್ತುಗಳನ್ನು, ಹಾಲಿಗಾಗಿ ಎಮ್ಮೆ ಆಕಳುಗಳ ಜೊತೆಗೆ, ಎಕರೆಗೆ ೧೦ ಕುರಿ ಸಾಕಿದರೆ, ಇವುಗಳಿಂದ ಕೊಟ್ಟಿಗೆ ಗೊಬ್ಬರ ಹೆಚ್ಚಾಗಿ, ಮಣ್ಣಿನ ಪೋಷಕಾಂಶ ಕಾಪಾಡಬಹುದು. ಮಣ್ಣಿನಲ್ಲಿ ಸಾವಯವ ಅಂಶ ಹೆಚ್ಚಾದಷ್ಟೂ ನೀರು ಹಾಗೂ ರಸಗೊಬ್ಬರಗಳನ್ನೂ ಮಿತವಾಗಿ ಬಳಸಬಹುದು. ಕುರಿಗಳು ಒಂದು ಇನ್ಸ್ಯೂರೆನ್ಸ್ ಇದ್ದ ಹಾಗೆ. ರೈತನ ತೊಂದರೆಗಳಿಗೆ ಇದನ್ನು ಯಾವಾಗ ಬೇಕಾದರೂ ಮಾರಿಕೊಳ್ಳಬಹುದು.

ಮಳೆಯಾಧಾರಿತ ಬೇಸಾಯ ಮಾಡುವ ರೈತರಿಗೆ ಈ ಬೇಸಾಯ ಪದ್ಧತಿಯು ಹುರುಪು ನೀಡಲು ಕೆಲವು ನಿಮಿಷಗಳೇ ಸಾಕು. ಪಶ್ಚಿಮಕ್ಕಿದ್ದ ಅವರ ಅಣ್ಣನ ಹೊಲ, ಪೂರ್ವಕ್ಕಿರುವ ಹೊಲ ಹುಬ್ಬಳ್ಳಿಯವರಿಗೆ ಮಾರಾಟವಾಗಿದೆ. ಇವು ಬೋಳುಗುಡ್ಡದಂತಿವೆ. ಅಜುಬಾಜಿನಲ್ಲೆಲ್ಲೂ ಇವರ ಹೊಲದಲ್ಲಿರುವಂತಹ ಬೆಳೆಯ ವೈವಿಧ್ಯತೆಯನ್ನು ಕಾಣಬರುವುದಿಲ್ಲ.

ಎಂಟು ವರ್ಷದ ಹಿಂದೆ ಬೈಫ್ ಗ್ರಾಮೀಣಾಭಿವೃದ್ಧಿ ಸಂಸ್ಥೆಯವರು 'ವಾಡಿ' ಪದ್ಧತಿಯನ್ನು ಹುಬ್ಬಳ್ಳಿ, ಕಲಘಟಗಿ ತಾಲೂಕುಗಳ ೨೨ ಹಳ್ಳಿಗಳಲ್ಲಿ ಶುರುಮಾಡಿದರು. ಈಗ ಈ ಸುಸ್ಥಿರ ಕೃಷಿಯಿಂದಾಗಿ ಫಲಾನುಭವಿಗಳ ಆದಾಯ ಹೆಚ್ಚಾಗಿ, ಉಳಿತಾಯದ ಮೊತ್ತ ಹೆಚ್ಚಾಗಿದೆ. ಈ ಪ್ರಕ್ರಿಯೆ ಕುರಿತು ನಾವು ಸೂಕ್ಷ್ಮವಾಗಿ ಅವಲೋಕಿಸಿದಾಗ ಇದೊಂದು ತಾಯಿ-ಮಗುವಿನ ಸಂಬಂಧದಂತಿರುವುದು ಕಂಡುಬರುತ್ತದೆ. ಇಲ್ಲಿ ನಂಬಿಕೆ ಪಾರದರ್ಶಕತೆ ಎರಡೂ ಮುಖ್ಯ ಪಾತ್ರ ವಹಿಸಿವೆ. ಗ್ರಾಮ ಚೇತನ ಯೋಜನೆ ಇದಕ್ಕೆ ಸಾಕ್ಷಿ. ಈ ಯೋಜನೆಯ ಫಲಾನುಭವಿಗಳು ಉಳಿಸಿದ ಹಣದಲ್ಲಿ ಬೈಫಿಗಾಗಿ ಒಂದು ಜಮೀನನ್ನು ಖರೀದಿಸಿ, ಸುಸಜ್ಜಿತ ಕಛೇರಿಯನ್ನು ತರಬೇತಿ ಕೇಂದ್ರ, ವಸತಿ ಇನ್ನಿತರ ಸೌಲಭ್ಯಗಳನ್ನು ಒದಗಿಸಿದ್ದಾರೆ. ಇದೊಂದು 'ಸಿಂಬೈಆಟಿಕ್ ರಿಲೇಷನ್‌ಶಿಪ್' ಎನ್ನಬಹುದು. ಇದರಿಂದಾಗಿ ಲಾಭವಿರುವುದರಿಂದ ಇಬ್ಬರೂ ಒಟ್ಟಿಗಿದ್ದಾರೆ.

### ವಾಡಿ

ಈ ಕೃಷಿ ಪದ್ಧತಿಯನ್ನು ಅಳವಡಿಸಿಕೊಳ್ಳುವುದಕ್ಕೆ ತಗಲುವ ಖರ್ಚು ೧೫,೦೦೦-೨೦,೦೦೦ ರೂಪಾಯಿಗಳು. ಗ್ರ್ಯಾಂಟ್ ಆದರೆ ಪರವಾಗಿಲ್ಲ. ಇಲ್ಲವಾದಲ್ಲಿ ಹಂತ ಹಂತವಾಗಿ ಮಾಡಬಹುದು. ಆದಾಯ ಬರಲು ಶುರುವಾಗುವುದಕ್ಕೆ ೩-೪ ವರ್ಷ ಕಾಯಬೇಕು.

ಲಲಿತಾ ರಾವ್ ಎಂ. ಜಿ.
ಅಂಚೆ : ಚೆನ್ನಕೇಶವಪುರ, ಪಾವಗಡ ತಾಲೂಕು, ತುಮಕೂರು ಜಿಲ್ಲೆ - ೫೭೨ ೧೧೬

ಖುಷ್ಕಿಯಲ್ಲಿ ನೆಲಗಡಲೆ



# ಪೇಟೆಂಟ್ ಮಹಾಸಮರದಲ್ಲಿ ಬಡರೋಗಿಗಳ ಮಾರಣಹೋಮ

ಈ ಪೇಟೆಂಟ್ ಪಡೆಯ ಪೆರೇಡ್ ಹೀಗೆಯೇ ಮುಂದುವರಿದರೆ ಅತ್ಯಂತ ಭಯಾನಕ ಪರಿಸ್ಥಿತಿ ನಿರ್ಮಾಣವಾಗುವುದರಲ್ಲಿ ಸಂಶಯವಿಲ್ಲ. ಬರೀ ಆರೋಗ್ಯ ಕ್ಷೇತ್ರದಲ್ಲಷ್ಟೇ ಅಲ್ಲದೆ ಕೃಷಿ ಕ್ಷೇತ್ರದಲ್ಲೂ ಪೇಟೆಂಟ್ ವ್ಯವಸ್ಥೆ ವಿಜೃಂಭಿಸಲಿದೆ. ಅಧಿಕ ಇಳುವರಿಯ ಬೀಜ ತಳಿಗಳು, ಆಧುನಿಕ ಕೀಟ ಮತ್ತು ಕಳೆ ನಾಶಕಗಳು ಹಾಗೂ ಜೈವಿಕ ತಂತ್ರಜ್ಞಾನ ಆಧರಿತ ಕೃಷಿ, ತರಕಾರಿ, ತೋಟಗಾರಿಕಾ ತಳಿಗಳಲ್ಲಿ ಏಕಸ್ವಾಮ್ಯ ರೂಪಿತವಾಗಿ ದೇಸೀಯ ತಳಿಗಳು ಸಂಪೂರ್ಣವಾಗಿ ವಿನಾಶಗೊಳ್ಳುವ ಅಪಾಯವಿದೆ. ಇವು ನಮ್ಮ ಕೃಷಿ ಮತ್ತು ಜಾನುವಾರು ವೈವಿಧ್ಯತೆಗೆ ಮಾರಕವಾಗ ಬಹುದಾಗಿದೆ. ಈ ಪೇಟೆಂಟ್ ಕಾಲಾಳುಗಳ ಪಡೆಯ ಧಾಳಿಗೆ ಭಾರತ ಬಲಿಯಾಗುವುದೇ ಅಥವಾ ಅದನ್ನು ಹಿಮ್ಮೆಟ್ಟಿಸಿ ತಲೆಯೆತ್ತಿ ನಿಲ್ಲುತ್ತದೆಯೇ ಎನ್ನುವುದನ್ನು ಇಡೀ ಜಗತ್ತು ಆತಂಕದಿಂದ ಕಾದು ನೋಡುತ್ತಿದೆ. ಈ ಪೇಟೆಂಟ್ ಮಹಾಸಮರದಲ್ಲಿ ಬಹುರಾಷ್ಟ್ರೀಯ ಕಂಪನಿಗಳ ಕೈ ಮೇಲಾದರೆ ಅಮಾಯಕ ರೋಗಿಗಳು ಹಾಗೂ ರೈತರು ಬಲಿಯಾಗುವುದನ್ನು ತಡೆಯುವವರು ಯಾರು?

ಸಿ. ಯತಿರಾಜು

ಅಮೆರಿಕಾ ಮತ್ತು ಭಾರತ ೨೦೦೬ರ ಡಿಸೆಂಬರ್ ೨೦ರಂದು ಒಂದು ಚರಿತ್ರಾರ್ಹ 'ತಿಳುವಳಿಕೆ ಕರಾರು ಪತ್ರ'ಕ್ಕೆ ಸಹಿ ಮಾಡಿದವು. ಭಾರತದ ಆರೋಗ್ಯ ಕ್ಷೇತ್ರ ಮತ್ತು ಕೃಷಿ ವ್ಯವಸ್ಥೆಯ ಮೇಲೆ ಅಪಾರ ಹಾಗೂ ದೀರ್ಘಕಾಲೀನ ಪ್ರಭಾವವನ್ನುಂಟುಮಾಡುವ ಈ ಒಪ್ಪಂದದ ಬಗ್ಗೆ ಮಾಧ್ಯಮಗಳ ಮೂಲಕ ಪ್ರಧಾನವಾಗಿ ಸಾರ್ವಜನಿಕರ ಗಮನ ಸೆಳೆಯುವ ಯಾವ ಪ್ರಯತ್ನಗಳೂ ಆಗದಿರುವುದು ಅತ್ಯಂತ ದುರದೃಷ್ಟಕರ. ಈ ಒಪ್ಪಂದದ ಪ್ರಕಾರ ಅಮೆರಿಕಾದ ಪೇಟೆಂಟ್ ಮತ್ತು ಟ್ರೇಡ್‌ಮಾರ್ಕ್ ಕಛೇರಿ ಭಾರತದಲ್ಲಿ ಪೇಟೆಂಟ್ ಮಂಜೂರು ಮಾಡುವ ಬಗ್ಗೆ ಮಾರ್ಗದರ್ಶನ ಮಾಡಲಿದೆ. ವಿಶ್ವವ್ಯಾಪಾರ ಸಂಘಟನೆ ಮತ್ತು ಗ್ಯಾಟ್ ಒಪ್ಪಂದಗಳನ್ನು ರೂಪಿಸುತ್ತಿದ್ದ ಸಂದರ್ಭದಲ್ಲಿ ತಮ್ಮ ಶಕ್ತಿ ಮೀರಿ ಪ್ರತಿಭಟಿಸುತ್ತಿದ್ದ ನಾಗರಿಕ ಸಮಾಜ, ಗುಂಪುಗಳು, ರೈತ ಸಂಘಟನೆಗಳು ಈ ಬಾರಿ ಸುಸ್ತಾಗಿ ಸುಮ್ಮನಾಗಿರುವಂತೆ ಕಾಣುತ್ತದೆ. ನಾವೆಷ್ಟೇ ಪ್ರತಿಭಟಿಸಿದರೂ ಈ ಜನವಿರೋಧಿ ಸರ್ಕಾರಗಳು ಬಹುರಾಷ್ಟ್ರೀಯ ಕಂಪನಿಗಳಿಗೆ ಪೈಪೋಟಿ ನಡೆಸಿ ಕೆಂಪು ರತ್ನಗಂಬಳಿ ಹಾಸಿನ ಸ್ವಾಗತ ನೀಡುವುದನ್ನು ತಡೆಯಲಾಗಲಿಲ್ಲವೆಂಬ ಹತಾಶೆಯಿರಬಹುದು ಅಥವಾ ಹೋರಾಟ ಮಾಡಲು ಏನೂ ಉಳಿದಿಲ್ಲವೆಂಬ ನಿರಾಶಾಭಾವನೆಯಿರಬಹುದು.

ಇಂತಹ ಅನುಕೂಲಕರ ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿಯ ಪೂರ್ಣ ಲಾಭ ಪಡೆಯುತ್ತಿರುವ ಬಹುರಾಷ್ಟ್ರೀಯ ಬಂಡವಾಳಗಾರರು ಹಾಗೂ ಅವರಿಗೆ ತಕ್ಕಂತೆ ಬ್ಯಾಂಡ್ ಬಾರಿಸುವ ಆರ್ಥಿಕ ತಜ್ಞರು ಮತ್ತು ಬುದ್ಧಿಜೀವಿಗಳು ಭಾರತದ ಪ್ರಗತಿಯ ಪಥದಲ್ಲಿ ದಾಪುಗಾಲನ್ನಿಡುತ್ತಿದೆ ಎಂಬ ತುತ್ತೂರಿಯನ್ನು ಲಜ್ಜೆಗೆಟ್ಟು ಊದುತ್ತಾ ಭಾರತದ ರೋಗಿಗಳನ್ನು ಹಾಗೂ ರೈತರನ್ನು ಆತ್ಮಹತ್ಯೆಗೆ ದೂಡುತ್ತಿದ್ದಾರೆ.

ಬಹುರಾಷ್ಟ್ರೀಯ ಕಂಪನಿಗಳ ಕಣ್ಸನ್ನೆ ತಾಳಕ್ಕೆ ಹೆಜ್ಜೆ ಹಾಕುತ್ತ ಬಂದ ಸ್ವತಂತ್ರ ಭಾರತದ ಸಾರ್ವಭೌಮ ಸರ್ಕಾರಗಳು ಜನರ ಪ್ರತಿರೋಧ ಮತ್ತು ಪ್ರತಿಭಟನೆಗಳ ನಡುವೆಯೂ ಭಾರತೀಯ ಹಿತಾಸಕ್ತಿಯನ್ನು ಕಾಪಾಡಲು ಸಶಕ್ತವಾಗಿದ್ದ ೧೯೭೦ರ ಭಾರತೀಯ ಪೇಟೆಂಟ್ಸ್ ಕಾಯಿದೆಗೆ ತಿದ್ದುಪಡಿಯನ್ನು ೨೦೦೫ರಲ್ಲಿ ತರಲೇಬೇಕಾಯಿತು. ವಿಶ್ವ ವಾಣಿಜ್ಯ ಸಂಘಟನೆ ರೂಪಿಸಿದ 'ವ್ಯಾಪಾರ ಸಂಬಂಧೀ ಬೌದ್ಧಿಕ ಆಸ್ತಿ ಹಕ್ಕು' (ಟ್ರಿಪ್ಸ್) ಒಪ್ಪಂದಕ್ಕೆ ೧೯೯೫ರಲ್ಲಿ ಸಹಿ ಹಾಕಿದ ಭಾರತ, ನಂತರದಲ್ಲಿ ಅನಿವಾರ್ಯವಾಗಿ ೧೦ ವರ್ಷ ಹೆಣಗಾಡಿಸಿ ಹೋರಾಟಗಾರರನ್ನು ಸುಸ್ತು ಮಾಡಿ ಪೇಟೆಂಟ್ ಕಾಯಿದೆಗೆ ತಿದ್ದುಪಡಿಗಳನ್ನು ಮಾಡಲು ೨೦೦೫ರಲ್ಲಿ ಯಶಸ್ವಿಯಾಯಿತು.

ವಿಶ್ವವ್ಯಾಪಾರ ಸಂಘಟನೆ ನಿರ್ಣಾಯಕವಾಗಿ ಗೆಲುವು ಸಾಧಿಸಿದರೂ ಸರ್ಕಾರ ಸಾರ್ವಜನಿಕ ಒತ್ತಡ, ಎಡಪಕ್ಷಗಳು ಹಾಗೂ ಪ್ರಗತಿಪರ ಜನಸಂಘಟನೆಗಳ ಹೋರಾಟ ಗಳಿಗೆ ಮಣಿಯಿತು. ಕೆಲವೊಂದು ಸುರಕ್ಷಾ ವ್ಯವಸ್ಥೆಗಳನ್ನು ೨೦೦೫ರ ಪೇಟೆಂಟ್ ತಿದ್ದುಪಡಿ ಕಾಯ್ದೆಗಳಲ್ಲಿ ಉಳಿಸಿಕೊಳ್ಳುವುದು ಅನಿವಾರ್ಯವಾಯಿತು. ನಿರ್ಣಾಯಕ ಹೋರಾಟದಲ್ಲಿ ಗೆಲುವು ಸಾಧಿಸಿದ ಬಹುರಾಷ್ಟ್ರೀಯ ಕಂಪನಿಗಳು ಅಲ್ಪಸ್ವಲ್ಪ ಅಡೆತಡೆ ಮಾಡುತ್ತಿರುವ ಈ ಸುರಕ್ಷಾ ವ್ಯವಸ್ಥೆಗಳನ್ನು ಬುಡಮೇಲು ಮಾಡಿ ಭಾರತೀಯ ಆರ್ಥಿಕ ವ್ಯವಸ್ಥೆಯ ಮೇಲೆ ತಮ್ಮ ಪೂರ್ಣ ಪ್ರಭುತ್ವವನ್ನು ಸ್ಥಾಪಿಸಲು ಇಂತಹ ತಿಳುವಳಿಕೆ ಕರಾರುಗಳನ್ನು ಭಾರತ ಸರ್ಕಾರದ ಮೇಲೆ ಹೇರುತ್ತಿವೆ. ಸ್ವತಂತ್ರ ಭಾರತದ ಸಾರ್ವಭೌಮ ಸರ್ಕಾರಗಳು ಈ ಒತ್ತಡಗಳಿಗೆ ಮಣಿಯುತ್ತಲೇ ಬಂದಿವೆ.

ಬಹುರಾಷ್ಟ್ರೀಯ ಕಂಪನಿಗಳೇ ಹೇಳಿ ಬರೆಸಿದ ೨೦೦೫ರ ಭಾರತೀಯ ಪೇಟೆಂಟ್ಸ್ ಕಾಯಿದೆ ಇನ್ನು ಕೆಲವು ಅಂಶಗಳಲ್ಲಿ ಸಂಪೂರ್ಣವಾಗಿ ಅವುಗಳಿಗೆ ಶರಣಾಗಿಲ್ಲ. (೧) ಅಮೆರಿಕಾದಲ್ಲಿರುವಂತೆ ಭಾರತದಲ್ಲಿ ಅಲಾಗರಿಥಮ್ಸ್ ಅಥವಾ ವ್ಯಾಪಾರ ವಿಧಾನ ಗಳ ಮೇಲೆ ಪೇಟೆಂಟ್ಸ್ ಪಡೆಯಲು ಸಾಧ್ಯವಿಲ್ಲ. (೨) ನಕಲಿ ಅಥವಾ ಹುಸಿ ಪೇಟೆಂಟ್ಸ್ ಪಡೆಯಲು ಯಾರಾದರೂ ಪ್ರಯತ್ನಿಸಿದರೆ ಅದನ್ನು ಮಂಜೂರಾತಿ ಮುನ್ನ ವಿರೋಧಿಸಲು ಹಾಗೂ ತಡೆಯಲು ಭಾರತದಲ್ಲಿ ಅವಕಾಶವಿದೆ. ಇದನ್ನು ಬಳಕೆ ಮಾಡಿಕೊಂಡು ಇಂದು ಅನೇಕ ಭಾರತೀಯ ಔಷಧಿ ಕಂಪನಿಗಳು ಬಹುರಾಷ್ಟ್ರೀಯ ಔಷಧ ಕಂಪನಿಗಳ ಎವರ್ ಗ್ರೀನಿಂಗ್ ಹೆಸರಿನ ಮೋಸದ ಪೇಟೆಂಟ್‌ಗಳನ್ನು ಭಾರತದ ನೆಲದಲ್ಲಿ ಹಿಮ್ಮೆಟ್ಟಿಸುತ್ತಿವೆ. (೩) ಭಾರತದಲ್ಲಿ ಜೀವರೂಪಗಳ ಮೇಲೆ ಪೇಟೆಂಟ್ ಹಕ್ಕು ಪಡೆಯಲು ಸಾಧ್ಯವಿಲ್ಲ. ಇದಲ್ಲದೆ ಯಾವುದಾದರೂ ಹಳೆಯ ವಸ್ತುವಿನ ಹೊಸ ಉಪಯೋಗದ ಮೇಲಾಗಲಿ ಅಥವಾ ಅದರ ರೂಪಾಂತರದ ಮೇಲೆ ಪೇಟೆಂಟ್ ಪಡೆಯಲಾಗುವುದಿಲ್ಲ. ಇಂತಹ ರೂಪಾಂತರಿತ ಹಳೆಯ ವಸ್ತುಗಳ ಮೇಲೆ ಪೇಟೆಂಟ್ ನೀಡಬಹುದು. ಉತ್ತಮಪಡಿಸಿದ ಪರಿಣಾಮಕಾರತ್ವ ಹೊಂದಿರಬೇಕೆಂಬ ಷರತ್ತುಗಳಿವೆ. ಹೊಸ ರಾಸಾಯನಿಕ ಅಸ್ತಿತ್ವವುಳ್ಳವುಗಳಿಗೆ ಮಾತ್ರ ಪೇಟೆಂಟ್ ಪಡೆಯಬೇಕಾದರೆ ಅದು ಉತ್ತಮಪಡಿಸಿದ ಪರಿಣಾಮಾತ್ಮಕ ಹಾಗೂ ಹೊಸ ರಾಸಾಯನಿಕ ಅಸ್ತಿತ್ವವನ್ನು ನಿರ್ವಿವಾದವಾಗಿ



ಸಾಬೀತುಪಡಿಸಲು ಮೋಸ ಮಾಡಬಯಸುವ ಬಹು ರಾಷ್ಟ್ರೀಯ ಕಂಪನಿಗಳಿಗೆ ಸಾಧ್ಯವಾಗುತ್ತಿಲ್ಲ. ಭಾರತೀಯ ಪೇಟೆಂಟ್ ಕಾಯಿದೆಯಲ್ಲಿನ ಈ ವಿಶೇಷಗಳು ಬಹು ರಾಷ್ಟ್ರೀಯ ಕಂಪನಿಗಳ ಭೋಜನದಲ್ಲಿ ಕಂಟಕಪ್ರಾಯವಾದ ಮುಳ್ಳುಗಳಾಗಿ ಪರಿಣಮಿಸಿವೆ. ಈ ಕಂಟಕಗಳನ್ನು ತೊಡೆದುಹಾಕಿ ಭಾರತೀಯ ಮಾರುಕಟ್ಟೆಯಲ್ಲಿ ತಮ್ಮ ಪಾರಮ್ಯವನ್ನು ಪ್ರತಿಷ್ಠಾಪಿಸುವ ಭಾಗವಾಗಿ ಈ ಒಪ್ಪಂದ ಮಾಡಿಕೊಳ್ಳಲಾಗಿದೆ. ಮಾರ್ಗದರ್ಶನ, ಸಲಹೆ, ತರಬೇತಿಗಳನ್ನು ನೀಡುವ ಹೆಸರಿನಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಬಯಸುವ ಪೇಟೆಂಟ್‌ಗಳನ್ನು ಭಾರತದ ಪೇಟೆಂಟ್ ಕಛೇರಿಯ ಮೂಲಕವೇ ದೊರಕಿಸಿಕೊಡುವ ಷಡ್ಯಂತ್ರದ ಭಾಗ ಈ ತಿಳುವಳಿಕೆ ಕರಾರು.

ಅಮೆರಿಕಾದೊಂದಿಗೆ ಒಪ್ಪಂದವೇರ್ಪಟ್ಟ ಸಂದರ್ಭದಲ್ಲಿಯೇ ಸಿ.ಎಸ್.ಐ.ಆರ್. ಮುಖ್ಯಸ್ಥರಾಗಿದ್ದ ಆರ್. ಎ. ಮಷೇಲ್ಕರ್ ನೇತೃತ್ವದ ಪರಿಣತ ತಾಂತ್ರಿಕ ಸಮಿತಿ ೨೦೦೫ರಲ್ಲಿ ತಿದ್ದುಪಡಿ ಮಾಡಲಾದ 'ಭಾರತೀಯ ಪೇಟೆಂಟ್ ಕಾಯ್ದೆ ಟ್ರಿಪ್ಸ್' ಒಪ್ಪಂದಕ್ಕನುಗುಣವಾಗಿಯೇ ಎಂಬುದರ ಬಗ್ಗೆ ತನ್ನ ೫೬ ಪುಟಗಳ ಶಿಫಾರಸ್ಸನ್ನು ಸರ್ಕಾರಕ್ಕೆ ಸಲ್ಲಿಸಿತು. ಈ ಒಪ್ಪಂದ ಮತ್ತು ವರದಿ ಸಲ್ಲಿಕೆ ಒಂದೇ ತಿಂಗಳಿನಲ್ಲಿ ನಡೆದದ್ದು ಒಂದು ಪೂರ್ವ ನಿಯೋಜಿತ ಪಿತೂರಿ. ತಮಗೆ ಬೇಕೆನಿಸಿದ ತೀರ್ಮಾನವನ್ನು ವಿಧೇಯ ಭಾರತೀಯ ಸರ್ಕಾರದಿಂದ ಮಾಡಿಸಿಕೊಳ್ಳುವ ಬಹುರಾಷ್ಟ್ರೀಯ ಕಂಪನಿಗಳ ಹುನ್ನಾರ ಇದರಲ್ಲಿ ಅಡಗಿದೆ. ೨೦೦೫ರ ಪೇಟೆಂಟ್ ಕಾಯಿದೆಯಲ್ಲಿ ಲಭ್ಯವಿದ್ದ ಕೆಲವು ರಕ್ಷಣೆಗಳನ್ನು ಧೂಳೀಪಟ ಮಾಡಲು ಬಹುರಾಷ್ಟ್ರೀಯ ಕಂಪನಿಗಳು ತಾವು ಹೇಳಿ ಬರೆಸಿದ ಈ ವರದಿಯನ್ನೇ ಅಸ್ತ್ರವನ್ನಾಗಿ ಮಾಡಿಕೊಳ್ಳುತ್ತಿವೆ.

ಇದೇ ಫೆಬ್ರುವರಿ ೧೨ರಂದು ಟೈಮ್ಸ್ ಆಫ್ ಇಂಡಿಯಾ ದಿನಪತ್ರಿಕೆಯಲ್ಲಿ ಈ ಹುನ್ನಾರವನ್ನು ಬಯಲು ಮಾಡಲಾಯಿತು. ಆರ್. ಎ. ಮಷೇಲ್ಕರ್ ವರದಿಯ ತೀರ್ಮಾನದ ಭಾಗಗಳನ್ನು ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಸಂಶೋಧನಾ ವಿದ್ಯಾರ್ಥಿಯಾದ ಶಮ್‌ನಾದ್ ಬಷೀರ್ ಅವರ ಸಂಶೋಧನಾ ಪ್ರಬಂಧ 'Limiting the Patentability of Pharmaceutical Inventions and Micro Organisms' ಎಂಬ ೨೦೦೫ರ ಪ್ರಬಂಧದಿಂದ ಆಯ್ದು ೮-೧೦ ಸಾಲುಗಳನ್ನು ಯಥಾವತ್ತಾಗಿ ಅಕ್ಷರಶಃ ತೆಗೆದುಕೊಂಡು ಅದು ತಮ್ಮದೇ ಶಿಫಾರಸ್ಸು ಎಂಬಂತೆ ಬರೆಯಲಾಗಿತ್ತು. ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಬೌದ್ಧಿಕ ಆಸ್ತಿ ಹಕ್ಕು ಸಂಶೋಧನಾ ಕೇಂದ್ರದ ಈ ಸಂಶೋಧನೆಗೆ, ಐರೋಪ್ಯ ಒಕ್ಕೂಟ, ಜಪಾನ್ ಮತ್ತು ಅಮೆರಿಕಾದ ಔಷಧ ಸಂಶೋಧನಾ ಕಂಪನಿಗಳು ಧನಸಹಾಯ ಮಾಡಿ ವಿಶ್ವಾದ್ಯಂತ ಬೌದ್ಧಿಕ ಆಸ್ತಿ ಶಾಸನಗಳನ್ನು ಉತ್ತಮಪಡಿಸಲು ಮುಖವಾಣಿಯಾಗಿ ಕೆಲಸ ಮಾಡುತ್ತಿರುವ 'ಇಂಟರ್‌ಪಾಟ್' ಎಂಬ ಸ್ವಿಸ್ ಸಂಘ ನೆರವು ನೀಡಿತ್ತು. ಬಹುರಾಷ್ಟ್ರೀಯ ಕಂಪನಿಗಳು ಹಿಂಬಾಗಿಲ ಮೂಲಕ ಪ್ರಾಯೋಜಿಸಿ ಪ್ರಚುರಪಡಿಸುವ ವೈಜ್ಞಾನಿಕ ಅಧ್ಯಯನ ಸಂಶೋಧನೆಗಳೆಂಬ ಪ್ರಚಾರ ಸಾಮಗ್ರಿಗಳನ್ನು ಮಹಾಪ್ರಸಾದವೆಂದು ಸ್ವೀಕರಿಸಿ ಜೀರ್ಣಿಸಿಕೊಳ್ಳುವ ಸಾಮರ್ಥ್ಯವೂ ಇಲ್ಲದೆ ಅದನ್ನೇ ಹೊಸ ಪದಗಳಲ್ಲಿ ತಮ್ಮದೇ ಜ್ಞಾನವೆಂಬಂತೆ ಪುರುಚ್ಚರಿಸುವ ಸಾಮರ್ಥ್ಯವೂ ಇಲ್ಲದೆ ಪ್ರಚಾರ ಸಂಶೋಧನೆಯ ಸಾಲುಗಳನ್ನೇ ತಮ್ಮ ಶಿಫಾರಸ್ಸುಗಳೆಂದು ವಾಂತಿ ಮಾಡುವ ಇಂತಹ ವೈಜ್ಞಾನಿಕ ಸಮಿತಿಗಳ ಮಾನ ಬಹಿರಂಗವಾಗಿ ಇಂದು ಹರಾಜಾಗುತ್ತಿದೆ. ''ಕೃತಿ ಚೌರ್ಯ ಮತ್ತು ತಾಂತ್ರಿಕ ಅನಿಖರತೆಗಳುಳ್ಳ'' ಆರೋಪಕ್ಕೀಡಾಗಿರುವ ಆರ್. ಎ. ಮಷೇಲ್ಕರ್ ವರದಿಯನ್ನು ತಿರಸ್ಕರಿಸುವಂತೆ ಸಾರ್ವಜನಿಕ ಒತ್ತಾಯ ಬಂದಾಗ ಅದರ ಅಧ್ಯಕ್ಷರು ಸರ್ಕಾರಕ್ಕೆ ಬೇಷರತ್ ಕ್ಷಮಾಪಣಾಪತ್ರ ಬರೆದು ವರದಿಯನ್ನು ಅಂಗೀಕರಿಸದೆ ಹಿಂದಿರುಗಿಸಿ ಅದನ್ನು ೩ ತಿಂಗಳ ಅವಧಿಯಲ್ಲಿ ಸರಿಪಡಿಸಿ ಮರುಸಲ್ಲಿಸಲು ಸಮಿತಿಗೆ ಅವಕಾಶ ಮಾಡಿಕೊಡಬೇಕೆಂಬ ಮನವಿಯನ್ನು ಮಾಡಿದರು ಮತ್ತು ವಿವಾದ ಆರೋಪಗಳು ತೀವ್ರಗೊಂಡದ್ದರಿಂದ ಸಮಿತಿಗೆ ಇತ್ತೀಚೆಗೆ ರಾಜೀನಾಮೆ ನೀಡಬೇಕಾಯಿತು. ಈ ಎಲ್ಲಾ ಘಟನಾವಳಿಗಳು ನಿರ್ವಿವಾದವಾಗಿ ಶ್ರುತಪಡಿಸುವ ಅಂಶವೆಂದರೆ ಬಹುರಾಷ್ಟ್ರೀಯ ಕಂಪನಿಗಳು ತಮಗೆ ಅನುಕೂಲಕರವಾದ ನೀತಿಗಳನ್ನು ರೂಪಿಸಲು ಅತ್ಯಂತ ವೈವಿಧ್ಯಮಯ ಮತ್ತು ಷಡ್ಯಂತ್ರಗಳ ಬಲೆಯನ್ನು ಹೆಣೆದು ಸರ್ಕಾರಗಳನ್ನು, ವಿಜ್ಞಾನಿಗಳನ್ನು, ತಂತ್ರಜ್ಞರನ್ನು, ಸಂಶೋಧಕರನ್ನು ಮತ್ತು ಸ್ವಯಂಸೇವಾ ಸಂಸ್ಥೆಗಳನ್ನು ಅದರಲ್ಲಿ ಕೆಡವಿಕೊಳ್ಳುತ್ತವೆ. ಇಲ್ಲವೇ ವಿವಿಧ ರೂಪಗಳಲ್ಲಿ ಕೊಂಡುಕೊಳ್ಳುತ್ತವೆ. ತಮ್ಮ ಲಾಭದ ಲೂಟಿಗೆ ಇದೆಲ್ಲವೂ ಸಹಜವೆಂಬಂತೆ ಅವು ನಡೆದುಕೊಳ್ಳುತ್ತವೆ. ಇದಕ್ಕಾಗಿ ಈ ಕಂಪನಿಗಳು ಅಪಾರ ಹಣವನ್ನು ನೀರಿನಂತೆ ವೆಚ್ಚ ಮಾಡಿ ಸಾರ್ವಜನಿಕ ಅಭಿಪ್ರಾಯಗಳನ್ನು, ಸರ್ಕಾರಿ ಅಭಿಪ್ರಾಯಗಳನ್ನು ತಮಗೆ ಅನುಕೂಲವಾಗುವಂತೆ ರೂಪಿಸುತ್ತವೆ ಇಲ್ಲವೇ ಬದಲಾಯಿಸುತ್ತವೆ.



ನಾವು ಬೆಳೆದ ಮಾವಿನಹಣ್ಣು ಅಮೆರಿಕದ ಜಾರ್ಜ್‌ಬುಷ್ ಅಷ್ಟೇ ತಿಂತಾನೆ... ಕಣೇ!

ಬಹುರಾಷ್ಟ್ರೀಯ ಕಂಪನಿಗಳು ಈ ಎಲ್ಲಾ ಕೆಲಸಗಳನ್ನು ಬರೀ ಲಾಭದ ದೃಷ್ಟಿಯಿಂದ ಮಾತ್ರ ಮಾಡುವುದಿಲ್ಲ. ತಮ್ಮ ವಿರುದ್ಧ ಸ್ಪರ್ಧಿಸುವವರನ್ನು ಆ ಕ್ಷೇತ್ರದಿಂದ ನಿರ್ನಾಮ ಮಾಡಿ ಏಕಸ್ವಾಮ್ಯ ಆಧಿಪತ್ಯ ಸ್ಥಾಪಿಸಿಕೊಳ್ಳಲು ಪ್ರಜಾಪ್ರಭುತ್ವದ ಎಲ್ಲಾ ಅಂಗಗಳನ್ನು ತಮಗೆ ಬೇಕಾದಂತೆ ಬಳಸಿಕೊಳ್ಳುತ್ತವೆ. ಇದಕ್ಕೆ ಸಂಬಂಧಿಸಿದಂತೆ ಚೆನ್ನೈ ಹೈಕೋರ್ಟ್‌ನಲ್ಲಿ ನಡೆಯುತ್ತಿರುವ ಒಂದು ವ್ಯಾಜ್ಯ ಇಲ್ಲಿ ಹೆಚ್ಚು ಪ್ರಸ್ತುತವಾಗಿ ಇರುವುದರಿಂದ ಅದನ್ನಿಲ್ಲಿ ಪ್ರಸ್ತಾಪಿಸಬೇಕಾಗಿದೆ.

ನೊವಾರ್ಟಿಸ್ ಎ. ಜಿ. ಎಂಬ ಬಹುರಾಷ್ಟ್ರೀಯ ಕಂಪನಿ ಮೈಲಾಯ್ಡ್ ಲ್ಯುಕೇಮಿಯಾ ಎಂಬ ರಕ್ತ ಕ್ಯಾನ್ಸರ್ ರೋಗಕ್ಕೆ 'ಗ್ಲೀವೆಕ್' ಎಂಬ ಔಷಧಿಯನ್ನು ಸಂಶೋಧಿಸಿ ಅನೇಕ ರಾಷ್ಟ್ರಗಳಲ್ಲಿ ಅದಕ್ಕೆ ಪೇಟೆಂಟ್ ಪಡೆದುಕೊಂಡು ಅತ್ಯಂತ ದುಬಾರಿ ಬೆಲೆಗೆ ಮಾರಾಟ ಮಾಡುತ್ತಿದೆ. 'ಗ್ಲೀವೆಕ್' ಎಂಬ ಬ್ರಾಂಡ್‌ನ ಈ ಔಷಧಿ ಇಮಾಟಿನಿಬ್ ಎಂಬ ರಾಸಾಯನಿಕದಿಂದ ರೂಪಿತಗೊಂಡಿದೆ. ಇದೇ ರಾಸಾಯನಿಕವನ್ನು ಹರಳಿನ ರೂಪದಲ್ಲಿ ಇಮಾಟನಿಬ್ ಮೆಸಾಲೆಟ್ ಎಂದು ಕರೆಯಲಾಗುತ್ತದೆ. ಸಿಪ್ಲಾ, ನ್ಯಾಟ್ಕೋ ಹೆಟ್ರೋ, ರ್‍ಯಾನ್‌ಬಾಕ್ಸಿ ಮುಂತಾದ ಭಾರತೀಯ ಔಷಧಿ ಕಂಪನಿಗಳು ಈ ರಾಸಾಯನಿಕವನ್ನು ನೋವಾರ್ಟಿಸ್‌ಗಿಂತ ವಿಭಿನ್ನ ವಿಧಾನದಿಂದ ಸಂಸ್ಕರಿಸಿ, ಈ ವಿಧದ ರಕ್ತ ಕ್ಯಾನ್ಸರ್ ಕಾಯಿಲೆಗೆ ಅತ್ಯಂತ ಕಡಿಮೆ ಬೆಲೆಯಲ್ಲಿ ಜೆನಿರಿಕ್ ರೂಪದ ಔಷಧಿಯನ್ನು ರೂಪಿಸಿ ಭಾರತ ಮುಂತಾದ ಬಡರಾಷ್ಟ್ರಗಳಲ್ಲಿ ಮಾರಾಟ ಮಾಡುತ್ತಿವೆ. ಒಂದು ತಿಂಗಳಿಗೆ ಒಬ್ಬ ಕ್ಯಾನ್ಸರ್ ರೋಗಿ ಹತ್ತು ಸಾವಿರ ತೆತ್ತು ಈ ಜೆನರಿಕ್ ಔಷಧಿಗಳನ್ನು ಕೊಂಡು ತನ್ನ ಜೀವ ಉಳಿಸಿಕೊಳ್ಳಬಲ್ಲ. ಇದು ತಪ್ಪಿ ಅವರು ಇದೇ ನೋವಾರ್ಟಿಸ್‌ನ ಬ್ರಾಂಡ್ ಔಷಧಿ 'ಗ್ಲೀವೆಕ್' ಕೊಳ್ಳಲು ಅವರಿಗೆ ತಿಂಗಳಿಗೆ ಒಂದು ಕಾಲು ಲಕ್ಷ ಹಣ ಬೇಕಾಗುತ್ತದೆ.

'ಎವರ್‌ಗ್ರೀನಿಂಗ್ ಪೇಟೆಂಟ್' ಎಂಬ ಪದ್ಧತಿಯನ್ನನುಸರಿಸಿ ಹಾಲಿ ಬಳಕೆಯಲ್ಲಿರುವ ಔಷಧಿಯ ರಾಸಾಯನಿಕ ರೂಪವನ್ನು ಅಲ್ಪಸ್ವಲ್ಪ ಬದಲಾಯಿಸಿ ಅದರ ಮೇಲೆ ಮತ್ತೆ ಪೇಟೆಂಟ್ ಪ್ರಭುತ್ವವನ್ನು ಮುಂದುವರಿಸಿಕೊಂಡು ಹೋಗುವ ಬಹುರಾಷ್ಟ್ರೀಯ ಕಂಪನಿಗಳ ತಂತ್ರಗಾರಿಕೆಯನ್ನು ಪೇಟೆಂಟ್‌ಗಳ ಎವರ್‌ಗ್ರೀನಿಂಗ್ ಎಂದು ಕರೆಯಲಾಗುತ್ತದೆ. ಈ ತಂತ್ರ ಬಳಸಿ ಪೇಟೆಂಟ್‌ಗಳ ನಿಗದಿತ ಅವಧಿ ಮುಗಿದುಹೋದ ಮೇಲೆ ಅದು ಸಾರ್ವಜನಿಕ ಆಧಿಪತ್ಯಕ್ಕೆ ಜಾರುತ್ತದೆ. ಆಗ ಆ ವಸ್ತುವನ್ನು ಯಾರು ಬೇಕಾದರೂ ಪೇಟೆಂಟ್‌ದಾರರ ಅನುಮತಿ ಇಲ್ಲದೆ ಉತ್ಪಾದಿಸಬಹುದು. ಇದನ್ನು ತಪ್ಪಿಸಲು ಪೇಟೆಂಟ್ ಪಡೆದ ಬಹುರಾಷ್ಟ್ರೀಯ ಕಂಪನಿಗಳು ಎವರ್‌ಗ್ರೀನಿಂಗ್ ತಂತ್ರವನ್ನನುಸರಿಸುತ್ತವೆ. ನೋವಾರ್ಟಿಸ್ 'ಗ್ಲೀವೆಕ್' ಎಂಬ ಔಷಧಿಗೆ ಪೇಟೆಂಟ್ ಪಡೆಯಲು ಚೆನ್ನೈನಲ್ಲಿ ಅರ್ಜಿ ಸಲ್ಲಿಸಿತು. ಇದು ಉತ್ತಮಪಡಿಸಲಾದ ಪರಿಣಾಮಕಾರತ್ವ ಹೊಂದಿರುವ ಹೊಸ ರಾಸಾಯನಿಕ ಅಸ್ತಿತ್ವ ಹೊಂದಿದ ಔಷಧಿಯಲ್ಲದ್ದರಿಂದ ಭಾರತೀಯ ಪೇಟೆಂಟ್ ಕಾಯಿದೆ ೩(ಡಿ)ಯ ಪ್ರಕಾರ ಪೇಟೆಂಟ್‌ಗೆ ಅರ್ಹವಲ್ಲವೆಂದು ತೀರ್ಮಾನಿಸಿ ಅವರ ಅರ್ಜಿಯನ್ನು ತಿರಸ್ಕರಿಸಲಾಯಿತು. ಆದ್ದರಿಂದ ಭಾರತದ ಪೇಟೆಂಟ್ ಕಾನೂನು ವಿಶ್ವವಾಣಿಜ್ಯ ಸಂಘಟನೆಯ ಟ್ರಿಪ್ಸ್ ಒಪ್ಪಂದದ ಉಲ್ಲಂಘನೆಯಾಗಿದೆ ಎಂದು ಭಾರತ ಸರ್ಕಾರ, ಭಾರತೀಯ ಕಂಪನಿಗಳು ಹಾಗೂ ಕೆಲವು ಸ್ವಯಂ ಸೇವಾ ಸಂಘಟನೆಗಳ ಮೇಲೆ ಚೆನ್ನೈ ಹೈಕೋರ್ಟ್‌ನಲ್ಲಿ ನೊವಾರ್ಟಿಸ್ ಮೊಕದ್ದಮೆ ಹೂಡಿದೆ. ಇದು ತನ್ನ ಸಮರ್ಥನೆಗೆ ಆರ್.ಎ. ಮಷೇಲ್ಕರ್ ವರದಿಯ ಶಿಫಾರಸ್ಸುಗಳನ್ನು ಉಲ್ಲೇಖಿಸುತ್ತಿದೆ.

ಈ ಮೊಕದ್ದಮೆ ವಿಶ್ವಾದ್ಯಂತ ಗಮನ ಸೆಳೆದಿದೆ. ಮೆಡಿಸಿನ್ಸ್ ಸ್ಯಾನ್ಸ್ ಬಾರ್ಡರ್ಸ್ (ಗಡಿಗಳಿಲ್ಲದ ವೈದ್ಯರು) ಎಂಬ ವೈದ್ಯಕೀಯ ಸಂಘ ಜಾಗತಿಕ ಮಟ್ಟದಲ್ಲಿ ನೋವಾರ್ಟಿಸ್‌ನ ಈ ಹುನ್ನಾರದ ವಿರುದ್ಧ ಜನಜಾಗೃತಿ ಮೂಡಿಸುತ್ತಿದೆ. ೩ ಲಕ್ಷಕ್ಕೂ ಅಧಿಕ ಜನ ಸಹಿ ಮಾಡಿ

ಬಡರೋಗಿಗಳ ಹಿತದೃಷ್ಟಿಯಿಂದ. ಈ ಮೊಕದ್ದಮೆಯನ್ನು ಹಿಂದೆ ಪಡೆಯಬೇಕೆಂದು ಒತ್ತಾಯ ಮಾಡುತ್ತಿದೆ. ಏಡ್ಸ್‌ನಂತಹ ವಿನಾಶಕ ರೋಗಗಳಿಗೆ ರೂಪಿಸಲಾಗಿರುವ ಆರ್ಟ್ ಚಿಕಿತ್ಸೆಯಲ್ಲಿ ಬಳಸಲಾಗುವ ಔಷಧಿಗಳು ಪೇಟೆಂಟ್ ಪಡೆದ ಔಷಧಿಗಳಾದರೆ ಆಫ್ರಿಕಾದಂತಹ ಬಡ ದೇಶಗಳ ಜನರು ದುಬಾರಿ ಬೆಲೆಯ ಔಷಧಿಗಳನ್ನು ಕೊಳ್ಳಲು ಸಾಧ್ಯವಾಗುವುದಿಲ್ಲ. ಭಾರತೀಯ ಕಂಪನಿ ಸಿಪ್ಲಾ ಆರ್ಟ್ ಚಿಕಿತ್ಸೆಗೆ ಬೇಕಾದ ಜೆನಿರಿಕ್ ಔಷಧಿಗಳನ್ನು ಉತ್ಪಾದಿಸುವವರೆಗೂ ಒಬ್ಬ ಏಡ್ಸ್ ರೋಗಿ ಆರ್ಟ್ ಚಿಕಿತ್ಸೆಗೆ ವಾರ್ಷಿಕವಾಗಿ ೧೨,೦೦೦ ಡಾಲರು ತೆರಬೇಕಾಗಿತ್ತು. ಆದರೆ ಇಂದು ಸಿಪ್ಲಾದ ಜೆನಿರಿಕ್ ಔಷಧಿ ಫಲವಾಗಿ ಈ ಚಿಕಿತ್ಸೆ ವಾರ್ಷಿಕವಾಗಿ ಕೇವಲ ೩೬೫ ಡಾಲರ್‌ಗಳಿಗೆ ದೊರಕುತ್ತಿದೆ. ಈ ಅಂಕಿ ಅಂಶಗಳು ಹೆಸರಾಂತ ಬಹುರಾಷ್ಟ್ರೀಯ ಔಷಧಿ ತಯಾರಿಕಾ ಕಂಪನಿಗಳು ಯಾವ ಪ್ರಮಾಣದಲ್ಲಿ ಬಡರೋಗಿಗಳ ರಕ್ತಹೀರಿ ಕೊಬ್ಬುತ್ತಿವೆ ಎಂಬುದನ್ನು ಸಾಬೀತುಪಡಿಸುತ್ತವೆ. ಈ ಜಿಗಣೆ ಜಾತಿಯ ಕಂಪನಿಗಳು ಜೆನಿರಿಕ್ ಔಷಧಿ ಉದ್ಯಮವನ್ನೆ ಸಂಪೂರ್ಣವಾಗಿ ಧ್ವಂಸ ಮಾಡಲು ಪಣತೊಟ್ಟಿವೆ. ಎಂ.ಎಸ್.ಎಫ್.ನ ಅಧ್ಯಯನದ ರೀತ್ಯಾ ಭಾರತದಲ್ಲಿ ಉತ್ಪಾದನೆಯಾಗುತ್ತಿರುವ ಶೇ. ೬೭ರಷ್ಟು ಜೆನಿರಿಕ್ ಔಷಧಿಗಳು ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ರಫ್ತಾಗಿ ಅವರ ಜೀವ ಉಳಿಸುತ್ತಿವೆ. ಯುನಿಸೆಫ್ ವಿತರಿಸುತ್ತಿರುವ ಶೇ. ೫೦ರಷ್ಟು ಔಷಧಗಳು ಭಾರತದಲ್ಲಿ ತಯಾರಿಸಿಯಾಗಿವೆ. ಸ್ವತಃ ಔಷಧಿ ತಯಾರಿಸುವ ಸಾಮರ್ಥ್ಯವುಳ್ಳವು ಅನೇಕ ದೇಶಗಳು ಅದಕ್ಕೆ ಅಗತ್ಯವಿರುವ ಮೂಲ ರಾಸಾಯನಿಕ ಸಾಮಗ್ರಿಗಳನ್ನು ಭಾರತದಿಂದ ಆಮದು ಮಾಡಿಕೊಳ್ಳುತ್ತಿವೆ. ಈ ಮೊಕದ್ದಮೆಯ ಮೂಲಕ ಬಹುರಾಷ್ಟ್ರೀಯ ಕಂಪನಿಗಳು ಸಾರ್ವಜನಿಕ ಆರೋಗ್ಯದ ಮೇಲೆ ಸಮರವನ್ನೇ ಸಾರಿವೆ. ತಮ್ಮ ಲಾಭದ ದಾಹಕ್ಕೆ ವಿಶ್ವಾದ್ಯಂತ ರೋಗಿಗಳನ್ನು ಬಲಿ ತೆಗೆದುಕೊಳ್ಳಲು ಬಹುರಾಷ್ಟ್ರೀಯ ಕಂಪನಿಗಳು ಮುಂದಾಗುತ್ತಿವೆ. ಔಷಧಿಗಳನ್ನು ಕಡಿಮೆ ಬೆಲೆಯಲ್ಲಿ ಉತ್ಪಾದಿಸಿ ರೋಗಿಗಳಿಗೆ ಹಂಚಲು ಸಾಧ್ಯವಿದ್ದರೂ ಪೇಟೆಂಟ್ ಹಕ್ಕುಗಳನ್ನು ಮುಂದೆ ಮಾಡಿ ಅವು ಜನರ ಜೀವಿಸುವ ಹಕ್ಕನ್ನೇ ಕಸಿಯುತ್ತಿವೆ. ಲಾಭದ ಹಕ್ಕು ಮತ್ತು ಜೀವಿಸುವ ಹಕ್ಕುಗಳ ನಡುವಿನ ಮಹಾಸಮರದಲ್ಲಿ ಸರ್ಕಾರ ಯಾರ ಪರ ನಿಲ್ಲುತ್ತೆ, ಜನತೆ ಯಾವ ರೀತಿ ಭಾಗಹಿಸುತ್ತಾರೆ ಎಂಬುದನ್ನು ಕಾದು ನೋಡಲಾಗುತ್ತಿದೆ. ಈ ಮಹಾಸಮರದಲ್ಲಿನ ಸೋಲು ಮಾನವತೆಯ ಸೋಲೇ ಆಗಬಹುದಾಗಿದೆ. ಅಮೆರಿಕಾದಲ್ಲಿ ವಾರ್ಷಿಕ ೨ ಲಕ್ಷ ಪೇಟೆಂಟ್‌ಗಳನ್ನು ನೀಡಲಾಗುತ್ತದೆ. ಅದು ಸುಮಾರು ೩.೫ ಲಕ್ಷ ಅರ್ಜಿಗಳನ್ನು ಪರಿಶೀಲಿಸಿ ಈ ಸಂಖ್ಯೆಯ ಪೇಟೆಂಟ್‌ಗಳನ್ನು ನೀಡಿದರೆ ಅದರ ಪರಿಶೀಲನೆಯ ಸ್ವರೂಪ ಎಂತಹುದೆಂಬುದನ್ನು ಊಹಿಸಿಕೊಂಡರೆ ಭಯವಾಗುತ್ತದೆ. ಭಾರತದಲ್ಲಿಯೂ ಕಳ್ಳೆಪುರಿ ವ್ಯಾಪಾರದ ರೀತಿಯಲ್ಲಿ ಪೇಟೆಂಟ್‌ಗಳನ್ನು ಅರ್ಜಿ ಗುಜರಾಯಿಸಿದ ಬಹುರಾಷ್ಟ್ರೀಯ ಕಂಪನಿಗಳಿಗೆ ದೊರಕಿಸಿಕೊಡಲು ಈ ತಿಳಿವಳಿಕೆ ಕರಾರು ಪತ್ರ ರಾಷ್ಟ್ರೀಯ ಹೆದ್ದಾರಿ ರೂಪಿಸಲಿದೆ. ಈ ಪೇಟೆಂಟ್ ಪ್ರವಾಹದಲ್ಲಿ ಭಾರತೀಯ ಜೆನರಿಕ್ ಔಷಧ ತಯಾರಿಕಾ ಕಂಪನಿಗಳು ಕೊಚ್ಚಿಹೋಗುತ್ತವೆ. ಈ ಪೇಟೆಂಟ್ ಪಡೆಯ ಪೆರೇಡ್ ಹೀಗೆಯೇ ಮುಂದುವರಿದರೆ ಅತ್ಯಂತ ಭಯಾನಕ ಪರಿಸ್ಥಿತಿ ನಿರ್ಮಾಣವಾಗುವುದರಲ್ಲಿ ಸಂಶಯವಿಲ್ಲ. ಬರೀ ಆರೋಗ್ಯ ಕ್ಷೇತ್ರದಲ್ಲಷ್ಟೇ ಅಲ್ಲದೆ ಕೃಷಿ ಕ್ಷೇತ್ರದಲ್ಲಿಯೂ ಪೇಟೆಂಟ್ ವ್ಯವಸ್ಥೆ ವಿಜೃಂಭಿಸಲಿದೆ. ಅಧಿಕ ಇಳುವರಿಯ ಬೀಜ ತಳಿಗಳು, ಆಧುನಿಕ ಕೀಟ ಮತ್ತು ಕಳೆನಾಶಕಗಳು ಹಾಗೂ ಜೈವಿಕ ತಂತ್ರಜ್ಞಾನ ಆಧರಿತ ಕೃಷಿ, ತರಕಾರಿ, ತೋಟಗಾರಿಕಾ ತಳಿಗಳಲ್ಲಿ ಏಕಸ್ವಾಮ್ಯ ರೂಪಿತವಾಗಿ ದೇಸೀಯ ತಳಿಗಳು ಸಂಪೂರ್ಣವಾಗಿ ವಿನಾಶಗೊಳ್ಳುವ ಅಪಾಯವಿದೆ. ಇವು ನಮ್ಮ ಕೃಷಿ ಮತ್ತು ಜಾನುವಾರು ವೈವಿಧ್ಯತೆಗೆ ಮಾರಕವಾಗಬಹುದಾಗಿದೆ. ಈ ಪೇಟೆಂಟ್ ಕಾಲಾಳುಗಳ ಪಡೆಯ ಧಾಳಿಗೆ ಭಾರತ ಬಲಿಯಾಗುವುದೇ ಅಥವಾ ಅದನ್ನು ಹಿಮ್ಮೆಟ್ಟಿಸಿ ತಲೆಯೆತ್ತಿ ನಿಲ್ಲುತ್ತದೆಯೇ ಎನ್ನುವುದನ್ನು ಇಡೀ ಜಗತ್ತು ಆತಂಕದಿಂದ ಕಾದು ನೋಡುತ್ತಿದೆ. ಈ ಪೇಟೆಂಟ್ ಮಹಾಸಮರದಲ್ಲಿ ಬಹುರಾಷ್ಟ್ರೀಯ ಕಂಪನಿಗಳ ಕೈ ಮೇಲಾದರೆ ಅಮಾಯಕ ರೋಗಿಗಳು ಹಾಗೂ ರೈತರು ಬಲಿಯಾಗುವುದನ್ನು ತಡೆಯುವವರು ಯಾರು ?


ಸಿ. ಯತಿರಾಜು
ಪ್ರಾಚಾರ್ಯರು, ಕಾಳಿದಾಸ ಪದವಿ ಪೂರ್ವ ಕಾಲೇಜು
ತುಮಕೂರು - ೫೭೨ ೧೦೬


## ನೆಲದ ಶಿವ

ನೆಲದ ಶಿವನ
ಮೌನ ಧ್ಯಾನ
ಅಕ್ಷರದೇವಿಯ ಎದುರು
ಜನಜಂಗುಳಿಯ
ಮಹಾಮೆರವಣಿಗೆ
ಸಾಕ್ಷಾತ್ ಶಿವನ ನಿಟ್ಟುಸಿರು

ಪದಕದಾಸೆ ಬಿಟ್ಟ
ಬಾಹುಬಲಿಯ ಬಲಿಷ್ಠತೆಯ
ಶಿವಗೆ ರಾಷ್ಟ್ರಕವಿ ಪದವಿ
ಸಾಮಗಾನದ ಕವಿಗೆ
ಹಣತೆ ಹಚ್ಚಿದ ರವಿಗೆ
ಋಣವ ತೀರಿಸಲಾದೀತೆ ?

ಮೃದು ಮಧುರವಾಣಿ
ಮಂದಹಾಸ ಮೆಲುನಡಿಗೆ
ಅಡಿಗಡಿಗೆ ಹೂ ನಗೆಯ ದೀಪ
ಕಡಲ ಕುಡಿಯುವ
ಗಗನದಾಚೆ ಇಣುಕುವ ತವಕದ
ಮೌನಿ ಧ್ಯಾನಿ ಶಿವನಪ್ಪ ರುದ್ರ !

ಮಲ್ಲಿಗೆ ನಗೆಯ ಮನಸು
ಪುಟ್ಟ ಕಂಗಳ ತುಂಬ ಕನಸು
ಪುಟ್ಟ ಕಂದಮ್ಮಗಳ ತಬ್ಬುವ ತಾಯಿಪ್ರೀತಿ
ಸಹ್ಯಾದ್ರಿಯ ರೌದ್ರತೆ
ಜೋಗದ ರಮಣೀಯತೆ
ಹದ ಬೆರೆತ ಮುದ ನೀಡುವ ಜೀವನ ರೀತಿ

ಕೋಗಿಲೆಯ ಕೂಗು
ನವಿಲ ನರ್ತನದ ಸೊಬಗು
ವಸಂತನ ಮನೆಯಳಿಯನೀ ಶಿವ
ಹಳದೆ ಹೂವು ಚೆಲ್ಲಿ
ಬೀದಿ ಬೀದಿಗೆ ಇಟ್ಟು ಜೀವರಂಗವಲ್ಲಿ
ಶಿವ-ಶಿವೆಯರ ಮಾತು ಮೌನ... ಮೌನ


ಎಚ್. ಕೆ. ವೆಂಕಟೇಶ
ಸಂಶೋಧಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು - ೬




# ಪಾಕಿಸ್ತಾನದಲ್ಲಿ ಮಹಿಳಾ ಹಕ್ಕುಗಳು

**ಪಾ**ಕಿಸ್ತಾನದ ಪಂಜಾಬ್ ಪ್ರಾಂತ್ಯದ ಜಿಲಾ ಹುಮಾ ಉಸ್ಮಾನಿ ಎಂಬ ಪ್ರಗತಿಪರ ವಿಚಾರಧಾರೆಯ ಸಮಾಜ ಕಲ್ಯಾಣ ಖಾತೆಯ ಮಂತ್ರಿಯಾದ ಮಹಿಳೆಗೆ ದಿನಾಂಕ ೨೦-೨-೨೦೦೭ರಂದು ಮಹಮ್ಮದ್ ಸರ್ವರ್ ಎಂಬಾತ ಪಕ್ಷದ ಕಾರ್ಯಕರ್ತನಂತೆ ಬಂದು ಹುಮಾರವರ ಮೇಲೆ ಗುಲಾಬಿ ಹೂವಿನ ಪಕಳೆಗಳನ್ನು ಹಾಕಿ ಗುಂಡಿನಿಂದ ಹೊಡೆದು ಸಾಯಿಸಿ ಪರಾರಿಯಾದ. ''ಅವನು ಗುಂಡಿನಿಂದ ಹೊಡೆಯುವ ಸಮಯದಲ್ಲಿ ಹುಮಾ ಉಸ್ಮಾನಿಯವರು ಪಕ್ಷದ ಕಾರ್ಯಕರ್ತರನ್ನು ಭೇಟಿಯಾಗುತ್ತಿದ್ದರು'' – ಎಂದು ಗುಜ್ರನ್‌ವಾಲಾದ ಪ್ರಾದೇಶಿಕ ಕಾನೂನು ಮಂತ್ರಿ ರಾಜಾ ಬಶರ್ರತ್ ಹೇಳಿದ್ದಾರೆ. ''ಅವರನ್ನು ಕೊಲ್ಲಲು ಅವರು ಇಸ್ಲಾಮಿಕ್ ಉಡುಪು ಸಂಹಿತೆ ಅನುಸರಿಸಿ ಬುರ್ಖಾ ಹಾಕದಿರುವುದು ಕಾರಣ'' ಎಂದು ಅಲ್ಲಿಯ ಸ್ಥಳೀಯ ಪೊಲೀಸರು ಹೇಳುತ್ತಾರೆ. ಅದೂ ಅಲ್ಲದೆ ಅವರು ಮುಸ್ಲಿಂ ಮಹಿಳಾ ಸ್ವಾತಂತ್ರ್ಯದ ಬಗ್ಗೆ ಚಳುವಳಿ ನಡೆಸಿದ್ದರು ಎನ್ನಲಾಗಿದೆ. ಹುಮಾ ಉಸ್ಮಾನಿ ಜನರಲ್ ಮುಷರ್ರಫ್‌ರವರ ಕಟ್ಟಾ ಅಭಿಮಾನಿಯಾಗಿದ್ದರು. ಮೊಟ್ಟಮೊದಲ ಬಾರಿಗೆ ಪಾಕಿಸ್ತಾನದಲ್ಲಿ 'ಮ್ಯಾರಥಾನ್ ಓಟವನ್ನು ೨೦೦೫ರಲ್ಲಿ ಪಾಕಿಸ್ತಾನಿ ಮಹಿಳೆಯರಿಗೂ ಇಸ್ಲಾಮಾಬಾದ್‌ನಲ್ಲಿ ಏರ್ಪಡಿಸಿದ್ದ ಶ್ರೇಯಸ್ಸು ಅವರಿಗೆ ಸೇರುತ್ತದೆ.

ಪ್ರಗತಿಯ ಆಶಾಕಿರಣವಾಗಿದ್ದ ಇಂತಹ ಹುಮಾ ಉಸ್ಮಾನಿಯವರನ್ನೇ ಗುಂಡಿಕ್ಕಿ ಕೊಲ್ಲುವುದಕ್ಕೆ ಹೇಸದವರು ಸಾಮಾನ್ಯ ಮಹಿಳೆಯರ ಪ್ರಗತಿಪರ ಚಟುವಟಿಕೆಗಳನ್ನು ಸಹಿಸಿಯಾರೆ? ಎಂಬುದು ಇಲ್ಲಿಯ ಪ್ರಶ್ನೆ. ಮಹಿಳೆಯರ ಹಕ್ಕುಗಳಿಗಾಗಿ ಹೋರಾಟ ನಡೆಸಿದ 'ರಾವಾ' (ರೆವೆಲ್ಯೂಶನರಿ ಆಸೋಸಿಯೇಶನ್ ಆಫ್ ದಿ ವಿಮೆನ್ ಆಫ್ ಆಫ್ಘಾನಿಸ್ತಾನ್) ಎಂಬ ಆಫ್ಘಾನಿಸ್ತಾನದ ಮಹಿಳಾ ಸಂಘಟನೆಯ ಹೋರಾಟಗಾರ್ತಿ ಮೀನಾ ಅವರನ್ನು ೧೯೮೭ರ ಫೆಬ್ರವರಿ ತಿಂಗಳ ೪ನೇ ತಾರೀಖಿನಂದು ಪಾಕಿಸ್ತಾನದ ಕ್ವೆಟ್ಟಾದಲ್ಲಿ ಕೆ.ಎಚ್.ಎ.ಡಿ.ನ ಏಜೆಂಟರು ಕೊಂದುಹಾಕಿದ್ದರು. ಮೀನಾ ೧೯೭೭ರಲ್ಲಿ ಸ್ಥಾಪಿಸಿದ ರಾವಾ ಈಗಲೂ ಕೆಲಸ ಮಾಡುತ್ತಿದೆ.

ಸ್ತ್ರೀಯರ ವೈಚಾರಿಕತೆಯನ್ನು, ಸ್ವಾತಂತ್ರ್ಯವನ್ನು ಹಾಗೂ ಸ್ವಾಭಿಮಾನವನ್ನು ಸಹಿಸದ ಧರ್ಮಭೀರುಗಳೆಂದು ಹೇಳಿಕೊಳ್ಳುವ ಹಿಟ್ಲರ್‌ಶಾಹಿಯ ನಡವಳಿಕೆಗಳು ಇಂದಿನ ಪಾಕಿಸ್ತಾನಿ ಮಹಿಳೆಯರ ಬಹುಮುಖ್ಯ ಸಮಸ್ಯೆಯಾಗಿದೆ. ಬಂದೂಕಿನ ನಳಿಕೆಯಡಿ ಅವರ ಜೀವನ ನಲುಗುತ್ತಿದೆ. ಯುಗೋಸ್ಲಾವಿಯಾದ ಸ್ತ್ರೀವಾದಿ ರಾಡಾ ಇವೆಕೊವಿಕ್ ಹೇಳುವಂತೆ ''ಪಿತೃಪ್ರಾಧಾನ್ಯತೆಯ ಜಾಗತೀಕರಣವು ಅತ್ಯಂತ ಪ್ರಾಚೀನವಾದದ್ದು. ಹೆಂಗಸರನ್ನು ನಿಯಂತ್ರಣಕ್ಕೊಳಪಡಿಸಲು ಹಿಂಸೆ ಅತ್ಯಂತ ಅಗತ್ಯವಾದ ಅಂಶ''. ಹಿಂಸೆ ಎನ್ನುವುದು ಪುರುಷಾಧಿಪತ್ಯದ ಭಾಗವಾಗಿಯೇ ಅಂತರ್ಗಾಮಿಯಾಗಿ ಹರಿಯುತ್ತಲೇ ಇದೆ. ಅದು ಪಾಕಿಸ್ತಾನವಾಗಿರಬಹುದು, ಇರಾನ್, ಇರಾಕ್, ಆಫ್ಘಾನಿಸ್ತಾನವೇ ಆಗಿರಬಹುದು. ಭಯೋತ್ಪಾದನೆಯು ವ್ಯಾಪಕವಾಗಿ ಇಸ್ಲಾಮಿಕ್ ವ ಇಸ್ಲಾಮೇತರ ರಾಷ್ಟ್ರಗಳಲ್ಲಿ ವ್ಯಾಪಕವಾಗಿ ಹಬ್ಬಿದೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ಮಹಿಳೆಯರ ಮೇಲೆ ಹೆಚ್ಚುತ್ತಿರುವ ಹಿಂಸೆಯ ಕುರಿತು ಚರ್ಚೆ ಜರುಗುತ್ತಲೇ ಇದೆ.

ಪಿತೃಪ್ರಾಧಾನ್ಯತೆ ಅಥವಾ ಪುರುಷಪ್ರಾಧಾನ್ಯತೆಗಳು ಧಾರ್ಮಿಕ ಮೂಲಭೂತವಾದದೊಂದಿಗೆ ಸೇರಿ, ಮಹಿಳೆಯರ ಬದುಕನ್ನು ಹಿಂಸಿಸುತ್ತಲೇ ಬಂದಿವೆ. ಶಾಂತಿಯುತ ದಿನಗಳೇ ಇರಲಿ, ಯುದ್ಧಕಾಲವೇ ಇರಲಿ ಮಹಿಳೆಯರು ಮತ್ತು ಮಕ್ಕಳು ತಮ್ಮ ಮಾನವೀಯ ಹಕ್ಕುಗಳನ್ನೂ ಕೇಳಲಾಗದ ಸಾಮಾಜಿಕ, ರಾಜಕೀಯ ಸ್ಥಿತಿಗತಿ ಏರ್ಪಟ್ಟಿದೆ. ಬುಶ್‌ನ ಸಂತತಿಗಾಗಲಿ, ಲಾಡೆನ್‌ನ ಸಂತತಿಗಾಗಲಿ ಹಿಂಸೆ ಮತ್ತು ಅಹಿಂಸೆ ಈ ಎರಡೂ ಶಬ್ದಗಳ ಅರ್ಥ ಅವರ ಶಬ್ದಕೋಶದಲ್ಲಿ ಒಂದೇ ಆಗಿದೆ. ದುಷ್ಟ ಶಿಕ್ಷೆ - ಶಿಷ್ಟ ರಕ್ಷೆ ಎರಡೂ ಶಬ್ದಗಳಿಗೂ ಇಲ್ಲಿ ಒಂದೇ ಅರ್ಥ.

ರಾಜಕೀಯ ದೌರ್ಜನ್ಯದ ಬಿಸಿ ಹೆಚ್ಚು ಹೆಚ್ಚಾಗಿ ಹೆಣ್ಣುಮಕ್ಕಳಿಗೆ ತಟ್ಟುತ್ತಿದೆ. ಮನೆಯ ಒಳಗೆ ಮತ್ತು ಹೊರಗೆ ಅಥವಾ ರಾಜಕೀಯ ಅಧಿಕಾರದ ಸಂರಚನೆಯಲ್ಲಿ ಮಹಿಳೆಯರಿಗೆ ಸ್ಥಾನವನ್ನು ನೀಡುವುದು ಬಹಳ ಗೌಣ. ಆದಾಗ್ಯೂ ಹೇಗೋ ನುಸುಳಿ – ಅಧಿಕಾರ ಪಡೆದ ಹುಮಾ ಉಸ್ಮಾನಿಯಂಥವರನ್ನು ಕೊಂದುಹಾಕುತ್ತಿರುವ ಮುಹ್ಮದ್ ಸರ್ವರ್‌ರಂತಹ ಆತಂಕವಾದಿಗಳಿಗೆ ಮುಂದಿನ ಜನಾಂಗವೂ ನೆನಪಿಸಿಕೊಳ್ಳುವ ರೀತಿಯಲ್ಲಿ ಶಿಕ್ಷೆ ನೀಡಬೇಕು. ಧಾರ್ಮಿಕ ಮೂಲಭೂತವಾದಕ್ಕೆ ತಡೆಗೋಡೆ ಒಡ್ಡಬೇಕು.

ಪಾಕಿಸ್ತಾನದಲ್ಲಿ ಮತೀಯ ಮತ್ತು ಧಾರ್ಮಿಕವಾದಗಳು ತಾಂಡವವಾಡುತ್ತಿವೆ. ಅಲ್ಲಿ ಘೈದಾದ ಕುಕೃತ್ಯಗಳಿಗೆ ಕಡಿವಾಣವಿಲ್ಲದಂತಾಗಿದೆ. ಪಾಕಿಸ್ತಾನದ ಸವಲತ್ತುಗಳಿಗಾಗಿ ಅಮೆರಿಕಾ ೫೫ ಕೋಟಿ ನೀಡಿತ್ತು. ಅದರಲ್ಲಿ ಕೇವಲ ೨೧ ಕೋಟಿಯಷ್ಟನ್ನು ಮಾತ್ರ ಬಳಸಲಾಗಿದೆ. ಆಹಾರದ ಕೊರತೆ, ನೀರಿನ ಕೊರತೆ, ಶಿಕ್ಷಣದ ಕೊರತೆ, ಆರೋಗ್ಯದ ಕೊರತೆ ಎಲ್ಲವೂ ಇದ್ದರೂ ಇದಕ್ಕೆ ಹೆಚ್ಚಿನ ಬಜೆಟ್ ದೊರೆಯುತ್ತಿಲ್ಲ. ಶಿಕ್ಷಣದ ಪ್ರಗತಿ ಕುಂಠಿತಗೊಂಡಿದೆ. ಇಂತಹ ಜನಪರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದನ್ನು ಬಿಟ್ಟು ಮಹಿಳೆಯರ ಮೇಲೆ ಹಿಂಸೆಯನ್ನು ಹೆಚ್ಚಿಸುತ್ತಿದ್ದಾರೆ.

ಕೇವಲ ೧೩ ವರ್ಷದ ಕಾಯನಾತ್ ಶಾಲೆಗೆ ಹೊರಟಿದ್ದಳು. ವಿಕೃತ ಮನಸ್ಸಿನ ಪುಂಡರ ಗುಂಪೊಂದು ಅವಳನ್ನು ಎಳೆದೊಯ್ದು ಬಲಾತ್ಕರಿಸಿದರು. ಮಹಿಳಾ ಸಂಘಟನೆಗಳ ಅಸ್ಮಾ ಜಹಂಗೀರ್ ಅಲ್ಲದೆ ಮತ್ತಿತರ ಸಂಘಗಳ ಜೊತೆಗೂಡಿ ಕಾಯನಾತ್ ಧರಣಿ ಸತ್ಯಾಗ್ರಹ ನಡೆಸಿ ಬೀದಿಗಿಳಿದಿದ್ದಾಳೆ. ಮಾಧ್ಯಮದವರ ಮುಂದೆ ಪುಟ್ಟ ಬಾಲೆ ಕಾಯನಾತ್ ಹೀಗೆ ಹೇಳುತ್ತಾಳೆ, ''ನನಗೆ ನ್ಯಾಯ ದೊರಕಿಸಿ ಕೊಡಿ ಎಂದು ಮುಷರ್ರಫ್, ಪೊಲೀಸರು ಮತ್ತು ಕೋರ್ಟಿನ ನ್ಯಾಯಾಧೀಶರನ್ನೇ ಅಲ್ಲದೆ ಅಸ್ಮಾ ಜಹಾಂಗೀರರನ್ನು ಕೇಳುತ್ತೇನೆ.'' ಔರತ್ ಫೌಂಡೇಶನ್ ವರದಿಯ ಪ್ರಕಾರ ಪಾಕಿಸ್ತಾನದ ಮಹಿಳೆಯರ ಮೇಲೆ ಹಿಂಸೆಯ ಪ್ರಕರಣಗಳು ಹೆಚ್ಚಾಗುತ್ತಿವೆ. ಸಾಮಾನ್ಯ ನಾಗರಿಕ ಸೌಲಭ್ಯಗಳಾದ ಕುಡಿಯುವ ಶುದ್ಧ ನೀರು, ಆರೋಗ್ಯ ಸವಲತ್ತುಗಳಿಲ್ಲ, ಔಷಧಿಗಳಿಲ್ಲ, ಸರ್ಕಾರಿ ಆಸ್ಪತ್ರೆಯಲ್ಲಿ ಡಿಸ್ಪಿರಿನ್-ಪ್ಯಾರಾಸಿಟಮಾಲ್ ಗುಳಿಗೆಗಳೂ ದೊರಕುತ್ತಿಲ್ಲ. ಪಾಕಿಸ್ತಾನದ ಕ್ವೆಟ್ಟಾದಲ್ಲಿ ಕುಡಿಯುವ ಶುದ್ಧ ನೀರೂ ಸಹ ದೊರಕುತ್ತಿಲ್ಲ – ಬಲೂಚಿಸ್ಥಾನದ ಜನ ನಾಗರಿಕ ಸವಲತ್ತುಗಳಿಗಾಗಿ ದಂಗೆಯೆದ್ದಿದ್ದಾರೆ. ರಾಜಕಾರಣಿಯೇ ಆಗಿರಲಿ, ಪತ್ರಕರ್ತನೇ ಆಗಿರಲಿ, ಅವರ ಮಿಲಿಟರಿ ಆಡಳಿತಕ್ಕೆ ಧಕ್ಕೆಯಿದೆ ಎಂಬ ಶಂಕೆ ಬಂದರೂ ಸಾಕು ಅಂಥವರು ನಾಪತ್ತೆಯಾಗುತ್ತಾರೆ. ಗಂಡಸರ ಸ್ಥಿತಿಯೇ ಹೀಗಿರುವಾಗ ಮಹಿಳೆಯ ಸ್ಥಿತಿಯನ್ನು ಊಹಿಸಿಕೊಳ್ಳಬಹುದಾಗಿದೆ.

ಬೆನಜ್ಹೀರ್ ಭುಟ್ಟೋ ಪಾಕಿಸ್ತಾನದ ಪ್ರಧಾನಿಯಾಗಿದ್ದಾಗ – ಇಂತಹ ಚಟುವಟಿಕೆಗಳಿಗೆ ಸ್ವಲ್ಪಮಟ್ಟಿಗೆ ಕಡಿವಾಣವಿತ್ತು. ಇತ್ತೀಚೆಗೆ ಹೆಣ್ಣುಗಳು ಬದುಕುವ ಹಕ್ಕುಗಳನ್ನು ಕಿತ್ತುಕೊಳ್ಳುತ್ತಿರುವ ಮರ್ಯಾದಾ ಹತ್ಯೆಗಳು ಭೀತಿ ಹುಟ್ಟಿಸುತ್ತಿವೆ. ಮಹಿಳೆ ಮತ್ತು ಮಾನವ ಹಕ್ಕುಗಳು ಆತಂಕಕ್ಕೀಡಾಗುತ್ತಿರುವ ಈ ಸಂದರ್ಭದಲ್ಲಿ ಸಂಪ್ರದಾಯಸ್ಥ ಮುಸ್ಲಿಮ್ ಧಾರ್ಮಿಕ ಕ್ಲರ್ಜಿಗಳು, ದಿನನಿತ್ಯ ಸಾವಿನ ಭಯದಲ್ಲಿ ಬದುಕುತ್ತಿರುವ ಪ್ರಗತಿಪರರು – ಅಸ್ಮಾ ಜಹಾಂಗೀರ್‌ರಂತಹ ಹೋರಾಟಗಾರ್ತಿಯರು ಕತ್ತಲೆಯಲ್ಲಿ ಆಶಾಕಿರಣವಾಗಿದ್ದಾರೆ. ಅಸ್ಮಾರವರ ಹತ್ತಿರ ಹಿಂಸಕ ಗಂಡನಿಂದ ವಿಚ್ಛೇದನ ಕೋರಿ ಬಂದ ಸಮೀಯಾ ಇಮ್ರಾನ್ ಅವರನ್ನು ಹಬೀಬ್ ರೆಹಾನ್ ಎಂಬುವನು ಎಲ್ಲರೆದುರಿಗೆ ಗುಂಡಿಟ್ಟು ಕೊಂದ. ಕೊಲೆಗಡುಕನಿಗೆ ಶಿಕ್ಷೆ ನೀಡಲು ಜನರು ಕೂಗು ಹಾಕಲಿಲ್ಲ – ಬದಲಾಗಿ ಅಸಹಾಯಕ ಮಹಿಳೆಯರಿಗೆ ಆಶ್ರಯ ನೀಡುತ್ತಿರುವ ಲಾಹೋರಿನ ಹೀನಾ ಜಿಲಾನಿ ಮತ್ತು ಅಸ್ಮಾ ಜಹಾಂಗೀರರ ವಿರುದ್ಧ ಜನರು, ರಾಜಕಾರಣಿಗಳು ಕೂಗು ಹಾಕಿದರು. ಇದು ಯಾವ ನ್ಯಾಯ ?

ಸಣ್ಣಪುಟ್ಟ ಕಾರಣಗಳಿಗೆ ಪೈಶಾಚಿಕ ಕೃತ್ಯಕ್ಕಿಳಿಯುವ 'ಮರ್ಯಾದಾ ಹತ್ಯೆ'ಗಳು ಸಾಂಪ್ರದಾಯಿಕ ಸಮಾಜದಲ್ಲಿ ಹೆಣ್ಣು ಸುರಕ್ಷಿತಳು ಎಂಬ ಭ್ರಮೆಯನ್ನು ಛಿದ್ರಗೊಳಿಸುತ್ತಿವೆ. ಇಂತಹ ಈ ಕೃತ್ಯಗಳು ಪುರುಷಪ್ರಾಧಾನ್ಯತೆಯ ಪರಾಕಾಷ್ಠೆಯ ಫಲವೇ ಆಗಿವೆ. ಗಂಡಸರೇ ಇರುವ ಕೋರ್ಟಿನಲ್ಲಿ ಹೆಂಗಸರಿಗೆ ವಾದಿಸುವ ಇಲ್ಲವೇ ತನ್ನ ಮಹಿಳಾ ಕಕ್ಷಿಗಾರರ ಪರವಾಗಿ ನಿಲ್ಲುವ ಹಕ್ಕು ಇಲ್ಲ. ಇಲ್ಲಿಯ ಮನೆಗಳಲ್ಲಿ ಹೆಣ್ಣು ಮತ್ತು ಕೊಲೆಗಳು ಆಕಸ್ಮಿಕ ಸಾವುಗಳಾಗಿ ದಾಖಲಾಗಿ ಕೊನೆಗಾಣುತ್ತಿವೆ. ಜಗತ್ತಿನ ಬಹು ಭಾಗದ ಮಹಿಳೆಯರ ಬದುಕು ಮಧ್ಯಕಾಲೀನ ಯುಗದ ಕತ್ತಲೆಯಿಂದ ಇಂದಿಗೂ ಮುಕ್ತವಾಗಿಲ್ಲ. ಹುಮಾ ಉಸ್ಮಾನಿಯವರನ್ನು ಕೊಂದಿರುವ ಪಾತಕಿಗೆ ಶಿಕ್ಷೆವಿಧಿಸಲು ಯಾವ ಕೂಗೂ ಕೇಳಿಬರುತ್ತಿಲ್ಲ.

**ಕೆ. ಷರೀಫಾ**
ಲೆಕ್ಕಿಗರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಹರಿಹರ - ೫೭೭ ೬೦೧

# ಜನಪದ ಪ್ರದರ್ಶನ ಕಲೆಗಳು: ಪ್ರಚಲಿತ ಕನ್ನಡ ಮನಸ್ಸು

ಡಾ|| ಹಿ. ಶಿ. ರಾಮಚಂದ್ರೇಗೌಡ

**ಆ**ಳ್ವಾಸ್ ನುಡಿಸಿರಿ: ೨೦೦೬ರ ಸಂಘಟಕರು 'ಕನ್ನಡ ಮನಸ್ಸು – ಪ್ರಚಲಿತ ಪ್ರಶ್ನೆಗಳು' ಎಂಬ ಚಿಂತನ ಶೀರ್ಷಿಕೆಯಡಿಯಲ್ಲಿ ಪ್ರದರ್ಶನ ಕಲೆಗಳ (ಜನಪದ ಕಲೆಗಳು) ಮುಂದಿರುವ ಪ್ರಶ್ನೆಗಳು ಎಂಬ ವಿಷಯದ ಕುರಿತು ಮಾತನಾಡಲು ಎರಡು ಹಂತದ ಎಂಟು ಸಮಸ್ಯೆಗಳನ್ನು ನನ್ನ ಮುಂದಿಟ್ಟಿದ್ದಾರೆ. ಅವು ಹೀಗಿವೆ :

ಕನ್ನಡ ಜನಪದ ಸಂಸ್ಕೃತಿ/ಕಲೆ : ಇಂದಿನ ಕನ್ನಡ ಮನಸ್ಸು

(ಅ) ಪರಿಸ್ಥಿತಿ – ಹೀಗೆ

೧. ಜನಪದ ಸಂಸ್ಕೃತಿ/ಕಲೆ ವ್ಯಾಪಾರಿ ಸರಕಾಗುತ್ತಿರುವುದು
೨. ಮೆರವಣಿಗೆಯ ವಸ್ತುವಾಗುತ್ತಿರುವುದು
೩. ಮೂಲ ಸತ್ವವನ್ನು ಕಳೆದುಕೊಳ್ಳುತ್ತಿರುವುದು

(ಆ) ಪರಿಹಾರ ಹೇಗೆ ?

೧. ಮೂಲ ಸತ್ವವನ್ನು ಉಳಿಸಿಕೊಳ್ಳುವುದು
೨. ಮುಂದಿನ ಪೀಳಿಗೆಗೆ ಕೊಂಡೊಯ್ಯುವ ವಿಧಾನ
೩. ಕನ್ನಡ ಜನರ ಪಾತ್ರ
೪. ಸಂಘ ಸಂಸ್ಥೆಗಳ ಪಾತ್ರ
೫. ಸರ್ಕಾರದ ಪಾತ್ರ

ಈ ಎಂಟು ಪ್ರಶ್ನೆಗಳಿಗೆ ತಾತ್ವಿಕವಾದ ಐದು ಕಾರಣಗಳನ್ನು ನೀಡಿ, ಅವುಗಳ ಬಗ್ಗೆ ವಿವರಣೆ ಕೊಡಲು ಯತ್ನಿಸುತ್ತೇನೆ. ಮೊದಲಾಗಿ, ನಮ್ಮ ಸಮಾಜ ವಿಘಟಿತವಾಗುತ್ತಿದೆ. ಕಾರಣಗಳು :

೧. ನಮ್ಮ ಜ್ಞಾನ, ಸಂಪತ್ತಿನ ಅಧಿಕೃತತೆಯನ್ನು ನಿರಾಕರಿಸಲಾಗಿದೆ. ಬದುಕನ್ನು ಅವಲಂಬಿಸಿದ ಕಲೆಗಳೂ ನಿರಾಕರಿಸಲ್ಪಡುತ್ತಿವೆ.

೨. ನಮ್ಮನ್ನು ನಾವು ಅರ್ಥಮಾಡಿಕೊಳ್ಳುತ್ತಿಲ್ಲ.

೩. ನಮ್ಮ ಉತ್ಪನ್ನಗಳನ್ನು ನಾವು ಗೌರವಿಸುತ್ತಿಲ್ಲ, ಅವುಗಳನ್ನು ಬಳಸಲು ಹೇಸುತ್ತಿದ್ದೇವೆ. ಯಾಕೆಂದರೆ, ಅಭಿವೃದ್ಧಿಯ ಪರಿಕಲ್ಪನೆಯನ್ನು ಹೊರಗಿನಿಂದ ಪರಿಕಲ್ಪಿಸಿಕೊಳ್ಳುತ್ತಿದ್ದೇವೆ.

೪. ನಮ್ಮೊಳಗಿನ ಶಿಷ್ಟ-ಜಾನಪದ ಸಂಘರ್ಷದ ಮುಂದುವರಿಕೆ ನಮ್ಮ ನಿಷ್ಕ್ರಿಯತೆಯ ದ್ಯೋತಕವಾಗಿದೆ, ಸೃಷ್ಟಿಶಕ್ತಿಯಾಗಿಲ್ಲ.

೫. ನಮಗೆ ಅನ್ವಯಿಕತೆಯ/ಕ್ರಿಯಾಶೀಲತೆಯ ಕೊರತೆ ಇದೆ; ನಮ್ಮೊಳಗೆ ನಾವು ಸೃಷ್ಟಿಯಾಗುತ್ತಿಲ್ಲ.

ಇದೇ ಕಾರಣಕ್ಕೆ ಜನಪದಗಳು ತಮ್ಮ ಜೀವನದ ದಾರಿಯನ್ನು ಬದಲಾಯಿಸಿಕೊಳ್ಳುತ್ತಿರುವುದು. ನೈಸರ್ಗಿಕವಾದ ಸೃಷ್ಟಿ ಸಂರಕ್ಷಕ ತತ್ವಗಳಿಂದ ವಿರೋಧಿಯಾದ ಸೃಷ್ಟಿಧ್ವಂಸಕ ತತ್ವಗಳನ್ನು ನಮ್ಮ ಜನಪದಗಳು (ನಮ್ಮ ಸಮಾಜ) ಅನುಸರಿಸುತ್ತಿರುವುದೇ ಇಷ್ಟಕ್ಕೆಲ್ಲ ಕಾರಣವಾಗಿದೆ. ನಮ್ಮ ಜನಪದ ಹಾಗೂ ಜನಪದ ಕಲೆಗಳನ್ನು ಕೂಡಿಸುವ ಸೃಷ್ಟಿಸಂರಕ್ಷಕ ತತ್ವಗಳೆಂದರೆ :

ಕೂಡು, ಸಂರಕ್ಷಿಸು, ಉತ್ಪಾದಿಸು, ಹಂಚಿಕೋ, ಒಡನಾಡು ಮತ್ತು ಸಂಭ್ರಮಿಸು (ಜನಪದ ಬದುಕು), ಸೃಷ್ಟಿ ಧ್ವಂಸಕ ತತ್ವಗಳೆಂದರೆ ವೈಯಕ್ತಿಕವಾಗು, ಸಂಪಾದಿಸು, ಸಂಗ್ರಹಿಸು, ಆಕ್ರಮಿಸು, ಆಳ್ವಿಕೆ ಮಾಡು, ನಿಯಂತ್ರಿಸು (ಜನಪದ ವಿರೋಧಿ ಬದುಕು).

ಜನಪದ ಮತ್ತು ಅದರ ಉತ್ಪನ್ನಗಳಾದ ಕಲೆಗಳು ಸೃಷ್ಟಿ ಸಂರಕ್ಷಕ ತತ್ವಗಳಿಗೆ ಬದ್ಧವಾಗಿವೆ. ಇಂಥ ತತ್ವಗಳ ಪ್ರದರ್ಶನಾತ್ಮಕ ಸಂದೇಶವೇ ಜನಪದ ಕಲೆ. ಒಂದು ಜನಪದ ಸಮುದಾಯ ಹೇಗಿರುತ್ತದೊ ಅದರ ಕಲೆಯೂ ಅದೇ ಸ್ವಭಾವದ ಪ್ರತ್ಯುತ್ಪನ್ನವಾಗಿರುತ್ತದೆ. ಜನಪದವೊಂದು ಇಂಥ ಸೃಷ್ಟಿ ಸಂರಕ್ಷಕ ತತ್ವದಿಂದ ದೂರ ಸರಿದು ಸೃಷ್ಟಿ ಧ್ವಂಸಕ ತತ್ವಕ್ಕೆ ಚಲಿಸಿದಾಗ ಜನಪದ ಕಲೆಗಳು ರಾಕ್ಷಸ ತತ್ವಪ್ರತಿಪಾದನೆಗೆ ತೊಡಗುತ್ತವೆ. ತುಮಕೂರು ಜಿಲ್ಲೆಯಲ್ಲಿ ಕಂಡುಬಂದ ಆದರೆ ಈಗ ಇಲ್ಲವಾಗುತ್ತಿರುವ ಪಾಳೇಗಾರನ ಕುಣಿತವೆಂಬ ಜನಪದ ಕಲೆಯೇ ಇದಕ್ಕೆ ಸಾಕ್ಷಿ. ಯಕ್ಷಗಾನದಲ್ಲಿ ಕೂಡ ಇಂಥ ಕೆಲವು ಗುಣಗಳಿವೆ. ವರ್ಗಸಂಘರ್ಷದ ದೃಷ್ಟಿಯಿಂದ ನೋಡಿದಾಗ ಇಲ್ಲಿ ಕೆಲವು ಪಾತ್ರಗಳು ಸಮಾಜ ನಿರಾಕೃತ ಪಾತ್ರಗಳು. ಜೀವ ರಕ್ಷಕ ತತ್ವವಾದ ಒಳ್ಳೆಯದು ಮತ್ತು ಕೆಟ್ಟದ್ದರ ಮಧ್ಯೆಯ ಸಂಘರ್ಷ ಎಂದಾಗ ಅವು ಸಮಾಜದ ಕೊರತೆಯನ್ನು ಎತ್ತಿಹೇಳುವ ಸೃಜನಶೀಲ ಪಾತ್ರಗಳಾಗುತ್ತವೆ.



೧. ನಮ್ಮ ಜ್ಞಾನ/ಸಂಪತ್ತಿನ ಅಧಿಕೃತತೆಯನ್ನು ನಿರಾಕರಿಸಲಾಗಿದೆ.

ಒಂದು ಕಚ್ಚಾವಸ್ತುವನ್ನು ಸಿದ್ಧವಸ್ತುವಾಗಿ ಮಾರ್ಪಡಿಸುವ ಪ್ರಕ್ರಿಯೆಯಲ್ಲಿ ಸಾಂಸ್ಕೃತಿಕ/ರಾಜಕೀಯ ಉದ್ದೇಶ ವಿರುತ್ತದೆ. ಆ ಉದ್ದೇಶವನ್ನು ಅರ್ಥಮಾಡಿಕೊಳ್ಳದೆ ಅಂಥ ವಸ್ತುವನ್ನು ಬಳಸಿದರೆ ಕೋಗಿಲೆ ಕಸವನ್ನು ತಿಂದಂತಾಗುತ್ತದೆ. ನಾವು ಹೊರಜಗತ್ತಿನ ಬಹುತೇಕ ಸಿದ್ಧ ವಸ್ತುಗಳನ್ನು ಹೀಗೆ ಬಳಸುತ್ತಿದ್ದೇವೆ. ಆ ಮೂಲಕ ನಮ್ಮ ಸಿದ್ಧವಸ್ತುಗಳ ಸಾಂಸ್ಕೃತಿಕ/ರಾಜಕೀಯ ಉದ್ದೇಶವನ್ನು ನಿರಾಕರಿಸಿದ್ದೇವೆ. ಈ ಮನೋಧರ್ಮವೇ ನಮ್ಮ ಉತ್ಪನ್ನಗಳಾದ ಜನಪದ ಕಲೆಗಳನ್ನು ನಿರಾಕರಿಸುತ್ತಿರಲು ಕಾರಣವಾಗಿದೆ.

೨. ನಮ್ಮನ್ನು ನಾವು ಅರ್ಥಮಾಡಿಕೊಳ್ಳುತ್ತಿಲ್ಲ. ನಮಗೆ ನಮ್ಮ ಸಮಾಜಕ್ಕೆ ವ್ಯಕ್ತಿತ್ವ ಇದೆ ಎಂದು ಬಹುಜನರು ತಿಳಿದುಕೊಂಡಿಲ್ಲ. ನಮ್ಮದೆಂಬ ಪರಂಪರೆ, ಜೀವನವಿಧಾನ ಮತ್ತು ಶೋಧ ಇದೆ ಎಂಬ ತಿಳುವಳಿಕೆ ಇಲ್ಲ. ಆ ಬಗ್ಗೆ ಅಲ್ಪವನ್ನು ತಿಳಿದುಕೊಂಡವರು ಅದನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಿದ್ದಾರೆ. ಉಳಿದವರು ಪಾಶ್ಚಾತ್ಯ ಜಗತ್ತಿಗೆ ಹೋಲಿಸಿಕೊಂಡು ನಾವಿನ್ನೂ ಬರ್ಬರ ಮಾನವರ ಸ್ಥಿತಿಯಲ್ಲಿ ಇದ್ದೇವೆ ಎಂದು ನಂಬಿಕೊಂಡಿದ್ದಾರೆ.

೩. ನಮ್ಮ ಉತ್ಪನ್ನಗಳನ್ನು ನಾವೇ ಗೌರವಿಸುತ್ತಿಲ್ಲ, ಅವುಗಳನ್ನು ಬಳಸಲು ಹೇಸುತ್ತಿದ್ದೇವೆ. ಆ ವಸ್ತುಗಳನ್ನು ಅಭಿವೃದ್ಧಿಪಡಿಸುವ ವಿಸ್ತರಣಾ ಮನೋಭಾವ ಕೂಡ ನಮ್ಮಲ್ಲಿ ಇಲ್ಲ. ಯಾಕೆಂದರೆ ಅಭಿವೃದ್ಧಿ ಪರಿಕಲ್ಪನೆಯನ್ನು ನಾವು ಹೊರಗಿನಿಂದ ಸ್ವೀಕರಿಸಿದ್ದೇವೆ. ಇದೊಂದು ಅನುತ್ಪಾದಕ ಹಳವ ಸಮಾಜ. ನಮ್ಮ ಈ ಹೊತ್ತಿನ ವೈಜ್ಞಾನಿಕತೆ ಸೂತ್ರದಲ್ಲೂ ಉತ್ಪಾದನೆಯಲ್ಲೂ ಹೊರಗಿನಿಂದ ತಂದುದು. ಅದು ಭಾರತೀಕರಣಗೊಂಡಿಲ್ಲ. ಹಾಗಿದ್ದಲ್ಲಿ ಅದು ಜನಸಾಮಾನ್ಯರಿಗೆ ಸುಲಭದಲ್ಲಿ ದೊರೆಯುತ್ತಿತ್ತು.

೪. ನಮ್ಮೊಳಗೆ ಶಿಷ್ಟ-ಜಾನಪದವೆಂಬ ವೈಚಾರಿಕ ಚರ್ಚೆ ಇದೆ. ಅದು ಸಮಾಜಶಾಸ್ತ್ರಗಳ ವಿಷಯಕ್ಕೆ ಸೀಮಿತವಾಗಿದೆ. ಸ್ವಲ್ಪಮಟ್ಟಿಗೆ ನಮ್ಮ ಜಾತಿ ಸಮಾಜವನ್ನು ಪ್ರಶ್ನಿಸಿದೆ ಎಂಬುದನ್ನು ಬಿಟ್ಟರೆ ಫಲಶ್ರುತಿ ಆಶಾದಾಯಕವೇನೂ ಅಲ್ಲ. ನಮ್ಮ ಒಟ್ಟು ಬೆಳವಣಿಗೆಯ ದೃಷ್ಟಿಯಿಂದ ನೋಡಿದರೆ ಈ ಶಿಷ್ಟ – ಜನಪದ ಸಂಘರ್ಷ ನಮ್ಮ ನಿಷ್ಕ್ರಿಯತೆಯ ದ್ಯೋತಕ. ಹಿಂದೂ-ಹಿಂದೂಯೇತರ, ಬ್ರಾಹ್ಮಣ-ಶೂದ್ರ

ಎಂಬ ಸಾಂಸ್ಕೃತಿಕ ಮುಖಾಮುಖಿ ಕೂಡ ಬಾಲಿಶವಾಗಿದೆ.

೫. ನಮಗೆ ಅನ್ವಯಿಕತೆಯ/ಕ್ರಿಯಾಶೀಲತೆಯ ಕೊರತೆ ಇದೆ: ನಮ್ಮೊಳಗೆ ನಾವು ಸೃಷ್ಟಿಯಾಗುತ್ತಿಲ್ಲ. ಹೊರಗಿನ ಜೀವನತತ್ವ ಮತ್ತು ಸಿದ್ಧವಸ್ತುಗಳಿಗೆ ಬಾಯಿ ತೆರೆದುಕೊಂಡ ಭಿಕ್ಷುಕ ಪ್ರವೃತ್ತಿ ನಮ್ಮದು.

ಈ ಕಾರಣಕ್ಕೆ ನಮ್ಮ ಜನಪದ ಕಲೆಗಳು ಇಬ್ಭಾಗವಾಗಿವೆ.

(೧) ಒಂದು ಮೊತ್ತದ ಕಲೆಗಳು ನಮ್ಮ ಸಮಾಜದ ಒಳಗೆ ಇವೆ. ಅವು ಸಾಂಪ್ರದಾಯಿಕ ಮೌಲ್ಯಗಳನ್ನು ಉಳಿಸಿಕೊಂಡಿವೆ. ಸಮಕಾಲೀನ ದೃಷ್ಟಿಯಿಂದ ನರಳುತ್ತಿವೆ. ಹೊರಕ್ಕೆ ಬರಲು ಭಯ, ಒಳಗೆ ಇರಲು ಸಂಕಟ ಎಂಬ ಪರಿಸ್ಥಿತಿ ಅವುಗಳದು.

(೨) ಎರಡನೆಯ ವರ್ಗದ ಕಲೆಗಳು ಮೂಲ ಸಮಾಜದಿಂದ ಹೊರಗೆ ಬಂದಿವೆ. ಅವುಗಳ ನೋಟ ನಮಗೆ ಇಷ್ಟವಾಗಿದೆ. ಅವುಗಳ ಮೌಲ್ಯ ನಮ್ಮಲ್ಲಿ ಭಯವನ್ನು ಉಂಟುಮಾಡಿದೆ. ಅವು ನಮ್ಮನ್ನೂ ನಮ್ಮ ಸಮಾಜವನ್ನೂ ಹರಾಜು ಹಾಕುತ್ತಿವೆ. ಯಾವ ನೀಚನ ಮುಖದ ಮುಂದೆಯೂ ಅವು ಪ್ರದರ್ಶಿತವಾಗುತ್ತವೆ, ಯಾವ ರಾಕ್ಷಸನ ಬೆನ್ನ ಹಿಂದೆ ಬೇಕಾದರೂ ಹೋಗಿ ಸಂಭ್ರಮಿಸುತ್ತವೆ. ಇವನ್ನು ಸಹಜ ಜನಪದ ಕಲೆಗಳು ಎನ್ನಲಾಗದು, ಸಾರ್ವಜನಿಕ ಜನಪದ ಕಲೆಗಳು ಎಂದು ಕರೆದು ಕೈತೊಳೆದುಕೊಳ್ಳಬೇಕು.

ಮಾರುಕಟ್ಟೆ ಸಂಸ್ಕೃತಿಯನ್ನು ಒಪ್ಪಿಕೊಂಡು ಅದರ ಬಳಕೆದಾರರಾಗಿರುವ ನಮಗೆ ನಮ್ಮ ಜನಪದ ಕಲೆಗಳು ಮಾರುಕಟ್ಟೆಗೆ ಬಿದ್ದಿರುವುದನ್ನು ಪ್ರಶ್ನಿಸಲಾಗುವುದಿಲ್ಲ. ಅವುಗಳನ್ನು ನಾವು ಮಾರುಕಟ್ಟೆ ಸರಕುಗಳು ಎಂದು ಕರೆಯಬೇಕು. ನಮ್ಮೆಲ್ಲರ ಕಣ್ಣಮುಂದೆ ರಂಜಿಸುತ್ತಿರುವ ಬಹುತೇಕ ಜನಪದ ಕಲೆಗಳು ಮಾರುಕಟ್ಟೆಯ ಸರಕುಗಳೇ ಆಗಿವೆ. ಹಿಂದಿನಂತೆ ಅವುಗಳ ಒಡೆಯ, ಒಂದು ಸಮಾಜ ಅಲ್ಲ, ಒಂದು ಸರ್ಕಾರ ಅಥವಾ ಸರ್ಕಾರದ ಅಡಿಯಲ್ಲಿ ಇರುವ ಕೆಲವು ಸಂಸ್ಥೆಗಳು.

ಪಾಶ್ಚಾತ್ಯ ಅಭಿವೃದ್ಧಿ ಪರಿಕಲ್ಪನೆಯ ಉತ್ಪಾದಕ, ಬಳಕೆದಾರರ ಮಧ್ಯದ ಇಬ್ಬಗೆಯ ತಾರತಮ್ಯ ನೀತಿ ಭಾರತದಲ್ಲೂ ಇದೆ. ಆ ಮೂಲಕ ಭಾರತ ಇಬ್ಭಾಗವಾಗಿದೆ.

(೧) ಆಧುನಿಕ ಕೈಗಾರಿಕಾ ಜಗತ್ತು ಕೈಗಾರಿಕೆಗಳ ಉತ್ಪಾದನೆಗೆ ಕೊಡುವ ಬೆಲೆಯನ್ನು ಆ ವಸ್ತುವನ್ನು ಉತ್ಪಾದನೆ ಮಾಡುವ ಕಾರ್ಮಿಕನಿಗೆ ಕೊಡುವುದಿಲ್ಲ. ಉತ್ಪಾದನೆ ಮೊದಲನೆಯ ಸ್ಥಾನದಲ್ಲಿ ಇದ್ದು ಉತ್ಪಾದಿಸುವವನು ಕನಿಷ್ಠ ಸ್ಥಾನದಲ್ಲಿರುತ್ತಾನೆ.

(೨) ನಮ್ಮ ಜಾತಿ ಸಮಾಜ ಕೂಡ ಇದೇ ಬಗೆಯ ಇಬ್ಬಂದಿತನವನ್ನು ರೂಢಿಸಿಕೊಂಡು ಬಂದಿದೆ. ಇಲ್ಲಿಯೂ ಉತ್ಪಾದಕ ಕನಿಷ್ಠ ಸ್ಥಾನದಲ್ಲೂ ಬಳಕೆದಾರ ಪ್ರಥಮ ಸ್ಥಾನದಲ್ಲೂ ಇರುತ್ತಾನೆ. ಈ ಹಿನ್ನೆಲೆಯಿಂದ ನೋಡಿದಾಗ ನಮ್ಮ ಕಲಾವಿದರೆಲ್ಲ ಬೇರೆಯವರ ಪೋಷಕತ್ವದಲ್ಲಿ ಬೆಳೆದು ಬಂದವರು, ಸಾಹಿತ್ಯ ಸೃಷ್ಟಿಕರ್ತರನ್ನೂ ಸೇರಿಸಿಕೊಂಡಂತೆ. ಜನಪದ ಕಲೆಗಳ ಕಲಾವಿದರ ವಿಷಯವನ್ನು ತೆಗೆದುಕೊಂಡರೆ ಅವರೆಲ್ಲ ತಳ-ಕೆಳವರ್ಗದಿಂದ ಬಂದವರು. ಅವರನ್ನು ಜಾತಿಶ್ರೇಣಿಯಲ್ಲಿ ಕೆಳಹಂತದಲ್ಲಿ ಇಟ್ಟಂತೆ ಅವರ ಕಲೆಗಳನ್ನು ಕಡಿಮೆ ಬೆಲೆಯಲ್ಲಿ ಕೊಳ್ಳಲಾಗಿದೆ.

ಈಗ ನಮ್ಮ ಪ್ರದರ್ಶನ ಕಲೆಗಳ ಭೋಗದಲ್ಲಿ ಪಾಶ್ಚಾತ್ಯ ಪ್ರಭುವಿನ ಮನಸ್ಸು ಹಾಗೂ ಪೌರ್ವಾತ್ಯ ಜಾತಿ ಪ್ರಭುವಿನ ಮನಸ್ಸು ಒಟ್ಟಿಗೆ ಸೇರಿಕೊಂಡಿವೆ. ಆ ಮನಸ್ಸುಗಳೇ ನಾವು ಮತ್ತು ನೀವು. ಈ ನಾವು ಮತ್ತು ನೀವು ಜನಪದ ಕಲೆಗಳನ್ನು ಮನರಂಜನೆಗಾಗಿಯೇ, ಹೆಚ್ಚಿನ ಮನರಂಜನೆಯ ದೃಷ್ಟಿಗಾಗಿಯೇ ಬಳಸುತ್ತಿದ್ದೇವೆ. ಅವುಗಳ ಮೌಲ್ಯ, ಮಾನವನ್ನು ಕಳೆದು ಮನರಂಜನೆಗಾಗಿಯೇ ಬಳಸಿಕೊಂಡರೆ ಆ ಕಲೆಗಳು ಹೊಸ ಪತಿವ್ರತೆಯಾಗಿರಲು ಸಾಧ್ಯವೇ ಹೊರತು ಮೌಲ್ಯವ್ರತೆಯರಾಗಲು ಸಾಧ್ಯವೆ ?

**ಸನಾತನತೆ – ಸಮಕಾಲೀನತೆಯ ಮುಖಾಮುಖಿ**

ನಾನು ಮತಧಾರ್ಮಿಕತೆಯ ಸನಾತನತೆಯನ್ನು ಒಪ್ಪುವುದಿಲ್ಲ; ಸಮಕಾಲೀನವಾಗಿ ಬದುಕಬೇಕೆಂದು ಬಹುಜನರು ಅದನ್ನು ಒಪ್ಪುವುದಿಲ್ಲ. ನಾನು ನಮ್ಮ ಜನಪದ ಪರಂಪರೆಯ ಸನಾತನತೆಯನ್ನು ಒಪ್ಪುತ್ತಿದ್ದೇನೆ. ಇದನ್ನು ಜನಸಾಮಾನ್ಯರ ಸಾಂಸ್ಕೃತಿಕ ಇತಿಹಾಸ ಎಂದು ಕರೆಯುತ್ತೇನೆ. ಇದರೊಳಗೆ ನಮ್ಮ ಜನಪದಗಳು ಶತಮಾನಗಳಿಂದ ಉಳಿಸಿ ಬೆಳೆಸಿಕೊಂಡು ಬಂದಿರುವ ಶುದ್ಧ ಜ್ಞಾನ-ವಿಜ್ಞಾನವನ್ನು ಶೋಧಿಸಿ ಸಮಕಾಲೀನ ಸಂದರ್ಭಕ್ಕೆ ಪ್ರಸ್ತುತಪಡಿಸಬೇಕೆಂದಿದ್ದೇನೆ. ಇಲ್ಲಿ:

೧. ಉದ್ಯಮಪತಿಯ ವಿಜ್ಞಾನವನ್ನು ನಿರಾಕರಿಸಬೇಕಾಗುತ್ತದೆ. ಈ ಉದ್ಯಮಪತಿ (೧) ಜಾತಿ, (೨) ಧರ್ಮ, (೩) ವರ್ಗದ – ಪ್ರಭು ಆಗಿದ್ದಾನೆ. ಇವರು ವಿಜ್ಞಾನವನ್ನೂ ಕಲೆಯನ್ನೂ ತಮ್ಮ ಸಂಭೋಗಕ್ಕಾಗಿ ಬಳಸಿ ಬಿಸಾಡಿದ್ದಾರೆ.

೨. ಜನಸಾಮಾನ್ಯರ ವಿಜ್ಞಾನವನ್ನು ಸ್ವೀಕರಿಸಬೇಕಾಗಿದೆ. ಈ ವಿಜ್ಞಾನದಿಂದ ಮಾತ್ರ ನಮ್ಮ ಜನ, ಜನಪದ ಮತ್ತು ಅವರ ಉತ್ಪಾದನೆಯಾದ ಜ್ಞಾನ-ವಿಜ್ಞಾನವನ್ನು ಉಳಿಸಿ ಬೆಳೆಸಬಹುದಾಗಿದೆ. ನಮ್ಮ ಬಹುಜನರ ಜನಪದ ಕಲೆಗಳ ಅಸ್ತಿತ್ವದ ಪ್ರಶ್ನೆ ಇಲ್ಲಿ ಅಡಗಿದೆ. ಆಗ ನಮಗೆ ಗೊತ್ತಾಗುತ್ತದೆ, ಕಲೆಯೊಂದು ಸಿದ್ಧ ವಸ್ತು ಅಲ್ಲ; ಪ್ರೇಕ್ಷಕ ಸಂಬಂಧಿಯಾಗಿ ಅದು ಬೆಳೆಯುತ್ತಾ ಹೋಗುತ್ತದೆ. ಪ್ರೇಕ್ಷಕ ಒಬ್ಬ ಬಳಕೆದಾರ; ಭೋಗಿ ಅಲ್ಲ; ಅವನೊಬ್ಬ ವಿಕಾಸಶೀಲ ಸಹೃದಯ ಎಂದು. ಆಗ ನಮ್ಮ ಮುಂದಿನ ಪ್ರಶ್ನೆ ನಾವು ನಿಜವಾಗಿ ವಿಕಾಸ ಹೊಂದಿದ್ದೇವೆಯೆ ಎಂದು ಕೇಳಿಕೊಳ್ಳುವುದು.

ಈಗ (೧) ಭಾರತದಲ್ಲಿ ಜೀವನ ವಿಸ್ತರಣೆ ಆಗುತ್ತಿಲ್ಲ, ಪಾಶ್ಚಾತ್ಯ ಜೀವನದ ಅನುಕರಣೆ ಆಗುತ್ತಿದೆ.

(೨) ನಾವು ತತ್ವ ಸಂಸ್ಕೃತಿಯನ್ನು ಬಿಟ್ಟು ವಸ್ತು ಸಂಸ್ಕೃತಿಯ ಕಡೆಗೆ ಓಡಿ ಹೋಗುತ್ತಿದ್ದೇವೆ.

ಇದನ್ನು ಸಾಂಸ್ಕೃತಿಕ ವಿಸ್ತರಣೆ ಎನ್ನಲಾಗದು ವಸ್ತು ಸಂಸ್ಕೃತಿಯ ಅನುಕರಣೆ ಎನ್ನಬಹುದು.

ಯಾರೇ ಆಗಲಿ, ಯಾವುದೇ ಒಳ ಹೊರ ಜೀವನದ ಕಡೆಗೆ ತುಡಿಯುವುದು ಸಹಜ ಮತ್ತು ಅನಿವಾರ್ಯ. ಆದರೆ ತಮ್ಮಲ್ಲಿ ಶೋಧಿಸಿದ್ದನ್ನು ಅಥವಾ ಹೊರಗಿನಿಂದ ತಂದುದನ್ನು ತನ್ನ ಸ್ವಂತ ಸಾಂಸ್ಕೃತಿಕ ಗೈರತ್ತಿನಿಂದ ಹೊಂದದೆ, ಅನುಭವಿಸದೆ, ಆ ಶೋಧವನ್ನು ತನ್ನದಾಗಿಸಿಕೊಳ್ಳಲು ಸಾಧ್ಯವಿಲ್ಲ. ನಮ್ಮ ಜೀವನ ನಿಜವಾಗಿ ಸಾಂಸ್ಕೃತಿಕ ವಿಸ್ತರಣೆ ಹೊಂದಿದ್ದಾಗಿದ್ದರೆ ನಮ್ಮ ಕಲೆಗಳು ಕೂಡ ವಿಸ್ತರಣೆಗೆ ಒಳಗಾಗುತ್ತಿದ್ದವು, ಸಮಕಾಲೀನ



ವಾಗಿ ಅಸಲಿಯಾಗಿರುತ್ತಿದ್ದವು. ಈಗಿನಂತೆ ಹೊರಗಡೆ ಹಿಟ್ಟು, ಅನ್ನದ ಭಿಕ್ಷೆ ಎತ್ತುವ ಕೆಲಸಕ್ಕೆ ಹೋಗುತ್ತಿರಲಿಲ್ಲ. ಹೀಗೆ ನಮ್ಮ ಜೀವನಧರ್ಮವೇ ಅಸಲಿಯಾಗದಿರುವಾಗ ನಮ್ಮ ಉತ್ಪನ್ನಗಳಾದ ಕಲೆಗಳು ಹೇಗೆ ಅಸಲಿಯಾಗಿ ಉಳಿದುಕೊಳ್ಳಲು ಸಾಧ್ಯ ?

ಮೊದಲಿಗೆ ನಮ್ಮ ಕಲೆಗಳ ಬಗ್ಗೆ ನಮ್ಮ ಅಭಿರುಚಿ ಸರಿಯಾಗಿಲ್ಲ. ಅವುಗಳನ್ನು ಎರಡು ಆಸೆಯಿಂದ ನೋಡುವ ಮನೋಧರ್ಮವಿದೆ :

(೧) ನಮ್ಮ ಸಾಂಪ್ರದಾಯಿಕತೆಯ ಜಡತ್ವವೇ ಅವುಗಳ ಜೀವಾಳ ಎಂದು ತಿಳಿದು ಅನುಭವಿಸಲು ಹೊರಡುವುದು. ಇದು 'ಮುದಿ ಅಭಿರುಚಿ', ಅಂದರೆ ಹಲ್ಲಿಲ್ಲದೆ ಚಪ್ಪರಿಸುವ ಸ್ವಭಾವ. ನಿಜವಾದ ರುಚಿ ಅನುಭವಿಸಲು ಹಲ್ಲುಗಳು ಬೇಕು. ಆ ಹಲ್ಲುಗಳು ನಮ್ಮ ರುಚಿ.

(೨) ಆಧುನಿಕ ಕ್ಲಬ್ - ಟಿ.ವಿ.ಗಳಲ್ಲಿ ಕಾಣುವಂತೆ ನಮ್ಮ ಜನಪದ ಕಲೆಗಳು ನಮ್ಮಗಳ ಚಡ್ಡಿಯನ್ನು ಒದ್ದೆ ಮಾಡಬೇಕೆಂಬ ಬಯಕೆ. ಇದು ತುಂಡು ಹುಡುಗನ ತೀಟೆ ಅಭಿರುಚಿ.

ನಮ್ಮ ಸಾಂಸ್ಕೃತಿಕ ಬದ್ಧತೆ ನಿಜವಾದುದಾದರೆ, ನಮ್ಮ ಅಭಿರುಚಿಗೆ ಘನತೆ ಇದ್ದರೆ ನಮ್ಮ ಕಲೆಗಳೂ ಸಾರವಾಗಿ ನಡೆದುಕೊಳ್ಳುತ್ತವೆ. ನಮ್ಮ ಅಭಿರುಚಿಯನ್ನು ಆಧುನೀಕರಿಸಿಕೊಂಡರೆ ಆಗದು. ಅದನ್ನು ಸಂಸ್ಕಾರಗೊಳಿಸಿಕೊಳ್ಳಬೇಕು.

ನಾವು ಜನಪದ ಕಲೆಗಳ :

(೧) ಸಹಜ ಮಾರ್ಪಾಡಿಗೆ ಸಿದ್ಧರಿರಬೇಕು.

(೨) ಕಲಾವಿದರಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಸಾಂಸ್ಕೃತಿಕಗೊಳಿಸಬೇಕು.

(೩) ಸ್ವಕೀಯ ಕಲಾಸಂದರ್ಭಗಳನ್ನು ಸೃಷ್ಟಿಸುವ ತಾಕತ್ತು ಬೆಳೆಸಿಕೊಳ್ಳಬೇಕು.

(೪) ನಮ್ಮ ಸಂಸ್ಕೃತಿಯ ಒಳ್ಳೆಯ ಆಶಯಗಳ ಬಗ್ಗೆ ಸಂಭ್ರಮಿಸುವುದನ್ನು ಕಲಿಯಬೇಕು.

ಒಂದು ಜನಪದ ಕಲೆ ಹುಟ್ಟಿನಲ್ಲಿ ಒಂದು ನಿರ್ದಿಷ್ಟ ಸಮುದಾಯಕ್ಕೆ ಸೇರಿದ್ದರೂ, ಪ್ರದರ್ಶನದಲ್ಲಿ ಅದು ವಿಶ್ವಕ್ಕೆ ತೆರೆದುಕೊಂಡಿರುತ್ತದೆ. ಆ ಕಲೆಯನ್ನು ಸದರಿ ಸಮುದಾಯ ನಿಯಂತ್ರಿಸಲು ಯತ್ನಿಸಿದರೆ ಅದರ ಅಣೆಕಟ್ಟು ಒಡಕೊಂಡು ಜನಗಳ ಕಡೆಗೆ ಚಲಿಸಿಬಿಡುತ್ತದೆ. ಅಂದರೆ ಪ್ರದರ್ಶನ ಕಲೆ ಕ್ರಿಯಾಸಂಬಂಧಿ. ಅದು ಕ್ರಿಯೆ ಇರುವ ಕಡೆಗೆ ಜಾರಿಬಿಡುತ್ತದೆ. ಅದರ ರೂಪ – ಪ್ರದರ್ಶನಕ್ಕೆ ಹೊಸ ವಿನ್ಯಾಸವನ್ನು ಕೊಟ್ಟರೆ ಅದು ನಮ್ಮೊಂದಿಗೆ ಇರುತ್ತದೆ. ನಿರ್ಬಂಧಿಸಿದರೆ ವಿಕೃತಗೊಳ್ಳುತ್ತದೆ. ಈಗ ನಮ್ಮ ಜನಪದ ಕಲೆಗಳು ಬೀದಿಗೆ ಬಿದ್ದಿರುವುದಕ್ಕೆ, ದೃಶ್ಯ ಮಾಧ್ಯಮಕ್ಕೆ ಹಾರಿರುವುದಕ್ಕೆ ನಮ್ಮ ಸಾಂಸ್ಕೃತಿಕ ನಿಷ್ಕ್ರಿಯತೆಯೇ ಕಾರಣ.

ನಮ್ಮ ಪ್ರದರ್ಶನ ಕಲೆಗಳ ಬಗ್ಗೆ ನಮಗೆ ಇಷ್ಟು ಕಾಳಜಿ ಯಾಕೆ? ನಮ್ಮಗಳ ಪ್ರದರ್ಶನಕ್ಕೆ ಅವುಗಳ ಮುಖ ಬೇಕು, ಮೈ ಬೇಕು ಆದರೆ ಅವುಗಳ ಮನಸನ್ನು ಮಾತ್ರ ನಾವು ಅರಿತುಕೊಂಡಿಲ್ಲ ನವೋದಯ ಸಾಹಿತಿಗಳು ಜನಪದ ಸಾಹಿತ್ಯದ ಆತ್ಮವನ್ನು ಅರಿಯುವ ಪ್ರಯತ್ನ ಮಾಡಿದರು. ಆ ಕಾರಣಕ್ಕೆ ಅವರ ಸಾಹಿತ್ಯ ಜನಸಂಬಂಧಿಯಾಯಿತು. ಆ ನವೋದಯ ಸಾಹಿತ್ಯವನ್ನು ಓದುವುದರ ಜೊತೆಗೆ ಜನ ಹಾಡಿದರು ಮತ್ತು ಅದರ ಲಯಕ್ಕೆ ಕುಣಿದರು. ಜನಪದ ಕಲೆಗಳ ಬಗ್ಗೆ ಆ ಮನೋಧರ್ಮ ನಮ್ಮಲ್ಲಿ ಇಲ್ಲ.

ನಮ್ಮ ಜನಪದ ಕಲೆಗಳ ಪುನರುಜ್ಜೀವನಕ್ಕೆ ಎರಡು ಸವಾಲುಗಳಿವೆ :

೧. ಪಾಶ್ಚಾತ್ಯ ಸಂಸ್ಕೃತಿ, ಮಾಧ್ಯಮಗಳಿಗೆ ಅನ್ವಯಿಸಿ ಅವುಗಳನ್ನು ಕೊಲ್ಲುವುದು.

೨. ನಮ್ಮ ಪಾರಂಪರಿಕ ಜ್ಞಾನ-ವಿಜ್ಞಾನದ ಪುನರ್‌ಶೋಧದ ಜೊತೆಗೆ ಸಮಕಾಲೀನ ವಿಕಾಸಶೀಲ ಸಮಾಜದ ಅವಶ್ಯಕತೆಗಳನ್ನು ಆಧಾರವಾಗಿಟ್ಟುಕೊಂಡು ಅವುಗಳನ್ನು ಪುನರುಜ್ಜೀವಿಸುವುದು. ಇದು ನಮ್ಮತನ, ನಮ್ಮ ಭಾಷೆಯ, ನಮ್ಮ ಸಂಸ್ಕೃತಿ ಮತ್ತು ನಮ್ಮ ನಾಡಿನ ಬಗ್ಗೆ ಸಂಭ್ರಮಿಸಿದಾಗ ಮಾತ್ರ ಸಾಧ್ಯ.

ನಮ್ಮಲ್ಲಿಯೆ ಇದಕ್ಕೆ ಸ್ಪಷ್ಟ ಉದಾಹರಣೆಗಳಿವೆ :

೧. ಕರಾವಳಿಯ ಯಕ್ಷಗಾನ ಈಗ ಸಂಭ್ರಮಿಸುತ್ತಿರುವುದೇ ಅದರೊಳಕ್ಕೆ ಬ್ರಾಹ್ಮಣರು ಪ್ರವೇಶ ಮಾಡಿರುವುದರಿಂದ. ಇಲ್ಲದಿದ್ದರೆ ಅದು ಮೂಡಲಪಾಯ ಬಯಲಾಟದಂತೆ ಮರಣಶಯ್ಯೆಯಲ್ಲಿ ಮಲಗುತ್ತಿತ್ತು.

೨. ಶ್ರೀ ಕೋಟಗಾನಹಳ್ಳಿ ರಾಮಯ್ಯನಂಥವರು ಆದಿಮ ಸಂಸ್ಥೆಯನ್ನು ಕಟ್ಟಿಕೊಂಡು ಜನಪದ ಸಂಸ್ಕೃತಿ ಸಾಹಿತ್ಯವನ್ನು ಪುನರ್ ಸಂಭ್ರಮಿಸುವಂತೆ ಮಾಡುತ್ತಿರುವುದು.

೩. ಈ ದೇಶದ ಜನಪದ ಸಾಹಿತ್ಯ-ಸಂಗೀತದ ಗಾನಗಂಧರ್ವರಾದ ದಲಿತರು ಅದರ ಸತ್ವವನ್ನು ತಮ್ಮ ಹಾಡುಗಳಲ್ಲಿ ಸಂಭ್ರಮಿಸುವಂತೆ ಮಾಡುತ್ತಿರುವುದು. ಜನಾರ್ದನ್ (ಜೆನ್ನಿ), ಅಪ್ಪಗೆರೆ ತಿಮ್ಮರಾಜು, ಪಿಚ್ಚಳ್ಳಿ ಶ್ರೀನಿವಾಸ, ಕೋಲಾರದ ರಾಜಪ್ಪ, ರೆಡ್ಡಿ ಮತ್ತು ಶಿವಮೊಗ್ಗೆಯ ಕೆ. ಯುವರಾಜ ಮುಂತಾದವರನ್ನು ಇಲ್ಲಿ ಹೆಸರಿಸಬಹುದು.

ಇಷ್ಟು ಹೊರಗೆ ಧುಮುಕದೆ ನಮ್ಮ ಜನಪದ ಕಲೆಗಳಲ್ಲಿಯೆ ಇರುವ ಮುಂದುವರಿಕೆ ಲಕ್ಷಣಗಳನ್ನು ಅವುಗಳ ಒಳಕ್ಕೆ ಇಣುಕುವುದರಿಂದ, ಇಳಿಯುವುದರಿಂದ ಅವುಗಳಲ್ಲಿ ಸಾರ್ವಕಾಲಿಕ ಸತ್ಯ ಮತ್ತು ಪ್ರದರ್ಶನದ ಸಾಧ್ಯತೆಗಳನ್ನು ಕಂಡುಕೊಳ್ಳಬಹುದು.

ನಮ್ಮಲ್ಲಿ (೧) ಧಾರ್ಮಿಕ ಪ್ರದರ್ಶನ ಕಲೆಗಳಿವೆ. ಅವು ಒಂದು ಮೊತ್ತದ ನಂಬಿಕೆಗೆ ಬದ್ಧವಾಗಿವೆ. ಆ ನಂಬಿಕೆಯನ್ನು ಒಡೆದರೆ ಅವು ಸಾಯುತ್ತವೆ. ಅದು ಅವುಗಳ ಧರ್ಮವನ್ನು ಒಡೆದಂತೆ. ಆದರೆ ಅವುಗಳೊಳಗಿಂದ ಸಾರ್ವತ್ರಿಕ ಸತ್ಯವನ್ನು ಎತ್ತಿಕೊಂಡು ಸಮಕಾಲೀನ ಜನಪದ ಕಲೆಯನ್ನು ರೂಢಿಸಬಹುದು.

ಉದಾಹರಣೆಗೆ, ವೀರಭದ್ರನ ಕುಣಿತ, ವೀರಗಾಸೆ ಕುಣಿತ, ಪುರವಂತರ ಕುಣಿತ, ಭೂತನೃತ್ಯ, ಕೊರಗರ ಕುಣಿತ ಇವು ಇರುವ ಹಾಗೆ ಒಂದು ನಿರ್ದಿಷ್ಟ ಸಂಸ್ಕೃತಿಗೆ ಬದ್ಧವಾಗಿವೆ. ಆದರೆ ಇವುಗಳೊಳಗಿನ 'ವೀರತ್ವ' ಸಂರಕ್ಷಣತತ್ವ ಮತ್ತು ಸಮಾಧಾನ ಸತ್ವಗಳನ್ನು ಯಾವ ಕಾಲಕ್ಕೂ ಯಾವ ಜನಸಮುದಾಯಕ್ಕೂ ಅನ್ವಯಿಸಿಕೊಂಡು ಹೊಸ ಕಲಾ ಸಾಧ್ಯತೆಯನ್ನು ಹುಡುಕಬಹುದು.

(೨) ನಮ್ಮ ಲೌಕಿಕ ಪ್ರದರ್ಶನ ಕಲೆಗಳು ಎರಡು ವಿಧದಲ್ಲಿ ಕಂಡಿವೆ.

(ಅ) ವಿಕಾಸಶೀಲ ಧರ್ಮವನ್ನು ಕುರಿತ ಕಲೆಗಳು. ಉದಾಹರಣೆಗೆ, ಸೋಮನ ಕುಣಿತ, ಪೂಜಾ ಕುಣಿತ ಇತ್ಯಾದಿ.

(ಆ) ವಿಕಾಸಶೀಲ ತಂತ್ರಜ್ಞಾನವನ್ನು ಕುರಿತ ಕಲೆಗಳು :

ಉದಾಹರಣೆಗೆ, ಆಂಜಯ್ಯನ ಕುಣಿತ, ಕೋತಿ ಕುಣಿತ, ಕರಡಿ ಕುಣಿತ, ಹುಲಿ ವೇಷ, ಕೋಲಾಟ ಇತ್ಯಾದಿ.

ವಿಕಾಸಶೀಲ ಧಾರ್ಮಿಕ ಕಲೆಗಳಲ್ಲಿ ಧರ್ಮಗಳೇ ಕಾರ್ಯಗಳೂ, ಪಾತ್ರಗಳೂ ಆಗುತ್ತವೆ. ತಮ್ಮ ಧರ್ಮತತ್ವವನ್ನು ತಮ್ಮೊಳಗೆ ಇಟ್ಟುಕೊಂಡು ಅನ್ಯಧರ್ಮಗಳೊಡನೆ ಒಡನಾಡುತ್ತವೆ. ಸಂಭ್ರಮಿಸುತ್ತವೆ. ತಮ್ಮ ವೈಯಕ್ತಿಕತೆಗಿಂತ ಜನ ಮತ್ತು ಅವರ ಮುಂದುವರಿಕೆ ಮುಖ್ಯ ಎಂದು ಸಾರುತ್ತವೆ. ಉದಾಹರಣೆಗಾಗಿ, ಸೋಮನ ಕುಣಿತವನ್ನು ವಿಶ್ಲೇಷಿಸಬಹುದು.

ವಿಕಾಸಶೀಲ ತಂತ್ರಜ್ಞಾನವನ್ನು ಕುರಿತ ಕಲೆಗಳಲ್ಲಿ ಪಾತ್ರಧಾರಿಗಳ ಸಾಂದರ್ಭಿಕ ವಿಕಾಸ ಎಂಬ ಕಾರ್ಯ ಮುಖ್ಯ. ಆ ಮೂಲಕ ಅವು ನಮಗೆ ವಿಕಾಸಶೀಲ ತಂತ್ರಜ್ಞಾನದ ಇತಿಹಾಸವನ್ನು ಕಟ್ಟಿಕೊಡುತ್ತವೆ. ಆಂಜಯ್ಯನ ಕುಣಿತ ಎಂಬ ಕಲೆಯ ವಿಶ್ಲೇಷಣೆಯಿಂದ ಇದನ್ನು ತಿಳಿಯಬಹುದು.

ಸಮಕಾಲೀನ ಸಂದರ್ಭಕ್ಕೆ ಪ್ರದರ್ಶನ ಕಲೆಗಳನ್ನು ಪ್ರಸ್ತುತ ಮಾಡಬೇಕೆಂದು ಬಯಸುವ

ಕನ್ನಡ ಜನ

ಕನ್ನಡ ಸಂಘ ಸಂಸ್ಥೆಗಳು

ಕರ್ನಾಟಕ ಸರ್ಕಾರ – ಇವುಗಳ ಕುರಿತು ಬುಡುಬುಡಿಕೆ ನುಡಿಸುತ್ತ ನಿಲ್ಲಬಾರದು. ಮೊದಲು ಮತ್ತು ಯಾವಾಗಲೂ ಮಾಡಬೇಕಾದ ಕೆಲಸ :

ನಿಮ್ಮ ಮನೆಯ ಶುಭಕಾರ್ಯಗಳಾದ ನಾಮಕರಣ, ವಸಗೆ, ಮದುವೆ, ಹುಟ್ಟುಹಬ್ಬ, ಅಭಿನಂದನೆ, ಪ್ರಶಸ್ತಿ ವಿಜಯಸಾಧನೆ, ಸಂತೋಷಕೂಟಗಳಿಗೆ, ಕನಿಷ್ಠ ಮೂರು ಜನಪದ ಕಲಾ ತಂಡಗಳನ್ನು ಕರೆಸಿ ಪ್ರದರ್ಶನ ನೀಡಿಸಿ, ಗೌರವಿಸಿ ಹಾಗೂ ಗೌರವದ ಸಂಭಾವನೆ ನೀಡಿ.

ಜನಪದಗೀತ ಗಾಯನ ತಂಡಗಳನ್ನು ಕರೆಸಿ ಎಲ್ಲ ಶುಭ ಸಮಾರಂಭಗಳಲ್ಲಿ ಹಾಡಿಸಿ ಗೌರವಿಸಿ ಹಾಗೂ ಗೌರವದ ಸಂಭಾವನೆ ನೀಡಿ.

ಈ ಕಲೆಗಳ ಉಳಿಯುವಿಕೆಯಲ್ಲಿ ವ್ಯಕ್ತಿ, ಸಂಸ್ಥೆ ಮತ್ತು ಸರ್ಕಾರ ಏನು ಮಾಡಬಹುದು? ಜನಗಳ ಮಧ್ಯೆ ಇಚ್ಛೆ, ಸ್ಪಂದನ ಮತ್ತು ಸಾಮೂಹಿಕ ಜವಾಬ್ದಾರಿ ಮೂಡಿಸದ ಹೊರತು ಒಬ್ಬ ವ್ಯಕ್ತಿ, ಒಂದು ಸಂಸ್ಥೆ ಮತ್ತು ಸರ್ಕಾರ ಏನೂ ಮಾಡಲಾಗದು. ಅವರು ಈ ಕಲೆಗಳನ್ನು ಚಲಿಸುವ ಮ್ಯೂಸಿಯಂನಲ್ಲಿ ಇಡಬಹುದು. ಈಗಾಗಲೇ ನೀವು ಒಂದು ಕಡೆ ನಿಂತ ಜನಪದ ಸಾಮಗ್ರಿಯನ್ನು ಸ್ಟಾಕ್ ಮಾಡಿಕೊಂಡಿರುವ ಮ್ಯೂಸಿಯಂಗಳನ್ನು ನೋಡಿದ್ದೀರಿ. ಜನಪದ ಕಲೆಗಳ ಚಲಿಸುವ ವಸ್ತುಸಂಗ್ರಹಾಲಯ ಎಂದರೆ ಅದು ಸ್ಟ್ಯಾಟಿಕ್ ಕರ್ನಾಟಕವಾಗುತ್ತದೆ. ಇನ್ನೊಂದು ದೃಷ್ಟಿಯಲ್ಲಿ ಬಡಕಲಾವಿದರ ಸ್ಟ್ಯಾಟಿಕ್ ಸಮಾಜದ ನಿರ್ಮಾಣ ಎಂದಾಗುತ್ತದೆ.

ಜನಪದ ಕಲೆಗಳನ್ನು ಒಬ್ಬ ಶ್ರೀಮಂತ ವ್ಯಕ್ತಿ ಸಾಕಲು/ಬೆಳೆಸಲು ಸಾಧ್ಯವಿಲ್ಲ. ಒಬ್ಬ ಸಾಂಸ್ಕೃತಿಕ ನೇತಾರ ಆ ಕೆಲಸವನ್ನು ಮಾಡಬಹುದು. ಅವನು ಜರ್ಮನಿಯ ಜೆ. ಜೆ. ಹೆರ್‌ಡರ್‌ನಂತೆ ಮತ್ತೆ ಮತ್ತೆ ಜನಗಳಿಗೆ ಕರೆಕೊಡಬೇಕು. ಆ ಕರೆಯನ್ನು ಆಪ್ತವಾಗಿ ಸ್ವೀಕರಿಸುವ ಜನ ಇರಬೇಕು. ಜನಸಂರಕ್ಷಣೆಯ ಉದ್ದೇಶವಿಲ್ಲದಿದ್ದರೆ ಕೊಟ್ಟ ಕರೆ ನಿಷ್ಪ್ರಯೋಜಕವಾಗುತ್ತದೆ. ಜನ ಸಿದ್ಧರಿದ್ದಾರೆಯೆ? ಬಡತನವನ್ನು ಬೇಡಿಕೆ ವಸ್ತುಗಳಿಂದ ಪರಿಹರಿಸಿಕೊಳ್ಳುವ ತರಾತುರಿಯಲ್ಲಿರುವ ಜನರನ್ನು ಕೇಳಬೇಕು!

ಸಂಸ್ಥೆಗಳು ಜನಪದ ಕಲೆಗಳನ್ನು ಅಭಿವೃದ್ಧಿಪಡಿಸುವ ವಿಷಯ ತುಂಬ ಜಟಿಲವಾದುದು. ಈಗ ಸಂಘಟಿತವಾಗುತ್ತಿರುವ ಸಂಸ್ಥೆಗಳಲ್ಲಿ ಹೆಚ್ಚಿನವು ಸ್ವಹಿತಾಶಕ್ತಿಯನ್ನು ಉಳ್ಳವು. ಮತ್ತೆ ಕೆಲವು ಸಂಸ್ಥೆಗಳು ಮತಧರ್ಮದ ಹುಚ್ಚು ಹಿಡಿಸಿಕೊಂಡು ಕುಣಿದಾಡುತ್ತಿರುವಂಥವು. ಜಾತಿಗೊಂದು ಸಂಘಗಳು ಹುಟ್ಟಿಕೊಂಡು ತಮ್ಮ ಜಾತಿಯ ಹಿತಾಸಕ್ತಿಯನ್ನು ಸಂರಕ್ಷಿಸಿಕೊಳ್ಳುತ್ತಿರುವವರು ಜನಪದ ಕಲೆಗಳ ಸಂರಕ್ಷಣೆಗೆ ಹೊರಟರೆ ಆ ಕಲೆಗಳ ಭಕ್ಷಣೆಯಾಗುತ್ತದೆಯೇ ಹೊರತು ರಕ್ಷಣೆ ಆಗದು.

ದೇಶೀಯ ಹೆಸರಿನ ಹಲವು ಬಗೆಯ ಸಂಘಸಂಸ್ಥೆಗಳು ಇವೆ. ಇಲ್ಲಿ ಅಪಾಯದ ದೇಶೀವಾದವೂ ಇದೆ, ಉಪಾಯದ ದೇಶೀವಾದವೂ ಇದೆ. ಇಂಥವುಗಳ ತೆಕ್ಕೆಗೆ ಜನಪದ ಕಲೆಗಳು ಜಾರಿದರೆ ಅವು ಕಾಲುಮುರಿದುಕೊಳ್ಳುವುದು ಗ್ಯಾರಂಟಿ.

ಸರ್ಕಾರ ಎಂಬುದು ಕಲೆ ಮತ್ತು ಸಂಸ್ಕೃತಿಯ ವಿಷಯಕ್ಕೆ ಯಾವೊತ್ತೂ ತಾತ್ಕಾಲಿಕ. ಅದು ಕೊಡುವ ಪರಿಹಾರವೂ ತಾತ್ಕಾಲಿಕವಾಗಿರುತ್ತದೆ. ಸರ್ಕಾರಗಳು ನಮ್ಮ ಸಮಾಜದ ಪಾತ್ರಧಾರಿಗಳು. ಅವಕ್ಕೆ ಹಲವು ಸಿದ್ಧಾಂತಗಳಿವೆ ಹಾಗೂ ಹಲವು ವೇಷಗಳಿವೆ. ಇಂಥ ವೇಷಧಾರಿಗಳು ಜನಪದ ಕಲೆಗಳಿಗೆ ಯಾವ ವೇಷ ಹಾಗೂ ಯಾವ ಥರದ ನಾಮ ಹಾಕುತ್ತಾರೆ ಎಂದು ಹೇಳಲಾಗದು.

ಜನಪದ ಕಲೆಗಳ ಅಭಿವೃದ್ಧಿ ಎಂಬ ಪ್ರೇರಣೆ ಜನಗಳ ಮಧ್ಯದಿಂದಲೇ ಉದ್ಭವಿಸಬೇಕು.

(* ಮೂಡಬಿದಿರೆ, ಆಳ್ವಾಸ್ ಸಿರಿ ಎರಡನೆಯ ಸಮ್ಮೇಳನದಲ್ಲಿ ಮಂಡಿಸಿದ ಲೇಖನ, ೨೦೦೬)

ಡಾ|| ಹಿ. ಶಿ. ರಾಮಚಂದ್ರೇಗೌಡ
ನಿರ್ದೇಶಕ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು - ೫೭೦ ೦೦೬

# ಗ್ರಾಮೀಣ ಸಮುದಾಯ ಅಭಿವೃದ್ಧಿಯಲ್ಲಿ ಅಂಗನವಾಡಿ ಕಾರ್ಯಕರ್ತೆಯರು

ಭಾರತ ಗ್ರಾಮಗಳ ತವರೂರು. ಗ್ರಾಮಗಳ ಅಭಿವೃದ್ಧಿಯಾದಂತೆ ದೇಶ ಅಭಿವೃದ್ಧಿಯತ್ತ ಸಂಚಲನ ವ್ಯಾಪಿಸುವ ಸಾಮಾನ್ಯ ಅಂಶವನ್ನು ನಾವು ಕಾಣುತ್ತಿದ್ದೇವೆ. ಗ್ರಾಮಗಳ ಅಭಿವೃದ್ಧಿಗೆ ಪೂರಕವಾದ ಹಲವಾರು ಯೋಜನೆಗಳನ್ನು ಸರ್ಕಾರ ಅಂದಿನಿಂದ ಇಂದಿನವರೆಗೂ ಜಾರಿಗೊಳಿಸುತ್ತಲೇ ಇದೆ. ಸಮಗ್ರ ಶಿಶು ಅಭಿವೃದ್ಧಿ ಯೋಜನೆಯೂ ಸಹ ಗ್ರಾಮೀಣಾಭಿವೃದ್ಧಿಯ ಹಿತಾಸಕ್ತಿಗೆ ಬದ್ಧವಾಗಿರುವ ಒಂದು ಯೋಜನೆಯಾಗಿದೆ. (ನಗರ ಪ್ರದೇಶದ ಅಡಿಯಲ್ಲಿಯೇ ಈ ಯೋಜನೆ ಜಾರಿಯಲ್ಲಿದೆ. ಆದರೆ ಸಂಖ್ಯೆಗಳ ದೃಷ್ಟಿಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಅಧಿಕವಾಗಿದೆ.)

ಸಮಗ್ರ ಶಿಶು ಅಭಿವೃದ್ಧಿ ಯೋಜನೆಯು ೧೯೭೫ ಅಕ್ಟೋಬರ್ ೨ರಂದು ಮಕ್ಕಳ ಸರ್ವಾಂಗೀಣ ಅಭಿವೃದ್ಧಿಗಾಗಿ ೩೩ ಬ್ಲಾಕ್‌ಗಳಲ್ಲಿ ಪ್ರಾರಂಭಿಕವಾಗಿ ಪ್ರಾರಂಭಿಸಲಾಯಿತು. ಇಂದು ಈ ಯೋಜನೆಯು ೫೬೫೨ ಬ್ಲಾಕ್‌ಗಳಲ್ಲಿ ಕಾರ್ಯನಿರತವಾಗಿದೆ. ಇದರ ಮುಖ್ಯ ಉದ್ದೇಶಗಳೆಂದರೆ, ೦-೬ ವರ್ಷದೊಳಗಿನ ಮಕ್ಕಳ ಪೋಷಕಾಂಶ ಮತ್ತು ಆರೋಗ್ಯ ಸ್ಥಾನಮಾನವನ್ನು ಉತ್ತಮಗೊಳಿಸುವುದು, ದೈಹಿಕ, ಮಾನಸಿಕ ಮತ್ತು ಸಾಮಾಜಿಕ ಬೆಳವಣಿಗೆಗೆ ಅಡಿಗಲ್ಲು ಹಾಕುವುದು, ಮರಣ, ರೋಗ, ನ್ಯೂನ ಪೋಷಣೆ ಮತ್ತು ಶಾಲೆ ಬಿಡುವುದು ಇತ್ಯಾದಿಗಳ ಸಂಭವವನ್ನು ತಗ್ಗಿಸುವುದು, ಶಿಶು ಅಭಿವೃದ್ಧಿಗೆ ಪ್ರೋತ್ಸಾಹ ನೀಡಲು ವಿವಿಧ ಇಲಾಖೆಗಳ ನಡುವೆ ಪರಿಣಾಮಕಾರಿ ಸಂಯೋಜಿತ ನೀತಿಗಳನ್ನು ರೂಪಿಸುವುದು ಹಾಗೂ ಅವುಗಳನ್ನು ಜಾರಿಗೊಳಿಸುವುದು, ಸೂಕ್ತ ಪೋಷಕಾಂಶ ಮತ್ತು ಆರೋಗ್ಯ ಶಿಕ್ಷಣದ ಮೂಲಕ ಮಗುವಿನ ಸಾಮಾನ್ಯ ಆರೋಗ್ಯ ಮತ್ತು ಪೋಷಕಾಂಶ ಅವಶ್ಯಕತೆಗಳನ್ನು ನೋಡಿಕೊಳ್ಳಲು ತಾಯಿಯ ಸಾಮರ್ಥ್ಯವನ್ನು ಹೆಚ್ಚಿಸುವುದು. - ಈ ಉದ್ದೇಶಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಅಂಗನವಾಡಿ ಕಾರ್ಯಕರ್ತೆಯರು ಪ್ರಮುಖ ಪಾತ್ರವನ್ನು ನಿರ್ವಹಿಸುತ್ತಾರೆ. ಈ ಹಿನ್ನೆಲೆಯಲ್ಲಿ ಅಂಗನವಾಡಿ ಕಾರ್ಯಕರ್ತೆಯರು ಗ್ರಾಮೀಣ ಸಮುದಾಯದ ಅಭಿವೃದ್ಧಿಯಲ್ಲಿ ಹೇಗೆ ತಮ್ಮ ಪಾತ್ರ ನಿರ್ವಹಿಸುತ್ತಿದ್ದಾರೆ ಹಾಗೂ ಅವರು ಎದುರಿಸುತ್ತಿರುವ ಸಮಸ್ಯೆಗಳನ್ನು ಚರ್ಚಿಸುವುದೇ ಈ ಲೇಖನದ ಉದ್ದೇಶ.



**ಮಹದೇವಸ್ವಾಮಿ ಕೆ.**

ಪ್ರಸ್ತುತ ಅಧ್ಯಯನದ ಅನುಸಾರವಾಗಿ ಚಾಮರಾಜನಗರ ಜಿಲ್ಲೆಯ (ನಾಲ್ಕು ತಾಲ್ಲೂಕುಗಳೂ ಒಳಗೊಂಡಂತೆ) ಅಂಗನವಾಡಿ ಕಾರ್ಯಕರ್ತೆಯರನ್ನು ಅಂಗನವಾಡಿ ಕೇಂದ್ರಗಳಿಗೆ ಭೇಟಿ ನೀಡಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಅಂಗನವಾಡಿ ಕಾರ್ಯಕರ್ತರು ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಗರ್ಭಿಣಿಯರು ಹಾಗೂ ಬಾಣಂತಿಯರಿಗೆ ಆರೋಗ್ಯಕ್ಕೆ ಸಂಬಂಧಿಸಿದಂತೆ ಮಾರ್ಗದರ್ಶನ ನೀಡುವ ಮೂಲಕ (ಮನೆ ಭೇಟಿ ನೀಡುವ ಸಂದರ್ಭದಲ್ಲಿ) ಶಿಶು ಮಕ್ಕಳ ಪಾಲನೆಯ ಪ್ರಾರಂಭದಲ್ಲಿ ವಹಿಸಬೇಕಾದ ಮುಂಜಾಗ್ರತ ಕ್ರಮಗಳನ್ನು ಅಚ್ಚುಕಟ್ಟಾಗಿ ತಿಳಿಸಿಕೊಡುತ್ತಾರೆ. ಈ ಕಾರಣದಿಂದಾಗಿ ಶಿಶುಗಳ ಮರಣ ದರ ಹಾಗೂ ತಾಯಂದಿರ ಮರಣ ದರ ಇಳಿಮುಖವಾಗಲು ಕಾರಣರಾಗಿದ್ದಾರೆ. ಜೊತೆಯಲ್ಲೆ ಈ ಹಿಂದೆ ಇದ್ದ ಕೆಲವು ಸಮಸ್ಯೆಗಳನ್ನು ನಿವಾರಿಸಿದ್ದಾರೆ. (ಉದಾಹರಣೆಗೆ ಬಾಣಂತಿಯರು ಸಪ್ಪೆ ಊಟ ಮಾಡುವುದು). ಗರ್ಭಿಣಿ ಹಾಗೂ ಬಾಣಂತಿಯರಿಗೆ ಪೌಷ್ಟಿಕ ಶಿಕ್ಷಣ ಹಾಗೂ ಪರಿಸರ, ವೈಯಕ್ತಿಕ ಸ್ವಚ್ಛತೆ ಇತ್ಯಾದಿ ವಿಚಾರಗಳಲ್ಲಿ ಸಲಹೆ ನೀಡುವ ಮೂಲಕ ಆರೋಗ್ಯ ಸುಧಾರಣೆಯಲ್ಲಿ ಅಂಗನವಾಡಿ ಕಾರ್ಯಕರ್ತೆಯರು ಸುಧಾರಣೆ ತಂದಿದ್ದಾರೆ. ಜೊತೆಯಲ್ಲೇ ದೇಶದ ಉತ್ತಮ ಆಹಾರ, ಭವಿಷ್ಯಕ್ಕೆ ಸಂಪನ್ಮೂಲಗಳಾದ ಮಕ್ಕಳ ಆರೋಗ್ಯಕರ ಬೆಳವಣಿಗೆಗೆ ಸಹಕಾರಿಯಾಗಿದ್ದಾರೆ.

ಮಕ್ಕಳು ಭವಿಷ್ಯದ ಸಂಪತ್ತು. ಈ ಸಂಪತ್ತಿನ ರಕ್ಷಣೆ ಹಾಗೂ ಆರೋಗ್ಯಕರ ಬೆಳವಣಿಗೆ ಅಷ್ಟೇ ಅವಶ್ಯಕ. ಭಾರತದ ಗ್ರಾಮೀಣ ಪ್ರದೇಶಗಳಲ್ಲಿ ಲಕ್ಷಾಂತರ ಮಹಿಳೆಯರು ಕೂಲಿ ಮಾಡಿ ಜೀವನ ನಿರ್ವಹಿಸಲು ಹೊಲಕ್ಕೆ ಸಂಬಂಧಿಸಿದ ಅನೇಕ ಕಾರ್ಯಗಳಲ್ಲಿ ನಿರತರಾಗುತ್ತಾರೆ. ಈ ಕಾರಣದಿಂದ ಮಕ್ಕಳ ಬೆಳವಣಿಗೆಗಾಗಿ ಅಷ್ಟಾಗಿ ಗಮನ ಹರಿಸಲಾಗುವುದಿಲ್ಲ. ಇಂತಹ ಸಮಸ್ಯೆಗಳನ್ನು ದೂರಮಾಡಲು ಅಂಗನವಾಡಿ ಕಾರ್ಯಕರ್ತೆಯರು ಮಕ್ಕಳಿಗೆ ಪೌಷ್ಟಿಕ ಆಹಾರ ವಿತರಣೆ, ವಿಟಮಿನ್ ಮಾತ್ರೆಗಳ ನೀಡುವಿಕೆ ಮತ್ತು ಆಟೋಟಗಳನ್ನಾಡಿಸುವ ಮೂಲಕ ಮಗುವಿನ ಬೆಳವಣಿಗೆಯಲ್ಲಿ ಸಕ್ರಿಯ ಪಾತ್ರ ನಿರ್ವಹಿಸುತ್ತಾರೆ.

ಶಿಕ್ಷಣವು ವ್ಯಕ್ತಿಯ ಹುಟ್ಟಿನಿಂದ ಪ್ರಾರಂಭವಾಗಿ ಅಂತ್ಯದವರೆಗೆ ನಡೆಯುವಂತಹ ಒಂದು ಪ್ರಕ್ರಿಯೆಯಾಗಿದೆ. ಶಿಶುವಿನ ಪ್ರಾರಂಭದ ೩-೪ ವರ್ಷಗಳು ಅತ್ಯಂತ ಮಹತ್ವವಾದುವು. ಪ್ರಾಥಮಿಕ ಪೂರ್ವ ಶಿಕ್ಷಣವು ಕಲಿಕೆಯನ್ನು ಕೇಂದ್ರವನ್ನಾಗಿಟ್ಟುಕೊಂಡು ನಿರಂತರ ನಡೆಯುವ ಮಾನಸಿಕ, ಭೌತಿಕ ಕ್ರಿಯೆಯಾಗಿದೆ. ಹೀಗಾಗಿ ಪ್ರಾಥಮಿಕ ಪೂರ್ವ ಶಿಕ್ಷಣವು ವ್ಯಕ್ತಿಯ ವ್ಯಕ್ತಿತ್ವದ ರೂಪರೇಷೆಗಳನ್ನು ಬದಲಿಸುವಂತಹ ಒಂದು ಸಾಧನವೂ ಹೌದು. ಈ ಶಿಕ್ಷಣವನ್ನು ಗ್ರಾಮೀಣ ಪ್ರದೇಶದಲ್ಲಿ ಅಂಗನವಾಡಿ ಕಾರ್ಯಕರ್ತೆಯರು ನೀಡುತ್ತಾರೆ. ಶಾಲಾ ಪೂರ್ವಶಿಕ್ಷಣವನ್ನು ಆಟ, ಪಾಠ, ಚಿತ್ರಪಟ ಇತ್ಯಾದಿಗಳ ಮೂಲಕ ಗ್ರಾಮೀಣ ಸಮುದಾಯದ ಮಕ್ಕಳ ಶೈಕ್ಷಣಿಕ ಅಡಿಪಾಯವನ್ನು ಭದ್ರಗೊಳಿಸುವಲ್ಲಿ ಇವರು ಸಹಾಯಕವಾಗುತ್ತಿದ್ದಾರೆ ಎಂಬುದನ್ನು ಗಮನಿಸುವುದು ಅತ್ಯವಶ್ಯಕ.

ಗ್ರಾಮೀಣ ಶಿಶುಗಳ ಪೋಷಕರಿಗೆ ಶಿಕ್ಷಣದ ಮಹತ್ವ ತಿಳಿಸುವುದರ ಮೂಲಕ ಈ ಕಾರ್ಯಕರ್ತೆಯರು ಶಾಲೆಗೆ ಸೇರುವ ಮಕ್ಕಳ ಸಂಖ್ಯೆಯ ಏರಿಕೆಗೆ ಪರೋಕ್ಷವಾಗಿ ಕಾರಣವಾಗುತ್ತಿದ್ದಾರೆ. ಏಡ್ಸ್, ಮಲೇರಿಯಾ, ಪೋಲಿಯೊ ಮುಂತಾದ ಆರೋಗ್ಯ ಜಾಥಾ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡು ಅವುಗಳ ನಿರ್ಮೂಲನೆಗೆ ತಮ್ಮದೇ ಆದ ಕೊಡುಗೆಯನ್ನು ನೀಡುತ್ತಿದ್ದಾರೆ. ಗ್ರಾಮೀಣ ಪ್ರದೇಶದ ಜನತೆಗೆ ಪರಿಸರ, ಸ್ವಚ್ಛತೆಗಳ ಬಗ್ಗೆ ತಿಳುವಳಿಕೆ ನೀಡುತ್ತಿದ್ದಾರೆ. ಇತ್ತೀಚಿನ ದಿನಗಳಲ್ಲಿ ಸ್ತ್ರೀಶಕ್ತಿ ಸಂಘಗಳ ಯಶಸ್ಸಿಗೆ ಹಾಗೂ ಸದಸ್ಯರುಗಳ ಹಣವನ್ನು ಸದ್ಬಳಕೆಗೆ ವಿನಿಯೋಗಿಸಲು ಸಲಹೆ ನೀಡಿ ಗ್ರಾಮೀಣ ಪ್ರದೇಶದ ಮಹಿಳೆಯರು ಸಶಕ್ತತೆಯನ್ನು ಹೊಂದಲು ದುಡಿಯುತ್ತಿದ್ದಾರೆ.

ಹೀಗೆ ಅಂಗನವಾಡಿ ಕಾರ್ಯಕರ್ತೆಯರು ವಿವಿಧ ವಿಭಾಗಗಳಲ್ಲಿ ಕೆಲವೊಂದು ಸುಧಾರಣೆ ತಂದು ಗ್ರಾಮೀಣ ಸಮುದಾಯದ ಅಭಿವೃದ್ಧಿಯಲ್ಲಿ ತಮ್ಮದೇ ಆದ ಛಾಪು ಮೂಡಿಸಿದ್ದಾರೆ. ಆದಾಗ್ಯೂ ಅವರು ಕೆಲವೊಂದು ಸಮಸ್ಯೆಗಳನ್ನು ಎದುರಿಸುತ್ತಿದ್ದು ಈ ಸಮಸ್ಯೆಗಳತ್ತ ಒಮ್ಮೆ ದೃಷ್ಟಿಹರಿಸುವುದು ಅವಶ್ಯಕ. ಅವುಗಳೆಂದರೆ

* ಗೌರವಧನದ ಆಧಾರದ ಮೇಲೆ ತಮ್ಮ ಕುಟುಂಬವನ್ನು ನಿರ್ವಹಿಸುವ ಜವಾಬ್ದಾರಿ ಹೊಂದಿರುವ ಕಾರ್ಯಕರ್ತೆಯರು ಸರಿಯಾದ ಸಮಯಕ್ಕೆ ಗೌರವಧನ ದೊರೆಯದೆ ಆರ್ಥಿಕ ಏರುಪೇರುಗಳಿಗೆ ಗುರಿಯಾಗಿ

೬೨ನೇ ಪುಟಕ್ಕೆ



ಇತ್ತೀಚೆಗೆ ನನ್ನ ಕೈಗೆ ಬಂದ ಪುಸ್ತಕ, ಡಾ|| ಬಿ. ಟಿ. ರುದ್ರೇಶ್ ಅವರ 'ನೋವು ನೀಗುವ ಕಾಯಕದಲ್ಲಿ ಕಂಡ ಬದುಕು, ಬೆಳಕು'. ನಮ್ಮ ಪರಿಚಿತ ಸಾಧಕರ ಬಗ್ಗೆ ಪುಸ್ತಕ ಅಥವಾ ಲೇಖನ ಬಂದಾಗ ಅದನ್ನು ಓದಬೇಕೆಂಬ ಕುತೂಹಲ ಮೂಡುವುದು ಸಹಜ. ಯಾಕೆಂದರೆ ಇಂಥ ಬರಹಗಳು ಆಯಾ ಕ್ಷೇತ್ರದ ಸಾಧನೆಯ ಹಂತಗಳನ್ನು, ಆಯಾಮಗಳನ್ನು ವಿವರವಾಗಿ ತಿಳಿಸಿಕೊಡುತ್ತವೆ. ಅಂಥದೊಂದು ಕುತೂಹಲದಿಂದ ಈ ಪುಸ್ತಕವನ್ನು ಓದಿದಾಗ ರೋಗಿಗಳ ಮತ್ತು ರೋಗನಿವಾರಣೆಗಳ ಬಗ್ಗೆ ಹೊಸದೊಂದು ಬೆಳಕನ್ನು ಪ್ರಾಮಾಣಿಕವಾಗಿ ನೀಡುವಲ್ಲಿ ಸಫಲವಾಗಿದೆ ಅನ್ನಿಸಿತು. ಈ ಬೆಳಕೇ ಜೀವನ ಅನ್ನುವಂತೆ – ಈ ವೈದ್ಯ ಲೇಖಕರ ಬದುಕು.




ಇದೊಂದು ಸಾಹಿತ್ಯಕೃತಿ ಅಲ್ಲ. ಲೇಖಕರೇ ಮುನ್ನುಡಿಯಲ್ಲಿ ಹೇಳಿಕೊಂಡಂತೆ ವೃತ್ತಿಯಿಂದಾಗಲೀ ಪ್ರವೃತ್ತಿಯಿಂದಾಗಲೀ ಅವರು ಸಾಹಿತಿಯಲ್ಲ. ಸಾಹಿತ್ಯದ ನೆಲೆಗಳಿಂದ ಈ ಪುಸ್ತಕವನ್ನು ಗ್ರಹಿಸಹೊರಡುವುದು ಸೂಕ್ತವೂ ಅಲ್ಲ.

ಲೇಖಕರು ಹೋಮಿಯೋಪತಿ ವೈದ್ಯರು. ತಮ್ಮ ವೃತ್ತಿಯಲ್ಲಿ, ಪ್ರತಿದಿನದ ರೋಗಿಗಳ ಚಿಕಿತ್ಸೆಯಲ್ಲಿ, ಸಂತೋಷ ಕಂಡವರು. ತಮ್ಮ ವೃತ್ತಿಜೀವನದಲ್ಲಿ ಅನೇಕ ಸವಾಲುಗಳನ್ನು ಎದುರಿಸಿದ್ದಾರೆ. ಟೀಕೆಗಳನ್ನು ಎದುರಿಸಿದ್ದಾರೆ. ಅವೆಲ್ಲವನ್ನೂ ಮೀರಿ ಮುನ್ನಡೆದು ಅನೇಕರ ಮುಖಗಳಲ್ಲಿ ಸ್ವಸ್ಥ ನಗುವನ್ನು ಮೂಡಿಸಿದ್ದಾರೆ. ಕೆಲವು ಘಟನೆಗಳು

# ಧನ್ವಂತರಿಯ ದಿನಚರಿ

ಅವರಿಗೆ ಧನ್ಯತಾ ಭಾವವನ್ನು ಮೂಡಿಸಿವೆ. ಕೆಲವು ಮೆಲುಕುಹಾಕುವಂತೆ ಮಾಡಿವೆ. ಅವುಗಳನ್ನು ಈ ಪುಸ್ತಕದಲ್ಲಿ ಆಪ್ತವಾಗಿ ಹಂಚಿಕೊಂಡಿದ್ದಾರೆ. ಹೀಗೆ ಹಂಚಿಕೊಳ್ಳುವಲ್ಲಿ ಒಂದು ಅನನ್ಯ ಸಂತೋಷ ಇದೆ. ಪ್ರಾಮಾಣಿಕತೆ ಇದೆ. ''ಬದುಕು ತೋರಿಸಿದ ಬೆಳಕು ಇತರರೊಂದಿಗೆ ಹಂಚಿಕೊಳ್ಳಲು ಪ್ರೇರೇಪಿಸಿತು. ಮಾತಲ್ಲಿ ತೋಡಿಕೊಂಡಾಗ ಅಕ್ಷರದಲ್ಲಿ ಮೂಡಿಸುವ ಒತ್ತಾಯ ಬಂದಿತು.'' ಪುಸ್ತಕದ ಹಿಂದಿನ ಸ್ಫೂರ್ತಿಯ ಬಗ್ಗೆ ಲೇಖಕರು ಹೇಳುವ ಮಾತು ಇದು.

ಲೇಖಕರು ಸಾಹಿತಿ ಅಲ್ಲದಿದ್ದರೂ ಸಾಹಿತ್ಯವನ್ನು ಓದಿಕೊಂಡವರು. ಓದಿನ ಬಲದ ಜತೆಗೆ ಒಂದು ಚಿಂತನಶೀಲ ಮನಸ್ಸು ಪುಸ್ತಕದುದ್ದಕ್ಕೂ ಕೆಲಸ ಮಾಡಿದೆ. ಈ ಮಾತನ್ನು ಗಮನಿಸಿ: ''ಮನಸ್ಸು ಕತ್ತಲೆಗೆ ಪ್ರಾಮುಖ್ಯತೆ ಕೊಡುವುದಿಲ್ಲ. ವಾಸ್ತವವಾಗಿ ಕತ್ತಲೆ ಸದಾಕಾಲ ಇರುವ ಒಂದು ಸ್ಥಿತಿ. ಬೆಳಕು ಬರುತ್ತದೆ ಮತ್ತು ಹೋಗುತ್ತದೆ. ಹಾಗಾಗಿ ಬೆಳಕಿಗೆ ಬೆಲೆ. ಹಾಗೆಯೇ, ಇರುವ ಆರೋಗ್ಯಕ್ಕಿಂತ ಬಂದುಹೋಗುವ ರೋಗಕ್ಕೆ ಮಾನ್ಯತೆ.'' ಹೋಮಿಯೋಪತಿ ವಿಧಾನದ ಬಗ್ಗೆ ವಿವರಿಸುತ್ತಾ ಹೇಳುವ ಮಾತು – ''ಸೃಷ್ಟಿಯಲ್ಲಿ ವಿಕಾಸ ನಿರಂತರ. ಆವಿಷ್ಕಾರ ಅನಂತ. ಪ್ರತಿಕ್ಷಣ ಹಳತು ಹೊಸತಿಗೆ ದಾರಿ ಮಾಡಿಕೊಡುತ್ತದೆ. ಹೊಸತು ಮತ್ತೆ ಹಳತಾಗಿ ಇನ್ನೊಂದು ಹೊಸತಿಗೆ ಅಂಕುರವಾಗುತ್ತದೆ.'' ಇದು ವೈದ್ಯನೊಬ್ಬನ ಸಾಮಾನ್ಯ ಶಬ್ದ ಸಾಮರ್ಥ್ಯವನ್ನು ಮೀರಿದ್ದು: ಭಾಷೆಯ ಮೆರುಗು ಓದುಗಾರಿಕೆಯ ಫಲ.

ವೈದ್ಯಮುಖದಲ್ಲಿ ಮುಖ್ಯವಾಗಿ ಇರಬೇಕಾದ್ದು ನಗು. ಈ ನಗುವೇ ರೋಗಿಯ ಭರವಸೆ. ಲೇಖಕರಿಗೆ ಒಂದು ಸದಭಿರುಚಿಯ ಹಾಸ್ಯಪ್ರಜ್ಞೆ ಇದೆ. ಕ್ಲಿನಿಕ್ಕಿಗೆ ಬಂದ ರೋಗಿಗಳನ್ನು ನಗಿಸಿ ನಗಿಸಿ ಅವರಿಗೆ ಅಭ್ಯಾಸ. ಹೀಗೆ ನಗಿಸಿ ನೋವು ಕಡಿಮೆ ಮಾಡುವುದು ಅವರ ಚಿಕಿತ್ಸಾ ವಿಧಾನಗಳಲ್ಲಿ ಒಂದೆಂದು ಕಾಣುತ್ತದೆ. ಒಂದು ಸಾರಿ ಅವರ ಕ್ಲಿನಿಕ್ಕಿಗೆ ಒಬ್ಬ ಅಜ್ಜ ಹೊಟ್ಟೆ ಅದುಮಿಕೊಂಡು ''ಹೊಟ್ಟೆ ಉರಿ... ಹೊಟ್ಟೆ ಉರಿ ಡಾಕ್ಟ್ರೇ...'' ಬೊಬ್ಬೆ ಹಾಕುತ್ತಾ ಬಂದರು. ಅಸಾಧ್ಯ ಗಾಂಭೀರ್ಯದಿಂದ ವೈದ್ಯರು ''ಯಾರನ್ನು ಕಂಡ್ರೆ ತಾತ ?'' ಅಂದರು! ನೋವು ಮರೆತು ಆ ಅಜ್ಜ ಹೊಟ್ಟೆಬಿರಿಯ ನಕ್ಕರು! ಇಂಥದ್ದೇ ತಮಾಷೆ ಸ್ವಭಾವ ಪುಸ್ತಕದ ಉದ್ದಕ್ಕೂ ಇದೆ : ಮತ್ತು ಒಳ್ಳೆಯ ಭಾಷೆಯಲ್ಲಿ ಅದು ವ್ಯಕ್ತಗೊಂಡಿದೆ. ಹೋಮಿಯೋಪತಿ ಬಗ್ಗೆ ಇರುವ 'ವೈಜ್ಞಾನಿಕ ಮೂಢನಂಬಿಕೆ'ಗಳ ಬಗ್ಗೆ ಪ್ರಸ್ತಾಪಿಸುತ್ತಾ ''ಹೋಮಿಯೋಪತಿ ಔಷಧಿ ಬಳಸಿದಾಗ ಮೊದಲು ಜಾಸ್ತಿ ಆಗುತ್ತಂತೆ, ಅಂತ ಕೆಲವರು ಕೇಳ್ತಾರೆ. ಹೃದಯಸ್ತಂಭನ ಆಗಿರುವಾಗ ಜಾಸ್ತಿ ಆಗಿಬಿಟ್ರೆ ಏನು ಗತಿ ?'' ಪರಿಹಾಸದಿಂದ ಉತ್ತರಿಸುತ್ತಾರೆ.

''ಹೋಮಿಯೋಪತಿ ಔಷಧಿಯಲ್ಲಿ ಸ್ಟೀರಾಯ್ಡ್ ಸೇರಿಸುತ್ತಾರಂತೆ? ಇದು ಹೋಮಿಯೋಪತಿ ವೈದ್ಯರು ಎದುರಿಸುತ್ತಿರುವ ಇನ್ನೊಂದು ಸಮಸ್ಯೆಯಂತೆ.'' ಇಲ್ಲಿ ವೈದ್ಯರ ಉತ್ತರ ಗಂಭೀರವಾಗಿದೆ. ''ಯಾವುದೇ ನಿಷ್ಠಾವಂತ ಹೋಮಿಯೋಪತಿ ವೈದ್ಯ ಇಂಥ ವ್ಯಭಿಚಾರ ಮಾಡಲಾರ'' ಅನ್ನುತ್ತಾರೆ. ಲೇಖಕರಿಗೆ ಮಾತಿನಲ್ಲಿ ನಿಪುಣತೆ ಸಾಧಿಸಿದೆ. ಈ ಪ್ರಶ್ನೆಯನ್ನು ''ಬೇರೆ ವೈದ್ಯರು ಸ್ಟೀರಾಯ್ಡ್ ಕೊಟ್ಟಾಗಲೂ ವಾಸಿಯಾಗದ ಕಾಯಿಲೆ ಹೋಮಿಯೋಪತಿ ವೈದ್ಯ ಕೊಟ್ಟಾಗ ಗುಣವಾಗುವುದು ಹೇಗೆ ಸಾಧ್ಯ ?'' ಎಂಬ ಪ್ರಶ್ನೆಯಿಂದ ಎದುರಿಸುತ್ತಾರೆ. ಹೋಮಿಯೋಪತಿ ಚಿಕಿತ್ಸಾವಿಧಾನದ ಬಗ್ಗೆ ಈ ವೈದ್ಯರು ಆಗಾಗ ಒಂದು ಮಾತನ್ನು ಹೇಳುತ್ತಿರುತ್ತಾರೆ. ''ನಿಮ್ಮ ಮನೆ ಬೀಗದ ಕೀಲಿಕೈ ಕಳೆದಿದೆ. ನಮ್ಮ ಕೀಲಿಯಿಂದ ತೆಗೆಯಲು ಪ್ರಾಮಾಣಿಕವಾಗಿ ಪ್ರಯತ್ನಿಸುತ್ತೇವೆ. ಬೀಗ ತೆರೆದರೆ ನಿಮಗೂ- ನಮಗೂ ಸಂತೋಷ. ಒಂದು ವೇಳೆ ಆಗಲಿಲ್ಲವೋ, ಬೀಗವಂತೂ ಮುರಿಯುವುದಿಲ್ಲ.''

ನಮ್ಮಲ್ಲಿ ಅನೇಕರು ಇತರ ಪ್ರಕಾರಗಳಲ್ಲಿ ಗುಣ ಕಾಣದೆ ಹೋಮಿಯೋಪತಿ ಆಶ್ರಯಿಸಿ ಗುಣ ಹೊಂದಿರುತ್ತೇವೆ. ಹೋಮಿಯೋಪತಿ ಪ್ರಕಾರದ ಬಗ್ಗೆ ಒಂದು ಮಾಹಿತಿ, ಒಂದು ಜ್ಞಾನ ನಮಗಿರುವುದಿಲ್ಲ. ಅಂಥ ತಿಳುವಳಿಕೆಯನ್ನು ಈ


ಲೇಖಕರು : **ಡಾ|| ಬಿ. ಟಿ. ರುದ್ರೇಶ್**

**ನಿರುಪಮಾ ಪ್ರಕಾಶನ**

೧೮೨, ಕಟ್ಟಡ ಸಂ. ೧೭೮

ಕೆ. ಎಚ್. ಬಿ. ಕಾಲೊನಿ

ಕೆಂಗೇರಿ ಉಪನಗರ, ಬೆಂಗಳೂರು - ೬೦

**ಪುಟ : VI+ ೧೫೪** **ಬೆಲೆ : ರೂ. ೧೦೦**


ಪುಸ್ತಕ ಸಮಗ್ರವಾಗಿ ಮತ್ತು ಸರಳವಾಗಿ ಪೂರೈಸುತ್ತದೆ. ಹೋಮಿಯೋಪತಿ ಜನಕ ಹಾನಿಮನ್ ಬಗ್ಗೆ, ಈ ವೈದ್ಯಕೀಯ ಪದ್ಧತಿಯ ಬಗ್ಗೆ ಸಂಕ್ಷಿಪ್ತ ಹಾಗೂ ಖಚಿತ ನಿರೂಪಣೆಗಳಿವೆ.

''ಹೋಮಿಯೋಪತಿ ಸಿದ್ಧಾಂತದಲ್ಲಿ ವಿಜ್ಞಾನ ಮತ್ತು ಮಾನವೀಯತೆ ಮೇಳೈಸಿವೆ. ಈ ಚಿಕಿತ್ಸೆ ವ್ಯಕ್ತಿಯ ಋಣಭಾರವನ್ನು ಏರಿಸದೆ, ರೋಗಭಾರವನ್ನು ಇಳಿಸುತ್ತದೆ. ಇನ್ನಿಂಥ ಕಡುಬಡವನ ಕಿಸೆಗೂ ತೊಂದರೆಯಾಗದ ಚಿಕಿತ್ಸಾ ವಿಧಾನ'' ಎಂದು ಹೇಳುವ ಮಾತು ಹೋಮಿಯೋಪತಿ ವಿಧಾನದ ಬಗ್ಗೆ ನಂಬಿಕೆ ಇರುವವರಿಗೆ ಸಮಾಧಾನಕರ ಮಾತ್ರವಲ್ಲ, ಆಶಾಕಿರಣ ಕೂಡ.

ಲೇಖಕರು ಹೋಮಿಯೋಪತಿ ಮೂಲತತ್ವದ ಬಗ್ಗೆ ಹೇಳುತ್ತಾ ''ಯಾವುದೋ ಪದಾರ್ಥ ಆರೋಗ್ಯವಂತ ವ್ಯಕ್ತಿಯಲ್ಲಿ ಕೆಲವು ರೋಗೋತ್ಪನ್ನ ಉಂಟುಮಾಡಬಹುದಾದರೆ ಅದೇ ಪದಾರ್ಥ ಶಕ್ತೀಕೃತ ರೂಪದಲ್ಲಿ ಅದೇ ರೋಗ ಲಕ್ಷಣಗಳುಳ್ಳ ರೋಗಿಯಲ್ಲಿ ರೋಗನಿವಾರಕವಾಗುತ್ತದೆ'' ಎಂದು ಹೇಳುತ್ತಾ ಒಂದು ಸರಳ ಉದಾಹರಣೆಯಿಂದ ಸ್ಪಷ್ಟಪಡಿಸುತ್ತಾರೆ. ''ಈರುಳ್ಳಿಯಿಂದ ತಯಾರಿಸಿದ

**ಭಾರತೀ ಕಾಸರಗೋಡು**

ಔಷಧಿಯನ್ನು ಕಣ್ಣೀರು ಸುರಿಸುವವರಿಗೆ ಉಪಯೋಗಿಸುವುದು.'' ಈ ರೀತಿಯ ವಿವರಣೆಗಳು ಹೋಮಿಯೋಪತಿ ಬಗ್ಗೆ ಕುತೂಹಲ ಇರುವವರಿಗೆ ತಿಳುವಳಿಕೆಯೊಂದಿಗೆ ನಂಬಿಕೆಯನ್ನೂ ಕಟ್ಟಿಕೊಡುತ್ತದೆ. ''ವ್ಯತ್ಯಸ್ತ ಪ್ರಕೃತಿಯನ್ನು ಪ್ರಕೃತಿಯಿಂದಲೇ ಸರಿಪಡಿಸುವ ನೈಸರ್ಗಿಕ ನಿಯಮವೇ ಹೋಮಿಯೋಪತಿ ವಿಧಾನಕ್ಕೆ ಮೂಲಾಧಾರ'' ಎಂಬುದನ್ನು ಸರಳ ಉದಾಹರಣೆಗಳಿಂದ ಸ್ಪಷ್ಟಪಡಿಸುತ್ತಾರೆ.

ರೋಗ ಬರುತ್ತದೆ. ವೈದ್ಯ ವಾಸಿಮಾಡುತ್ತಾನೆ. ಆದರೆ ನಿಯಂತ್ರಣ, ಚಿಕಿತ್ಸೆಗಿಂತ ಮೇಲು ಎನ್ನುವ ಕಿವಿಮಾತನ್ನು ಲೇಖಕರು ಹೇಳುತ್ತಾರೆ. ''ಒಳ್ಳೆಯ ಆಹಾರ, ಒಳ್ಳೆಯ ಮನಸ್ಸು, ಒಳ್ಳೆಯ ಪರಿಸರ ಏರ್ಪಡಿಸಿಕೊಳ್ಳಿ. ನಿಮಗೆ ವೈದ್ಯರೇ ಬೇಡ.''

ರೋಗಿಗಳನ್ನು ಕಾಯಿಲೆಯಿಂದ ಪಾರುಮಾಡಿದ ನಂತರ, ಅವರ ಗೆಲುವು-ಚೈತನ್ಯ ಈ ಲೇಖಕ ವೈದ್ಯರಿಗೆ ಧನ್ಯತಾಭಾವ ಮೂಡಿಸುತ್ತದೆ. ಅಂಥ ಘಟನೆಯೊಂದನ್ನು ಮನಸ್ಸು ತುಂಬಿ ಸ್ಮರಿಸಿದ್ದಾರೆ. ಪುಟ್ಟ ಹುಡುಗಿಯೊಬ್ಬಳನ್ನು ದೊಡ್ಡ ಸಮಸ್ಯೆಯಿಂದ ಪಾರು ಮಾಡಿದರು. ಆಕೆಯ ತಂದೆ ವೈದ್ಯರನ್ನು ಆತ್ಮೀಯರೊಬ್ಬರಿಗೆ ಪರಿಚಯಿಸುತ್ತಾ ''ನನ್ನ ಮಗಳಿಗೆ ಆರೋಗ್ಯ ಕೊಟ್ಟ ತಂದೆ ಇವರು!'' ಎಂದರಂತೆ.

ಅನೇಕ ಕಾಯಿಲೆಗಳನ್ನು ತಾವು ಪತ್ತೆ ಹಚ್ಚಿದ ರೀತಿ, ಕೊಟ್ಟ ಔಷಧಗಳ ಹೆಸರು – ಇವೆಲ್ಲವೂ ಪುಸ್ತಕದಲ್ಲಿ ವಿವರವಾಗಿ ದಾಖಲಾಗಿವೆ. ಈ ಪಾರದರ್ಶಕತೆ ಪುಸ್ತಕದ ಮೌಲ್ಯವನ್ನು ಹೆಚ್ಚಿಸಿದೆ.

ಇಂದಿನ ಸಾಮಾನ್ಯ ಸಮಸ್ಯೆಯಾದ ಟೆನ್ಶನ್ (ಒತ್ತಡ) ಬಗ್ಗೆ ಒಂದು ಅಧ್ಯಾಯ ಇದೆ. ಒತ್ತಡ, ಅದರ ನಿರ್ವಹಣೆ-ನಿವಾರಣೆಗಳ ಬಗ್ಗೆ ಸರಳ ಚರ್ಚೆ, ಪರಿಹಾರ ಇಲ್ಲಿವೆ. ಸ್ಟ್ರೆಸ್ ಅಥವಾ ಒತ್ತಡಗಳಿಂದ ಪಾರಾಗುವುದು ಸಾಧ್ಯವಿಲ್ಲ ಅಂದಾಗ, ಅದನ್ನು ಪಳಗಿಸಿಕೊಳ್ಳುವುದರಲ್ಲಿ ಜಾಣತನವಿದೆ ಅನ್ನುತ್ತಾರೆ. ಜಗತ್ತಿನಲ್ಲಿ ಹೊಸತೇನಾದರೂ ಸೃಷ್ಟಿಯಾಗಿದ್ದರೆ, ಅದು ಉದ್ವಿಗ್ನತೆ ಮತ್ತು ವೇಗ ಇರುವ ಮನಸ್ಸಿನಿಂದಲೇ ಸಾಧ್ಯವಾಗಿದೆ ಎಂದು ಅಭಿಪ್ರಾಯಪಡುತ್ತಾರೆ. ''ಇಂದಿನ ನಾಗರಿಕತೆ ಮುನ್ನುಗ್ಗುತ್ತಿದೆ. ಅದು ಯಾರ ಅನುಕೂಲಕ್ಕಾಗಿ ನಿಲ್ಲುವಂತಿಲ್ಲ. ನಿಲ್ಲುವುದೂ ಇಲ್ಲ. ನಾವೇ ಹೊಂದಿಕೊಳ್ಳಬೇಕಾಗುತ್ತದೆ. ಈಸಬೇಕು; ಇದ್ದು ಜೈಸಬೇಕು'' ಅನ್ನುವ ಮಾತು ಕೂಡ ಮೌಲಿಕವಾದದ್ದು.

ಪುಸ್ತಕದಲ್ಲಿ ಅಲ್ಲಲ್ಲೇ ಅನೇಕ ಸೊಗಸಾದ ಮಾತುಗಳಿವೆ. ಇವು ಪುಸ್ತಕದ ರುಚಿಯನ್ನು ಹೆಚ್ಚಿಸಿವೆ. ಒಂದು ಉದಾಹರಣೆ ಗಮನಿಸಿ – ''ಲಗೇಜು ಕಡಿಮೆಯಿದ್ದಷ್ಟೂ ಪ್ರಯಾಣ ಸುಖಕರ ಅನ್ನುವ ಮಾತು ಬದುಕಿಗೂ ಅನ್ವಯಿಸುತ್ತದೆ. ಭೂತಕಾಲದ ಅಹಿತಕರ ಅನುಭವದ ಹೊರೆಯನ್ನು ಧರಿಸಿಕೊಳ್ಳುತ್ತಲೇ ಹೋಗುವ ವ್ಯಕ್ತಿಯ ಬದುಕು ಖಂಡಿತವಾಗಿ ದುರ್ಭರ. ಎಲ್ಲ ಹೊರೆಗಳಿಗಿಂತ ದೊಡ್ಡ ಹೊರೆ ಮನಸ್ಸಿನ ಹೊರೆ... ಅದನ್ನು ಇಳಿಸಿಕೊಂಡಾಗ ಮಾತ್ರ ನೆಮ್ಮದಿ.''

**ಅಂಕುಶ**

ಕೇಂದ್ರದ ಮದ್ದಾನೆಗೆ
'ಅಂಕುಶ'ವಾಗೋಣ
ಅನ್ಯಾಯದ ತೀರ್ಪು
ಸರಿದೂಗಿಸಲು;
ಅಭಿಮಾನದ ಕೋಟೆ
ಕಟ್ಟೋಣ
ಕಾವೇರಿಯನ್ನು ರಕ್ಷಿಸಲು!

ಡಿ. ವಿ. ಬಡಿಗೇರ್
ವಿರೂಪಾಕ್ಷ ನಿಲಯ, ತುಗ್ಗಿನಪೇಟೆ,
ಗದಗ, ಬೆಟಗೇರಿ - ೫೮೨ ೧೦೨

ಜೀವದ, ಆರೋಗ್ಯದ, ಆಸೆಯನ್ನೇ ಬಿಟ್ಟಿದ್ದ ಎಂಟುವರ್ಷದ ಹೆಣ್ಣು ಮಗುವೊಂದಕ್ಕೆ ಚಿಕಿತ್ಸೆ ನೀಡಿ, ಸಂಪೂರ್ಣ ಆರೋಗ್ಯ ಮರಳಿಸಿದ ಒಂದು ವಿಶಿಷ್ಟ ಘಟನೆ ಪ್ರಸ್ತಾಪವಾಗಿದೆ. ಮಗಳ ಆಯುಷ್ಯ ಮುಗಿದೇಹೋಯ್ತು ಎಂದು ಹೆತ್ತವರು ಹತಾಶರಾಗಿ ನೆಲಕಚ್ಚಿದ್ದಾಗ, ಮಗು ಬದುಕಿದ್ದು ಮಾತ್ರವಲ್ಲ, ಕುಣಿದು ಕುಪ್ಪಳಿಸಿ ಶಾಲೆಗೆ ಹೋಗುವಂತಾಯಿತು. ಇನ್ನು ಚಿಕಿತ್ಸೆಗೆ ತಗುಲಿದ ವೆಚ್ಚ ಅತಿ ಕಡಿಮೆ. ''ದೇವಪೂಜೆಯ ನಂತರ ನಿಮ್ಮನ್ನೇ ಸಾರ್ ನಾವು ನೆನೆಸಿಕೊಳ್ಳೋದು'' ತಾಯ್ತಂದೆ ಅಂದರೆ, ''ನೀನೊಲಿದರೆ ಕೊರಡು ಕೊನರುವುದಯ್ಯಾ...'' ವೈದ್ಯರು ದೈವಕ್ಕೆ ಕೃತಜ್ಞತೆ ಸಲ್ಲಿಸಿದರಂತೆ.

ಲೇಖಕರಿಗೆ ತಮ್ಮ ವೃತ್ತಿಧರ್ಮದ ಬಗ್ಗೆ ಪ್ರೀತಿ ಇದೆ : ಗೌರವ ಇದೆ. ತಮ್ಮ ರೋಗಿಗಳ ಬಗ್ಗೆ ಕಾಳಜಿ-ತುಡಿತಗಳಿವೆ. ಅವರ ವೈದ್ಯಧರ್ಮವನ್ನು ಅವರೇ ಕೊಡುವ ಒಂದು ಉದಾಹರಣೆಯಿಂದ ಗ್ರಹಿಸಬಹುದು. ಆ ಮನೋಜ್ಞ ಉದಾಹರಣೆ ಹೀಗಿದೆ –

''ಲಂಡನ್ನಿನ ನಿಯತಕಾಲಿಕವೊಂದು 'ಜಗತ್ತಿನಲ್ಲಿ ಅತ್ಯಂತ ಸಂತೋಷದಿಂದ ಇರುವ ವ್ಯಕ್ತಿ ಯಾರು?' ಎಂದು ಸಮೀಕ್ಷೆ ನಡೆಸಿತು. ಬಂದ ಉತ್ತರಗಳಲ್ಲಿ ನಾಲ್ವರನ್ನು ಅತ್ಯಂತ ಸಂತೋಷದಲ್ಲಿರುವ ವ್ಯಕ್ತಿಗಳೆಂದು ಆರಿಸಲಾಗಿತ್ತು. ಆ ನಾಲ್ವರು – (೧) ಕಲಾಕೃತಿಯನ್ನು ಬರೆದು ಮುಗಿಸಿದ ಬಳಿಕ ಶಿಳ್ಳೆಹಾಕುತ್ತಿರುವ ಕಲಾವಿದ. (೨) ಮರಳಲ್ಲಿ ಮನೆಕಟ್ಟಿ ಸಂತೋಷದಿಂದ ಕುಪ್ಪಳಿಸುತ್ತಿರುವ ಮಗು. (೩) ಮಗುವಿಗೆ ಸ್ನಾನ ಮಾಡಿಸುತ್ತಿರುವ ಅಮ್ಮ. (೪) ರೋಗಿಯೊಬ್ಬನನ್ನು ಬದುಕಿಸಲು ಹೆಣಗಾಡಿ ಯಶಸ್ವಿಯಾದ ವೈದ್ಯ.

''ಈ ನಾಲ್ಕೂ ಉದಾಹರಣೆಗಳಲ್ಲಿ ಗಮನಿಸಬೇಕಾದ ಮುಖ್ಯಾಂಶವೆಂದರೆ ಇಲ್ಲಿನ ಯಾವುದರಲ್ಲೂ ರೂಪ, ಧನ, ಅಧಿಕಾರ, ಸೆಕ್ಸ್ ಲೆಕ್ಕಕ್ಕೇ ಬಂದಿಲ್ಲ.''

ಭಾರತೀ ಕಾಸರಗೋಡು
ನಂ. ೭೩೬, ೧೪ನೇ ಕ್ರಾಸ್, ಬಿ.ಇ.ಎಲ್. ಲೇಔಟ್ ೧ನೇ ಹಂತ
ಭಾರತ್‌ನಗರ, ಮಾಗಡಿ ರೋಡ್, ಬೆಂಗಳೂರು - ೫೬೦ ೦೯೧









# ಮೋಹಕ 'ಪ್ರವೇಶದ್ವಾರ'

ಶ್ರೀನಿವಾಸ ಜೋಕಟ್ಟೆ

'ಭಾರತದ ಪ್ರವೇಶದ್ವಾರ' ಎಂದೇ ಚಿರಪರಿಚಿತವಾಗಿರುವ 'ಗೇಟ್‌ವೇ ಆಫ್ ಇಂಡಿಯಾ' ವೀಕ್ಷಿಸದಿದ್ದರೆ ಮುಂಬಯಿಗೆ ಬಂದ ಪ್ರವಾಸಿಗರ ಪ್ರವಾಸ ಪೂರ್ಣಗೊಳ್ಳುವುದಿಲ್ಲ. 'ಯುನೆಸ್ಕೋ' ಪುರಸ್ಕೃತ 'ಎಲಿಫೆಂಟಾ ಕೇವ್ಸ್'ಗೆ ಹೋಗಬೇಕಾದರೂ ಇಲ್ಲಿಂದಲೇ ಬೋಟ್ ಹಿಡಿಯಬೇಕು. ರಾಜ ಐದನೆಯ ಜಾರ್ಜ್ ಮತ್ತು ರಾಣಿ ಮೇರಿ ದೆಹಲಿ ದರ್ಬಾರ್‌ನಲ್ಲಿ ಪಾಲುಗೊಳ್ಳುವುದಕ್ಕೆ ಈ ದಾರಿಯಲ್ಲಿ ಆಗಮಿಸಿದ್ದರು. ಅದರ ಗೌರವಾರ್ಥ ಈ ಪ್ರವೇಶದ್ವಾರ. ಮಾರ್ಚ್ ೩೧, ೧೯೧೧ರಂದು ಈ ಸ್ಮಾರಕದ ಪಂಚಾಂಗ ಇಡಲಾಯಿತು.

'ಗೇಟ್‌ವೇ ಆಫ್ ಇಂಡಿಯಾ'ದ ಕೊನೆಯ ಡಿಸೈನ್‌ಗೆ ಆಗಸ್ಟ್ ೧೯೧೪ರಲ್ಲಿ ಮಂಜೂರು ನೀಡಿ, ೧೯೨೧ರಲ್ಲಿ ಇದರ ಕೆಲಸ ಪೂರ್ಣಗೊಂಡಿತು. ಡಿಸೆಂಬರ್ ೪, ೧೯೨೪ರಂದು ವೈಸ್‌ರಾಯ್‌ರ ಹಸ್ತದಿಂದ ಭಾರತದ ಈ ಪ್ರವೇಶದ್ವಾರವನ್ನು ಉದ್ಘಾಟಿಸಲಾಯಿತು.

೧೬ನೇ ಶತಾಬ್ದಿಯ ಗುಜರಾತಿ ಮತ್ತು ಮುಸಲ್ಮಾನಿ ಶಿಲ್ಪಕಲೆಯ ಸಮನ್ವಯದಿಂದ (ಅಮದಾಬಾದಿ ಇಸ್ಲಾಮಿ ಶೈಲಿ) ಪ್ಯಾರಿಸ್‌ನ Arc de Triompheನ ಮಾದರಿಯಲ್ಲಿ ಮ್ಯುರಿಶ್ ಶೈಲಿಯಲ್ಲಿ ಜಾರ್ಜ್ ವೈಟೆಟ್ ನಿರ್ಮಿಸಿದ ಈ ೨೬ ಮೀಟರ್ ಎತ್ತರದ 'ಪ್ರವೇಶದ್ವಾರ'ದ ಗುಂಬಜದ ವ್ಯಾಸ ೪೮ ಅಡಿ ಇದ್ದು, ಆ ದಿನಗಳಲ್ಲಿ ೨೧ ಲಕ್ಷ ರೂ. ಖರ್ಚಾಗಿತ್ತು. ಇದರ ನಿರ್ಮಾಣಕಾರ್ಯದಲ್ಲಿ ಹಳದಿರಂಗಿನ ಖರೋಡಿ ಬೆಸಾಲ್ಟ್ ಕಲ್ಲು ಮತ್ತು ವಿದೇಶಿ ಕಾಂಕ್ರೀಟ್‌ಗಳನ್ನು ಬಳಸಲಾಗಿದೆ.

ಫೆಬ್ರವರಿ ೨೮, ೧೯೪೮ರಂದು ಭಾರತದ ಕೊನೆಯ ಬ್ರಿಟಿಷ್ ಸೇನೆಯು ಈ ದ್ವಾರದಿಂದಲೇ ಭಾರತವನ್ನು ಬಿಟ್ಟುಹೋಗಿತ್ತು.

ಸೂರ್ಯೋದಯ ಮತ್ತು ಸೂರ್ಯಾಸ್ತ ಇದರ ಮೇಲೆ ಬಣ್ಣಬಣ್ಣದ ಪ್ರತಿಫಲನಗಳನ್ನು ಕಾಣಿಸುತ್ತವೆ.

ಈ ಗೇಟ್‌ನಲ್ಲಿ ನಿಂತರೆ ಅರಬ್ಬೀ ಸಮುದ್ರ ಮತ್ತು ಮುಂಬಯಿಯ ಅಪೋಲೋ ಬಂದರು ದೃಶ್ಯಗಳು ಬಹು ಸುಂದರವಾಗಿ ಕಾಣುತ್ತವೆ. ಪ್ರವಾಸಿಗಳು ಒಂದು ಗಂಟೆಯ ಬೋಟ್ ಪ್ರಯಾಣದಿಂದ ಸಾಗರ ವಿಹಾರದ ಆನಂದ ಸವಿಯಬಹುದು. ಇಲ್ಲಿಂದ 'ಎಲಿಫೆಂಟಾ ಕೇವ್ಸ್'ಗೆ ಮಧ್ಯಾಹ್ನ ಮೂರು ಗಂಟೆಯ ತನಕ ಬೋಟ್‌ಗಳು ಹೊರಡುತ್ತವೆ.

**ಮೋಹಕ ಪರಿಸರ**

೧೯೬೧ರಲ್ಲಿ ಗೇಟ್‌ವೇ ಆಫ್ ಇಂಡಿಯಾದ ಎದುರುಗಡೆ ಕುದುರೆ ಮೇಲೆ ಕೂತ (ಅಶ್ವಾರೋಹಿ) ಮರಾಠವೀರ ಶಿವಾಜಿ ಮಹಾರಾಜ ಮತ್ತು ಸ್ವಾಮಿ ವಿವೇಕಾನಂದರ ಪ್ರತಿಮೆಗಳನ್ನು ಸ್ಥಾಪಿಸಲಾಗಿದೆ. ಪಕ್ಕದಲ್ಲೇ ಶಿವಾಜಿ ಉದ್ಯಾನವೂ ಇದೆ. ಎದುರಿಗೆ ಟಾಟಾ ಗ್ರೂಪ್‌ನ ಹೋಟೆಲು 'ತಾಜ್ ಇಂಟರ್‌ಕಾಂಟಿನೆಂಟಲ್' ಕೂಡ ಇದೆ. ಬ್ರಿಟಿಷರ ಹೋಟೆಲ್ ವ್ಯಾಟ್ಸನ್‌ನಲ್ಲಿ ಭಾರತೀಯರಿಗೆ ಆ ದಿನಗಳಲ್ಲಿ ಪ್ರವೇಶಾಧಿಕಾರ ಇರಲಿಲ್ಲ. ಇದನ್ನು ವಿರೋಧಿಸಿದ ಜೆ. ಎನ್. ಟಾಟಾ ಅವರು ಇಲ್ಲಿ ತಾಜ್ ಹೋಟೆಲ್ ಸ್ಥಾಪಿಸಿ ಸ್ಪರ್ಧೆ ನೀಡಿದ್ದರು.

ಸ್ವಲ್ಪ ದೂರದಲ್ಲಿ ಎಡಕ್ಕೆ ಶಹೀದ್ ಭಗತ್ ಸಿಂಗ್ ಮಾರ್ಗದಲ್ಲಿ ಸಾಸೂನ್ ಡಾಕ್ ಇದೆ. ಇದು ಮೀನಿನ ರಖಂ ಮಾರುಕಟ್ಟೆ. ಇಲ್ಲಿ ಕೋಲಿ ಮಹಿಳೆಯರು ಮೀನು ಮಾರುತ್ತಾರೆ. ಈ ಮಾರುಕಟ್ಟೆಯಲ್ಲಿ ಫೋಟೊ ತೆಗೆಯುವುದಕ್ಕೆ ನಿಷೇಧವಿದೆ. ಇಲ್ಲಿಂದ ಸ್ವಲ್ಪದೂರಕ್ಕೆ ಸೈಂಟ್ ಜಾನ್ಸ್ ಅಥವಾ ಆಫ್‌ಘನ್ ಚರ್ಚ್ ನೋಡಬಹುದು. ಮೂನ್ ಮಂದಿರ್, ಲೈಟ್ ಹೌಸ್ ಮೊದಲಾದ ಕೊಲಬಾ ಪಾಯಿಂಟ್‌ಗಳನ್ನು ವೀಕ್ಷಿಸಬಹುದು.

ಗೇಟ್‌ವೇ ಆಫ್ ಇಂಡಿಯಾದ ಹಿಂಬದಿ ರಸ್ತೆಯಲ್ಲೇ ಮುಂದುವರಿದರೆ ಜಹಾಂಗೀರ್ ಆರ್ಟ್ ಗ್ಯಾಲರಿ, ಪ್ರಿನ್ಸ್ ಆಫ್ ವೇಲ್ಸ್ ಮ್ಯೂಸಿಯಂ, ಹುತಾತ್ಮ ಚೌಕ್, ಆಚೆಗೆ ಹೋದರೆ ಶೇರು ಮಾರುಕಟ್ಟೆ, ಏಷ್ಯಾಟಿಕ್ ಸೊಸೈಟಿ ಲೈಬ್ರರಿ... ಇವೆಲ್ಲವುಗಳನ್ನು ಪ್ರವಾಸಿಗರು ವೀಕ್ಷಿಸಬಹುದು. ಹಾಗೇ ನೋಡುತ್ತ ನೋಡುತ್ತ ಫೌಂಟನ್‌ನಲ್ಲಿ ಬಲಕ್ಕೆ ತಿರುಗಿದರೆ ವಿ.ಟಿ. ರೈಲ್ವೆ ಸ್ಟೇಷನ್, ಎಡಕ್ಕೆ ತಿರುಗಿದರೆ ಚರ್ಚ್ ಗೇಟ್ ರೈಲ್ವೆ ಸ್ಟೇಷನ್‌ಗೆ ಬರಬಹುದು. ಚರ್ಚ್ ಗೇಟ್‌ನಲ್ಲಿ ಮುಂದಕ್ಕೆ ಹೋದರೆ 'ಕ್ವೀನ್ಸ್ ನೆಕ್ಲೇಸ್'ನ ಮನೋಹರ ದೃಶ್ಯ ವೀಕ್ಷಿಸಬಹುದು. ಹಿಂಬದಿ ರಸ್ತೆಯಲ್ಲೇ ಮುಂದುವರಿದರೆ ಈಚೆಗೆ 'ನರಿಮನ್ ಪಾಯಿಂಟ್' ಕ್ಷೇತ್ರವನ್ನು ಸುತ್ತಾಡಬಹುದು. ಇದು ಭಾರತದ 'ಮ್ಯಾನ್‌ಹಟ್ಟನ್' ಎಂದು ಬಿರುದು ಪಡೆದಿದೆ.

## ಸೌಂದರ್ಯೀಕರಣ ಮತ್ತು ವಿರೋಧ

ಗೇಟ್‌ವೇ ಆಫ್ ಇಡಿಯಾದ ಸೌಂದರ್ಯೀಕರಣ ಕುರಿತಂತೆ ಇದೀಗ ಮುಂಬಯಿ ಮಹಾನಗರ ಪಾಲಿಕೆಯು ೬ ಕೋಟಿ ೨೫ ಲಕ್ಷ ರೂ. ಖರ್ಚು ಮಾಡುವ ಪ್ರಸ್ತಾವವನ್ನು ಸ್ಥಾಯಿ ಸಮಿತಿಯಲ್ಲಿ ಮಂಜೂರು ಮಾಡಿಸಿದೆ. ಶಿವಸೇನೆ - ಬಿಜೆಪಿಯ ಈ ಪ್ರಸ್ತಾವಕ್ಕೆ ವಿರೋಧ ಪಕ್ಷಗಳು ಆಕ್ಷೇಪ ಮಾಡಿದ್ದರೂ ಕೊನೇ ಗಳಿಗೆಯಲ್ಲಿ ಕಾಂಗ್ರೆಸ್ ಒಪ್ಪಿಗೆ ನೀಡಿದೆ.

ಕಳೆದ ೫ ವರ್ಷಗಳ ಅವಧಿಯಲ್ಲಿ ಇಲ್ಲಿನ ಮಹಾನಗರ ಪಾಲಿಕೆ ೨ಯೋಜನೆಗಳಲ್ಲಿ ಆಸಕ್ತಿ ವಹಿಸಿದೆ. ಮೊದಲನೆಯದು 'ಅರ್ಬನ್ ಡಿಸೈನ್ ರಿಸರ್ಚ್ ಇನ್‌ಸ್ಟಿಟ್ಯೂಟ್'ನ ಖ್ಯಾತ ಆರ್ಕಿಟೆಕ್ಟ್ ಚಾರ್ಲ್ಸ್ ಕೊರಿಯಾ ತಯಾರಿಸಿದ ಯೋಜನೆ. ಎರಡನೆಯದು 'ಇಂಡಿಯನ್ ನೇಶನಲ್ ಟ್ರಸ್ಟ್ ಫಾರ್ ಆರ್ಟ್ ಆ್ಯಂಡ್ ಕಲ್ಚರಲ್ ಹೆರಿಟೇಜ್'ನ ಪಿ. ಕೆ. ದಾಸ್ ತಯಾರಿಸಿದ ಯೋಜನೆ. ಈ ಎರಡೂ ಯೋಜನೆಗಳ ಅಧ್ಯಯನಕ್ಕಾಗಿ ರಾಜ್ಯ ಸರಕಾರದ ಮುಖ್ಯ ಕಾರ್ಯದರ್ಶಿಯವರು ಒಂದು ಟಾಸ್ಕ್ ಫೋರ್ಸ್ ರಚಿಸಿದ್ದರು. ಮಹಾನಗರ ಪಾಲಿಕೆಯು 'ಇಂಡಿಯನ್ ನೇಶನಲ್ ಟ್ರಸ್ಟ್ ಫಾರ್ ಆರ್ಟ್ ಆ್ಯಂಡ್ ಕಲ್ಚರಲ್ ಹೆರಿಟೇಜ್'ನ ಯೋಜನೆಗೆ ಮಂಜೂರು ನೀಡಿದ್ದರೂ ವಿರೋಧ ಕಾಣಿಸಿದೆ. ಈ ಸೌಂದರ್ಯೀಕರಣದ ಯೋಜನೆಯಲ್ಲಿ ಗೇಟ್‌ವೇ ಆಫ್ ಇಂಡಿಯಾದ ಎದುರಿನ ಉದ್ಯಾನವನ್ನು ಚಿಕ್ಕದು ಮಾಡುವುದು, ಅಲ್ಲಿ ಶೌಚಾಲಯದ ನಿರ್ಮಾಣ ಮಾಡುವುದು (ಸದ್ಯಕ್ಕೆ ಇಲ್ಲಿ ಶೌಚಾಲಯವಿಲ್ಲ), ಪ್ರವಾಸಿಗರ ಸಮಸ್ಯೆ ಇದ್ದರೆ ನಿವಾರಿಸಲು ಪರ್ಯಟನೆ ಪೊಲೀಸ್ ಚೌಕಿ, ಬುಕ್ಕಿಂಗ್ ವಿಂಡೋಸ್, ಅಲ್ಲದೆ ಗೇಟ್‌ವೇ ಎದುರಿನ ಖಾಲಿ ಜಾಗದಲ್ಲಿ ಜೈಪುರದ ಮಾರ್ಬಲ್ ಹಾಕಿಸುವುದು ಇವೆಲ್ಲವೂ ಸೇರಿವೆ.

ಆದರೆ ಉದ್ಯಾನದ ಶಿವಾಜಿ ಪ್ರತಿಮೆಯ ಬಳಿ ಶೌಚಾಲಯ ನಿರ್ಮಾಣಕ್ಕೆ ರಾಷ್ಟ್ರವಾದಿ ಕಾಂಗ್ರೆಸ್ ಪಾರ್ಟಿ ವಿರೋಧಿಸಿದೆ. ಸೌಂದರ್ಯೀಕರಣದ ಪ್ರಸ್ತಾವವಿರುವ ಬಜೆಟ್‌ನಲ್ಲಿ ಮಹಾನಗರ ಪಾಲಿಕೆಯು ತೋರಿಸಿದ್ದು ೪ ಕೋಟಿ ೯೫ ಲಕ್ಷ ರೂ. ಆದರೆ ಪ್ರಸ್ತಾವ ಮಂಡಿಸಿದಾಗ ಅದರಲ್ಲಿ ೬ ಕೋಟಿ ೨೫ ಲಕ್ಷದ ೯೫,೩೭೩ ರೂಪಾಯಿ ಖರ್ಚು ಎಂದು ಕಾಣಿಸಲಾಗಿದೆ. ಹಾಗಿರುವಾಗ ಈ ಖರ್ಚು ಎಲ್ಲಿ, ಎಷ್ಟಾಗುವುದು... ಎಂಬ ಯಾವ ಮಾಹಿತಿಯೂ ಸ್ಥಾಯಿ ಸಮಿತಿಯ ಎದುರು ಮಂಡಿಸಲಾದ ಪ್ರಸ್ತಾವದಲ್ಲಿಲ್ಲ ಎಂಬುದು ವಿಪಕ್ಷಗಳ ಆಕ್ಷೇಪವಾಗಿತ್ತು. ಅಂತೂ ಇದೀಗ ಅದಕ್ಕೆ ಮಂಜೂರು ಸಿಕ್ಕಿದೆ.

'ಗೇಟ್‌ವೇ ಆಫ್ ಇಂಡಿಯಾ' ಸದಾ ಪ್ರವಾಸಿಗರಿಂದ ಸುತ್ತುವರಿಯಲ್ಪಟ್ಟ ತಾಣ. ಸಾಗರದುದ್ದಕ್ಕೂ ಸಾಲಾಗಿ ನಿಂತ ಬೋಟ್‌ಗಳು, ದೂರದಲ್ಲಿ ಹಡಗುಗಳು, ಫೋಟೋ ತೆಗೆಯುವುದರಲ್ಲಿ ಮಗ್ನರಾದ ಪ್ರವಾಸಿಗರು. ಆದರೆ ಆಗಸ್ಟ್ ೨೦೦೩ರಲ್ಲಿ ಇಲ್ಲಿ ಆತಂಕವಾದಿಗಳಿಂದ ಬಾಂಬ್ ಸ್ಫೋಟ ನಡೆದ ದುರಂತಮಯ ದೃಶ್ಯ ಇಲ್ಲಿನ ಭದ್ರತೆ ಹೆಚ್ಚಿಸಲು ಕಾರಣವಾಯಿತು. ಆನಂತರ ಪಾರ್ಕಿಂಗ್‌ನ ವಿಷಯದಲ್ಲಿ ಪೊಲೀಸರು ಹಲವಾರು ನಿಯಮಗಳನ್ನು ತಂದಿದ್ದಾರೆ.

ಇಂದು ಈ ಸ್ಥಳ ಕೇವಲ ಮುಂಬಯಿಗೆ ಮಾತ್ರವಲ್ಲ, ಭಾರತಕ್ಕೂ ಬಹಳ ಮಹತ್ವಪೂರ್ಣ ಸ್ಥಳ. ಸಮುದ್ರವಿಹಾರದ ಮಜಾ ಇಲ್ಲಿ ಸಿಕ್ಕಿದಷ್ಟು ಮತ್ತೆಲ್ಲೂ ಅನುಭವಕ್ಕೆ ಬರಲಾರದು! ಆದರೆ ಗ್ಲೋಬಲ್ ವಾರ್ಮಿಂಗ್‌ನ ಕಾರಣ ೨೦೫೦ನೇ ವರ್ಷದಲ್ಲಿ ಇದು ನೀರಲ್ಲಿ ಮುಳುಗುವ ಸಾಧ್ಯತೆಯಿದೆ ಎಂಬ ವಿಚಾರವೂ ಇದೀಗ ಚರ್ಚೆಯಾಗುತ್ತಿದೆ! ಇದೆಷ್ಟು ನಿಜವೋ ಎನ್ನುವುದು ಕಾಲವೇ ಹೇಳಬೇಕು.

ಚಿತ್ರ-ಲೇಖನ : **ಶ್ರೀನಿವಾಸ ಜೋಕಟ್ಟೆ**
ಪತ್ರಕರ್ತರು, ಗೋರೈ ಸುಯೋಗ್, ಫ್ಲ್ಯಾಟ್ ನಂ. ೨೦೧, ಪ್ಲಾಟ್ ನಂ. ೯೧, ಗೋರೈ-೨
ಆಫ್. ಗೋರೈ ಲಿಂಕ್ ರೋಡ್, ಬೊರಿವಿಲಿ (ಪ), ಮುಂಬಯಿ - ೪೦೦ ೦೯೨

# ಕೆದಕದಿರು ಇತಿಹಾಸ

**ಸಂತೇಬೆನ್ನೂರು ಫೈಜ್ನಟ್ರಾಜ್**
ಸರ್ಕಾರಿ ಪ್ರೌಢಶಾಲೆ, ಕಣಿವೆ ಬಿಳಚಿ - ೫೭೭ ೨೩೧
ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ

ಮಾತುಗಳ ಎತ್ತು
ವುದು ಬೇಡ
ಬಿದ್ದಿರಲಿ ಬಿಡು
ಹಳೇ ಎತ್ತಿನಂತೆ!

ಕಳೆದಿದ್ದು ಎಲ್ಲೋ
ಇಲ್ಲೇನು ಹುಡುಕುವೆ?
ಕೆದಕದಿರು
ಇತಿಹಾಸ
ಹಾರೀತು ಧೂಳು
ಕಣ್ಣು ಕೆಂಪಾದಂತೆ!

ಇದ್ದ
ಕಾರಣವ ಅರಿಯದ
ನಾವು
ಇಲ್ಲದ್ದ ತಡಕಾಡಿ
ಖಾಲಿ ಎದೆಯಾವರಿಸಿ
ಶೂನ್ಯ ಸ್ತನಕೆ ನಿರಾಶೆ
ಏಕೆ?

ಭೂತವದು
ಹರಿದ ನೀರು
ಮತ್ತೇಕೆ ವೃಥಾ ಹಿಂದಕೆಳೆವೆ
ಸಾಗಲಿ
ಹೊಸದಕೆ ದಾರಿಯಾಗಲಿ
ಮೌನವಾಗು ಚಿಂತನೆ ಚಿಗುರಲಿ!

ತಂದ ಹಾಲು
ಹೆಪ್ಪಾಗಿದೆ
ಮೊಸರಾಗಿಸಿ ಬೆಣ್ಣೆಯಾಗುವ
ಹಳಿಯದ ನೆನೆಸಿ
ಕರಗಿ ಕೊರಗುವುದ ಬಿಟ್ಟುಬಿಡುವ!

ಇತ್ತೀಚೆಗೆ ನಡೆದ ಪ್ರಾಂಶುಪಾಲರು ಮತ್ತು ವಿಶ್ವವಿದ್ಯಾಲಯದ ಅಧಿಕಾರಿಗಳ ಒಂದು ಸಭೆಯಲ್ಲಿ ಒಂದು ಮುಖ್ಯವಾದ ಚರ್ಚೆ ನಡೆಯಿತು. ಬರುವ ದಿನಗಳಲ್ಲಿ ಮಾನವಿಕಗಳ ಮತ್ತು ಸಾಮಾಜಿಕ ವಿಜ್ಞಾನಗಳ ಪರೀಕ್ಷೆಗಳಲ್ಲಿ ಅದರಲ್ಲೂ ೨, ೪ ಹಾಗೂ ೬ನೇ ಸೆಮೆಸ್ಟರ್‌ಗಳಲ್ಲಿ, ಇನ್ನು ಮುಂದೆ ಬಹು ಆಯ್ಕೆ ಪ್ರಶ್ನೆಗಳ (ಬ.ಆ.ಪ್ರ.) ಮಾದರಿಯನ್ನು ಜಾರಿಗೆ ತರುವುದರ ಬಗ್ಗೆ ಆ ಚರ್ಚೆ. ಈ ಮಾದರಿಯನ್ನು ಜಾರಿಗೆ ತರಲು ಮುಖ್ಯ ಉದ್ದೇಶ ಸೆಮೆಸ್ಟರ್ ಪರೀಕ್ಷೆಗಳು ಆರು ತಿಂಗಳಿಗೊಮ್ಮೆ ನಡೆಯುತ್ತಿದ್ದು ಅದು ಅಧ್ಯಾಪಕರಿಗೆ ಹೆಚ್ಚಿನ ಕೆಲಸದ ಒತ್ತಡ ತರುತ್ತಿದೆ ಮತ್ತು ಬಹು ಆಯ್ಕೆ ಪ್ರಶ್ನೆಗಳ ಮೌಲ್ಯಮಾಪನ ಮಾಡುವುದು ಸುಲಭ, ಮೌಲ್ಯಮಾಪಕರ ಕೊರತೆ ಇರುವ ಸಂದರ್ಭದಲ್ಲಿ ಈ ಮಾದರಿಯಿಂದ ಫಲಿತಾಂಶದ ಶೀಘ್ರ ಪ್ರಕಟಣೆ ಸಾಧ್ಯ ಎಂದು. ಮೌಲ್ಯಮಾಪನದಲ್ಲಿ ನಡೆಯುತ್ತಿರುವ ಆಭಾಸಗಳು, ವಿದ್ಯಾರ್ಥಿಗಳು ಎತ್ತುತ್ತಿರುವ ಪ್ರಶ್ನೆಗಳು, ಇವೆಲ್ಲದಕ್ಕೂ ಕಾರಣವಾಗಿರುವ ಪರೀಕ್ಷಾ ವ್ಯವಸ್ಥೆಯನ್ನು 'ಸರಿ' ಪಡಿಸಬೇಕಾದರೆ ಕ್ಲುಪ್ತವಾದ ಮೌಲ್ಯಮಾಪನ ಮಾದರಿಗಳ ಅಗತ್ಯವಿದೆ ಎಂದು ವಾದಿಸಲಾಗುತ್ತಿದೆ. ಅದಲ್ಲದೆ, ರಾಷ್ಟ್ರಮಟ್ಟದಲ್ಲಿ ನಡೆಯುವ ಐ.ಎ.ಎಸ್. ಮತ್ತು ಐ.ಪಿ.ಎಸ್. ಹಾಗೂ ಇತರೆ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಮೌಲ್ಯಮಾಪನ ಬಹು ಆಯ್ಕೆ ಪ್ರಶ್ನೆಗಳ ಆಧಾರದ ಮೇಲೇ ಇರುವುದರಿಂದ ನಮ್ಮ ವಿದ್ಯಾರ್ಥಿಗಳು ಈ ಪರೀಕ್ಷೆಗಳಲ್ಲಿ ಭಾಗವಹಿಸಲು ಸರಿಯಾದ ಸಿದ್ಧತೆ ನೀಡುತ್ತದೆ ಎಂಬುದು ಅವರ ವಾದ. ಜೊತೆಗೆ, ಇದು ಪದವಿ ಮಟ್ಟದಲ್ಲಿ ನಡೆಯಲಿರುವ ಮಾರ್ಪಾಡಾಗಿರುವುದರಿಂದ ಹಾಗೂ ಸಾಕಷ್ಟು ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಪ್ರಾಂತೀಯ ಭಾಷೆಯಲ್ಲಿ ಬರೆಯುವುದರಿಂದ ಇಂಗ್ಲಿಷ್‌ನಲ್ಲಿ ಬರೆಯುವ ವಿದ್ಯಾರ್ಥಿಗಳು ಮೂಲಪಠ್ಯಗಳನ್ನು ಅಧ್ಯಯನ ಮಾಡಲು ಮತ್ತು ಹೆಚ್ಚು ಅಂಕಗಳನ್ನು ಗಳಿಸಿಕೊಳ್ಳುವುದರಲ್ಲಿ ಹೆಚ್ಚು ಅನುಕೂಲಕರ ಸ್ಥಿತಿಯಲ್ಲಿರುತ್ತಾರಾದ್ದರಿಂದ, ಬಹು ಆಯ್ಕೆ ಪ್ರಶ್ನೆಗಳ ಮಾದರಿಯಲ್ಲಿ ಒಂದು ರೀತಿಯ ಸಮಾನತೆಯನ್ನು ಸಾಧಿಸಲು ಸಾಧ್ಯ.

ಚರ್ಚೆಯಲ್ಲಿ ಭಾಗವಹಿಸಿದವರ[illegible] ಅನೇಕರು ಈ ಪ್ರಸ್ತಾವನೆಯನ್ನು ವಿರೋಧಿಸಿದ್ದಾರೆ. ವಿರೋಧವಿದ್ದರೂ ಈ ನಿಯಮ ಜಾರಿಗೆ ಬರಬಹುದು ಎಂದು ಅನುಮಾನಗಳು ಹುಟ್ಟಿಕೊಂಡಿವೆ. ಇತ್ತೀಚೆಗೆ ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳು ಈ ಪದ್ಧತಿ ಇಷ್ಟರಲ್ಲೇ ಜಾರಿಗೊಳ್ಳುವುದು ಖಚಿತ ಎಂದು ಸಹ ಹೇಳಿದ್ದಾರೆ. ಜೊತೆಗೆ, ಸುಮಾರು ಕಾಲೇಜುಗಳಲ್ಲಿ ಸಂಚಾಲಕರನ್ನು ಮತ್ತು ಸಮಿತಿಗಳನ್ನು ರಚಿಸುವ ಪ್ರಯತ್ನಗಳೂ ಸಾಗಿವೆ.

ಬಹು ಆಯ್ಕೆ ಪ್ರಶ್ನೆಗಳು ಅಥವಾ ವಿಷಯಗಳು, ಸಂಕ್ಷಿಪ್ತವಾಗಿ ಹೇಳುವುದಾದರೆ, ಪಟ್ಟಿಯಲ್ಲಿ ನೀಡಿರುವ ಬಹು ಉತ್ತರಗಳ ಆಯ್ಕೆಗಳಲ್ಲಿ ಒಂದನ್ನು ಆರಿಸಿಕೊಂಡು ಉತ್ತರ ನೀಡುವ ಮಾದರಿ. ಈ ಮಾದರಿಯನ್ನು ಶಿಕ್ಷಣ, ಚುನಾವಣೆ (ಅಭ್ಯರ್ಥಿಗಳು, ಪಕ್ಷಗಳು ಮತ್ತು ಯೋಜನೆಗಳ ನಡುವಿನ ಆಯ್ಕೆ) ಮತ್ತು ಮಾರುಕಟ್ಟೆ ಅಧ್ಯಯನಗಳು ಹಾಗೂ ಇತರೆ ಕ್ಷೇತ್ರಗಳಲ್ಲಿ ಬಳಸುತ್ತಿದ್ದಾರೆ. ಎಲ್ಲರಿಗೂ ತಿಳಿದಿರುವ ಹಾಗೆ, ಸಾಮಾನ್ಯ ಶಿಕ್ಷಣದ ಅಡಿಯಲ್ಲಿ ಇಲ್ಲಿಯವರೆಗೂ ಚಾಲ್ತಿಯಲ್ಲಿ ಇರುವ ಮಾದರಿ ಎಂದರೆ ವಾರ್ಷಿಕ ಪರೀಕ್ಷೆಗಳ ಮಾದರಿ. ಇತ್ತೀಚಿನ ದಿನಗಳಲ್ಲಿ, ಸೆಮೆಸ್ಟರ್ ಸ್ಕೀಮ್‌ನಲ್ಲಿ ಆಂತರಿಕ ಮಾಪನ ಹಾಗೂ ಕೇಂದ್ರೀಕೃತ ಪರೀಕ್ಷೆಗಳು ಮತ್ತು ಮಾಪನದ ಮಾದರಿಗಳು ಬಳಕೆಗೆ ಬಂದಿವೆ. ಈ ಎಲ್ಲ ಪರೀಕ್ಷಾ ವಿಧಾನಗಳಲ್ಲಿ ಪ್ರಬಂಧ ರೂಪದ ಪ್ರಶ್ನೆಗಳೇ ಇರುತ್ತವೆ. ಬಹು ಆಯ್ಕೆ ಪ್ರಶ್ನೆಗಳು ಜಾರಿಗೆ ಬಂದ ಪಕ್ಷದಲ್ಲಿ, ಇದು ಮಾಪನದಲ್ಲಿ ಒಂದು ಹೊಸ ತಿರುವನ್ನು ಪಡೆಯುವುದು ಖಚಿತ ಹಾಗೂ ಪರಿಣಾಮಕಾರಿ ವ್ಯತ್ಯಾಸಗಳಿಗೆ ಕ್ರಮೇಣ ಎಡೆ ಮಾಡಿಕೊಡಬಹುದು. ಈಗ ಆಚರಣೆಯಲ್ಲಿರುವ ಮಾಪನ ಪದ್ಧತಿಯು ಉಳಿಸಿಕೊಳ್ಳಲೇಬೇಕಾದಂತಹ ಉತ್ತಮ ಪದ್ಧತಿ ಅಲ್ಲದಿದ್ದರೂ, ದುರಂತ ಏನೆಂದರೆ, ಈ ಕ್ರಾಂತಿಕಾರಿ ಬದಲಾವಣೆಗಳು ನಮ್ಮಲ್ಲಿ ಹೆಚ್ಚು ಅಥವಾ ಯಾವುದೇ ರೀತಿಯ ಚರ್ಚೆಯನ್ನು ಮೂಡಿಸದೆ ಇರುವುದು. ಶೈಕ್ಷಣಿಕ ಮಂಡಲಿಯಲ್ಲಿ ಇದು ಚರ್ಚೆಗೆ ಬಂದಾಗ, ಅನೇಕರು ಈ ಪ್ರಸ್ತಾವನೆಯನ್ನು ವಿರೋಧಿಸಿದ್ದರೂ, ಇದನ್ನು ಜಾರಿಗೊಳಿಸಲು ಪ್ರಾಂಶುಪಾಲರ ಸಭೆಯನ್ನು ಕರೆದಾಗ ವಿರೋಧಗಳು ವ್ಯಕ್ತವಾದರೂ, ಸರ್ವಸಮ್ಮತಿಯಿಂದ ತರಲಾಗುತ್ತಿರುವ ಯೋಜನೆಯೆಂದೇ ಇದನ್ನು ೨೦೦೮ ಏಪ್ರಿಲ್‌ನಿಂದ ಜಾರಿಗೆ ತರಲು ತಯಾರಿ ನಡೆಯುತ್ತಿದೆ. ಸಭೆಯಲ್ಲಿ ಭಾಗವಹಿಸಿದ ಪ್ರಾಂಶುಪಾಲರಲ್ಲಿ ಈ ವಿಷಯವನ್ನು ತಮ್ಮ ಕಾಲೇಜುಗಳಲ್ಲಿ ಕೂಲಂಕಷವಾಗಿ ಚರ್ಚಿಸಬೇಕೆಂಬ ಒತ್ತಡವನ್ನು ವಿಶ್ವವಿದ್ಯಾಲಯ ಹೇರಿದಂತಾಗಲಿ, ಪ್ರಾಂಶುಪಾಲರು ಈ ವಿಷಯವನ್ನು ತಮ್ಮ ಸಹೋದ್ಯೋಗಿ ಮಿತ್ರರ ಜೊತೆ ಚರ್ಚಿಸಿದ್ದಾಗಲಿ ಆಗಿಲ್ಲ. ಹೀಗಾಗಿ ಅಧ್ಯಾಪಕರಲ್ಲಿ ಇದು ಹೆಚ್ಚಾಗಿ ಚರ್ಚೆ ಆದಂತಿಲ್ಲ ಎಂದು ಸಂದೇಹಪಟ್ಟರೆ ತಪ್ಪಾಗಲಾರದು. ಜೊತೆಗೆ, ಅಧ್ಯಾಪಕರ ವೃತ್ತಿ ಸಂಘಗಳಾಗಲಿ, ವಿದ್ಯಾರ್ಥಿಗಳ ಸಂಘಗಳಾಗಲಿ ಇದನ್ನು ಚರ್ಚಿಸಿಲ್ಲ. ಅದು ಜಾರಿಯಾಗುತ್ತಿರುವ ರೀತಿ ನಿಜಕ್ಕೂ ಪ್ರಜಾತಾಂತ್ರಿಕ ಮೌಲ್ಯಗಳಲ್ಲಿ ನಂಬಿಕೆ ಇಟ್ಟಿರುವವರೆಲ್ಲರಲ್ಲೂ ಆತಂಕವನ್ನುಂಟುಮಾಡಿರುವುದು ಸಹಜ ಎನಿಸುತ್ತದೆ. ಪ್ರಾಮಾಣಿಕವಾಗಿ ಕೆಲಸ ನಿರ್ವಹಿಸುತ್ತಿರುವ, ಶಿಕ್ಷಣ ವ್ಯವಸ್ಥೆಯನ್ನು

# ಬಹು ಆಯ್ಕೆ ಪ್ರಶ್ನೆಗಳು – ಸಾಮಾಜಿಕ ವಿಜ್ಞಾನಗಳಿಗೆ ಭೂಷಣ ಅಗತ್ಯವೇ?

ಡಾ|| ಸುಧಾ ಸೀತಾರಾಮನ್

ಬಹು ಆಯ್ಕೆ ಪ್ರಶ್ನೆಗಳ ಮಾದರಿಯನ್ನು ನಾವು ಸಾರಾಸಗಟಾಗಿ ವಿರೋಧಿಸಲೇಬೇಕಾಗುತ್ತದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಬಹು ಆಯ್ಕೆ ಪ್ರಶ್ನೆಗಳ ಮಾದರಿಯು ಮೂಲಭೂತವಾಗಿ ಅದರ ಹಿಂದೆ ಅಡಗಿರುವ ತತ್ವದೆಡೆಗೆ ಬೆಟ್ಟುಮಾಡುತ್ತದೆ. ಇಡೀ ಉದ್ದೇಶವು ಅತಿ ವೇಗವಾಗಿ ಫಲಿತಾಂಶಗಳನ್ನು ಪ್ರಕಟಿಸುವುದೇ ಆಗಿದೆಯೆಂದೋ ಅಥವಾ ಮೌಲ್ಯಮಾಪಕರು ಸಿಗುತ್ತಿಲ್ಲ ಎನ್ನುವ ಕಾರಣದಿಂದಲೋ ಅಥವಾ ಸೆಮೆಸ್ಟರ್ ಸ್ಕೀಮ್‌ನಲ್ಲಿ ವರ್ಷಕ್ಕೆ ಎರಡು ಪರೀಕ್ಷೆಗಳು ಹಾಗೂ ಎರಡು ಮಾಪನಗಳು ಮಾಡಲೇಬೇಕು ಎನ್ನುವ ಕಾರಣದಿಂದಲೋ ಪ್ರೇರಣೆ ಪಡೆದದ್ದೇ ಆದರೆ, ಶಿಕ್ಷಣ ಕ್ಷೇತ್ರದಲ್ಲಿ ಆಗಲೇಬೇಕಾದ ಬದಲಾವಣೆಗಳನ್ನು ತರಲು ಸಾಧ್ಯವೆ? ಬದಲಾವಣೆಗಳು ಈಗ ಸೂಚಿಸಲಾಗುತ್ತಿರುವ ಪಾಠ ಮಾಡುವ ವಿಧಾನಗಳಿಗೆ ಸಂಬಂಧಪಟ್ಟಿರಬಹುದು, ಪಠ್ಯವನ್ನು 'ಓದುವ' ಕ್ರಮಕ್ಕೆ ಸಂಬಂಧಿಸಿರಬಹುದು, ಅಧ್ಯಾಪಕರನ್ನು ತರಗತಿಗಳಿಗೆ ಹೆಚ್ಚು ಸಿದ್ಧರನ್ನಾಗಿಸುವ ನಿಟ್ಟಿನಲ್ಲಿರಬಹುದು ಅಥವಾ ಜ್ಞಾನ ಶಿಸ್ತುಗಳನ್ನೇ ಹೆಚ್ಚು ಪ್ರಸ್ತುತ ಮಾಡುವ ನಿಟ್ಟಿನಲ್ಲಿರಬಹುದು. ಒಟ್ಟಾರೆಯಾಗಿ ಶಿಕ್ಷಣದ ಆದ್ಯ ನಿರೀಕ್ಷೆಗಳನ್ನು ಅವು ಹುಸಿಯನ್ನಾಗಿಸಬಾರದು. ಕ್ಲಿಷ್ಟವಾದ ಪ್ರಶ್ನೆಗಳನ್ನೆತ್ತಿ ವ್ಯವಸ್ಥೆಯ ಬದಲಾವಣೆಗೆ ಸಹ ಪ್ರೇರಣೆ ನೀಡಬೇಕಾದ ಕರ್ತವ್ಯವು ಸಮಾಜಶಾಸ್ತ್ರದ ಅಧ್ಯಯನದ ಪರಿಧಿಗೆ ಸೇರಿದೆ. ಇದನ್ನೆಲ್ಲಾ ಕೈಬಿಟ್ಟು ಬಹು ಆಯ್ಕೆ ಪ್ರಶ್ನೆಗಳ ಮಾದರಿಯು ಈಗಾಗಲೆ ಜಡವಾಗಿರುವ ಅಧ್ಯಯನ ಶಿಸ್ತನ್ನು ಇನ್ನೂ ಹೆಚ್ಚು ಚೈತನ್ಯರಹಿತವನ್ನಾಗಿಸುವ ಅಪಾಯವಿದೆ.

ಉತ್ತಮಗೊಳಿಸುವ ಕಾಳಜಿ ಇಟ್ಟುಕೊಂಡು ಶ್ರಮಿಸುತ್ತಿರುವ ಹಾಗೂ ವಿದ್ಯಾರ್ಥಿಗಳ ಬಗ್ಗೆ ಕಳಕಳಿ ಇರುವ ಬಹುತೇಕ ಅಧ್ಯಾಪಕರಲ್ಲಿ ಈ ಬಹು ಆಯ್ಕೆ ಪ್ರಶ್ನೆಗಳ ಮಾದರಿಯನ್ನು ಜಾರಿಗೊಳಿಸುವ ಬಗ್ಗೆ ಆತಂಕ ಉಂಟಾಗಿದೆ. ಇತ್ತೀಚಿನ ಖಾಸಗಿ ಸಂಭಾಷಣೆಗಳಲ್ಲಿ ನಾನು ಇದನ್ನು ಕಂಡಿದ್ದೇನೆ. ರಾಜ್ಯ ಮಟ್ಟದಲ್ಲಿರಬಹುದು, ರಾಷ್ಟ್ರಮಟ್ಟದಲ್ಲಿರಬಹುದು, ಬಹುತೇಕ ಮುಖ್ಯವಾಗಿರುವ ವಿಷಯಗಳು ನಮ್ಮ ಪಾರ್ಲಿಮೆಂಟಿನಲ್ಲಿ ಹಾಗೂ ಅಸೆಂಬ್ಲಿಗಳಲ್ಲಿ ಯಾವುದೇ ಚರ್ಚೆ ಇಲ್ಲದೆ ಕಾರ್ಯರೂಪಕ್ಕೆ ಬರುತ್ತಿರುವುದನ್ನು ನೋಡಿದ್ದೇವೆ. ಅದು ಶಿಕ್ಷಣದಲ್ಲಿ ಮೀಸಲಾತಿ ಪ್ರಶ್ನೆ ಇರಬಹುದು, ಮಹಿಳೆಯರು ರಾತ್ರಿ ಪಾಳಿಯಲ್ಲಿ ದುಡಿಯುವುದೂ ಇರಬಹುದು. ಈ ಹಿನ್ನೆಲೆಯಲ್ಲಿ ನೋಡಿದರೆ ಯಾವ ಚರ್ಚೆಯೂ ಇಲ್ಲದೆ ಬಹು ಆಯ್ಕೆ ಪ್ರಶ್ನೆಗಳನ್ನು ಅಳವಡಿಸುವುದು ಆಶ್ಚರ್ಯ ಎನ್ನಿಸುವುದಿಲ್ಲ. ಇದರ ಹಿಂದೆ ಇರುವ ಮತ್ತೊಂದು ಗಂಭೀರವಾದ ವಿಷಯವೆಂದರೆ, ಬಹು ಆಯ್ಕೆ ಪ್ರಶ್ನೆಗಳನ್ನು ಅಳವಡಿಸುವುದರ ಹಿಂದೆ ಅಧ್ಯಾಪಕರ ಬಗ್ಗೆ ಇರುವ ಕೆಲವು ಪೂರ್ವಗ್ರಹಗಳು: ಅಧ್ಯಾಪಕರು ಯಾವುದೇ ಬದಲಾವಣೆಯನ್ನು ಸ್ವಾಗತಿಸುವುದಿಲ್ಲ, ಯಾವುದೇ ಕಷ್ಟದ ಕೆಲಸಕ್ಕೆ ಕೈಹಾಕುವವರಲ್ಲ, ಅರ್ಥಾತ್ ಯು.ಜಿ.ಸಿ. ಕೊಡುತ್ತಿರುವ ಹೆಚ್ಚಿನ ಸಂಬಳಗಳನ್ನು ತೆಗೆದುಕೊಳ್ಳುತ್ತಾ, ಯಾವ ತರಹದ ಓದಿಗೂ ಕೈಹಾಕದೆ ಬದಲಾಗದಿರುವ ಪಠ್ಯಗಳನ್ನೇ ಪ್ರತಿವರ್ಷವೂ ಪಾಠ ಮಾಡುತ್ತಾ, ಅದೇ ಧೂಳು ಹಿಡಿದ ನೋಟ್ಸನ್ನು ಕ್ಲಾಸುಗಳಲ್ಲಿ ಕೊಡುತ್ತಾ, ಜೊತೆಗೆ, ತಂತಮ್ಮ ಸೈಡು ಬಿಸಿನೆಸ್ಸುಗಳನ್ನು ನಡೆಸುತ್ತಾ, ಮೌಲ್ಯಮಾಪನವನ್ನು ಯಾವುದಾದರೂ ಕಾರಣದಿಂದ ತಪ್ಪಿಸಿಕೊಳ್ಳುತ್ತಾ ಅಥವಾ ಹೆಚ್ಚೆಂದರೆ ಬೇಕಾಬಿಟ್ಟಿಯಾಗಿ ಮಾಡುತ್ತಾ ವಿದ್ಯಾರ್ಥಿಗಳ ಬಗ್ಗೆ ಕಿಂಚಿತ್ತು ಕಳಕಳಿ ಇಲ್ಲದೆ ಇರುವ ಒಂದು ಸಮುದಾಯ; ತಮ್ಮ ಸಾಮುದಾಯಿಕ ಪ್ರಜ್ಞೆ ಪರಿಪಕ್ವವಾಗುವುದು ತಮ್ಮ ಸಂಬಳದಲ್ಲಿ ಬಡ್ತಿ ಹಾಗೂ ಭತ್ಯೆಗಳಿಗೆ ಹೊಡೆದಾಡಲು ಬೀದಿಗೆ ಇಳಿದಾಗ ಮಾತ್ರ, ಎಂದು. ಈ ತರಹದ ಅಧ್ಯಾಪಕರು ಇಲ್ಲವೇ ಇಲ್ಲವೆಂದು ಹೇಳಲಾಗದು. ಆದರೆ ಅದನ್ನು ಹಾಗೆ ಸಾಮಾನ್ಯೀಕರಿಸುವುದು ತಪ್ಪು ಗ್ರಹಿಕೆ.




ವಿಶ್ವದಾದ್ಯಂತ ನಾವು ಗಮನಿಸಿ ನೋಡಿದಾಗ, ಬಹು ಆಯ್ಕೆ ಪ್ರಶ್ನೆಗಳ ಪ್ರಸ್ತುತತೆ ಹೆಚ್ಚಾದಂತೆ ತೋರುತ್ತದೆ. ಇದು ಕರ್ನಾಟಕವೂ ಸೇರಿದಂತೆ ಭಾರತದಲ್ಲಿ ಸಾಮಾನ್ಯ ಶಿಕ್ಷಣಕ್ಕೆ ಹೊಸದು ಎಂದು ಅನ್ನಿಸಿದರೂ, ಪಾಶ್ಚಾತ್ಯ ದೇಶಗಳಲ್ಲಿ ಮತ್ತು ಅತಿ ಹೆಚ್ಚಿನ ವಿದ್ಯಾರ್ಥಿಗಳು ಇರುವ ಸಂದರ್ಭದಲ್ಲಿ ಭಾರತದಲ್ಲೂ ಸಹ ಹೆಚ್ಚು ವಸ್ತುನಿಷ್ಠ ಮೌಲ್ಯಮಾಪನ ವಿಧಾನ ಎಂದು ಗಣನೆಗೆ ಬಂದಿದೆ. ನಮ್ಮ ಕರ್ನಾಟಕದಲ್ಲೇ ಸಿ.ಇ.ಟಿ. ಇರಬಹುದು, ರಾಷ್ಟ್ರಮಟ್ಟದಲ್ಲಿ ಐ.ಐ.ಟಿ.ಗಳಿಗಾಗಿ ಪ್ರವೇಶ ಪರೀಕ್ಷೆಗಳಿರಬಹುದು, ಐ.ಎ.ಎಸ್. ಹಾಗೂ ಐ.ಪಿ.ಎಸ್. ಪರೀಕ್ಷೆಗಳೇ ಇರಬಹುದು, ಇಲ್ಲೆಲ್ಲಾ ಈ ಮಾದರಿ ಜಾರಿಯಲ್ಲಿದೆ. ನಮಗೆ ಇದಿರಾಗುವ ಪ್ರಶ್ನೆ, ಈ ಮಾದರಿ ವಿಜ್ಞಾನ ಮತ್ತು ತಂತ್ರಜ್ಞಾನಗಳಿಗೆ ಅಥವಾ ಹೆಚ್ಚು ವಸ್ತುನಿಷ್ಠವಾಗಿರುವ ಜ್ಞಾನಶಿಸ್ತುಗಳಿಗೆ ಮಾತ್ರ ಅನ್ವಯಿಸುತ್ತದೆಯೆ ಎಂಬುದು. ಬಹು ಆಯ್ಕೆ ಪ್ರಶ್ನೆಗಳ ಮಾದರಿಯ ಅತಿ ಮುಖ್ಯವಾದ ಪರಿಣಾಮ ಜ್ಞಾನಶಿಸ್ತುಗಳನ್ನು ಕುರಿತದ್ದೇ ಆಗಿದೆ. ಎಲ್ಲಾ ಜ್ಞಾನಶಿಸ್ತುಗಳಿಗೂ ಸಾರ್ವತ್ರೀಕರಿಸಬಹುದಾದಂತಹ ಮತ್ತು ವಸ್ತುನಿಷ್ಠ ಎಂದು ಕಲ್ಪಿಸಿಕೊಳ್ಳಬಹುದಾದಂತಹ ಮಾದರಿಯೇ ಇದು ಎಂಬುದು ಕೆಲವರ ಭಾವನೆ. ದುರಂತವೇನೆಂದರೆ ಸಾಮಾಜಿಕ ವಿಜ್ಞಾನಗಳಲ್ಲಿ ಹೆಚ್ಚು ನಿಷ್ಕೃಷ್ಟ ಅಂದರೆ ಹೆಚ್ಚು ಸಾರ್ವತ್ರೀಕರಿಸಬಹುದಾದಂತಹ ಮತ್ತು ಹೆಚ್ಚು ವಸ್ತುನಿಷ್ಠ ಎಂದು ಕರೆಸಿಕೊಳ್ಳುವ ಅರ್ಥಶಾಸ್ತ್ರಕ್ಕೂ, ಹೆಚ್ಚು ವ್ಯಕ್ತಿನಿಷ್ಠವಾದ ಸಮಾಜಶಾಸ್ತ್ರಕ್ಕೂ ಇರುವ ವ್ಯತ್ಯಾಸಗಳು ಗಮನಕ್ಕೆ ಬಂದಂತೆ ಕಾಣುವುದಿಲ್ಲ. ಎಲ್ಲರಿಗೂ ಗೊತ್ತಿರುವ ಹಾಗೆ, ಇಂತಹ ಪ್ರಶ್ನೆಗಳನ್ನು ಹಿಂದೆ, ವಸ್ತುನಿಷ್ಠ ಪ್ರಶ್ನೆಗಳು ಎನ್ನುವ ಶೀರ್ಷಿಕೆಯಡಿಯಲ್ಲಿ ನೀಡಲಾಗುತ್ತಿತ್ತು. ವಿಪರ್ಯಾಸವೇನೆಂದರೆ, ವಸ್ತುನಿಷ್ಠತೆಯನ್ನು ಮೌಲ್ಯವನ್ನಾಗಿಸಿಕೊಂಡು ತನ್ನ ಉಗಮದಿಂದಲೂ ವ್ಯಕ್ತಿನಿಷ್ಠತೆಯನ್ನು ಅರ್ಥೈಸಲು ಪ್ರಯತ್ನಿಸುತ್ತಲೇ ಬಂದಿರುವ ಸಮಾಜಶಾಸ್ತ್ರ ಮತ್ತು ಇತರ ಸಾಮಾಜಿಕ ಮಾನವಶಾಸ್ತ್ರಗಳು ವಸ್ತುನಿಷ್ಠ ಪ್ರಶ್ನೆಗಳನ್ನು ವಿದ್ಯಾರ್ಥಿಗಳ ಮುಂದಿಡಲು ವಿಫಲವಾಗಬಹುದೇ ಎಂಬ ಪ್ರಶ್ನೆ ಈಗಿನ ಅಧಿಕಾರಿಗಳಿಗೆ ಬಂದಂತೆ ಕಾಣುವುದಿಲ್ಲ.

ಜ್ಞಾನಶಿಸ್ತುಗಳನ್ನು ಹೆಚ್ಚು ಪ್ರಸ್ತುತ ಮಾಡುತ್ತಿದ್ದ ಮತ್ತು ವಿದ್ಯಾರ್ಥಿಗಳಿಗೆ ಸಾಂಪ್ರದಾಯಿಕವಾಗಿ ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಡುತ್ತಿದ್ದಂತಹ ವಿಶ್ವವಿದ್ಯಾಲಯಗಳು ಮತ್ತು ಅಧ್ಯಯನ ಸಂಸ್ಥೆಗಳಲ್ಲಿ ಮಾತ್ರವಲ್ಲದೆ, ಬದಲಾಗುತ್ತಿರುವ ಸಮಾಜದಲ್ಲಿ ಉದ್ಯೋಗಾವಕಾಶಗಳನ್ನು ಪಡೆಯುವ ದಿಕ್ಕಿನಲ್ಲಿ ವಿದ್ಯಾರ್ಥಿಗಳಲ್ಲಿ ಹೆಚ್ಚು ಕೌಶಲ್ಯ ಬೆಳೆಸಬೇಕು ಎಂದು ಚಿಂತಿಸುತ್ತಿರುವಾಗ, ನಾಲ್ಕು ಆಯ್ಕೆಗಳನ್ನುಳ್ಳ ಒಂದು ಸಾಲಿನ ಪ್ರಶ್ನೆ, ಈ ಸಮಾಜಕ್ಕೆ ಬಳಸಬಹುದಾದ ಯಾವ ಸಾಮರ್ಥ್ಯವನ್ನು ಪಡೆಯುವುದರಲ್ಲಿ ವಿದ್ಯಾರ್ಥಿಗಳಿಗೆ ಸಹಾಯಕವಾಗಬಹುದು ? ಅಕ್ಷರದೋಷವಿಲ್ಲದೆ ನಾಲ್ಕು ಸಾಲು ಬರೆಯಲು ಕಲಿಯುವುದು ಈ ಸಮಾಜದಲ್ಲಿ ಪ್ರಸ್ತುತವಲ್ಲವೆ ? ಮೌಲ್ಯಮಾಪನ ಮಾಡುವುದನ್ನು ಸುಲಭೀಕರಿಸುವುದೇನೋ ಸರಿ,ಆದರೆ 'ನಿಶ್ಶಬ್ದ' ಪರೀಕ್ಷಾ ಕೊಠಡಿಗಳಲ್ಲಿ, ಸಂಜ್ಞೆಗಳ ಮೂಲಕ ಮಾತನಾಡುವ ವಿದ್ಯಾರ್ಥಿಗಳನ್ನು ಕಾಯುವ ಪರೀಕ್ಷಾ ಮೇಲ್ವಿಚಾರಕರ ಪಾಡೇನಿರಬಹುದು ? ಪುಸ್ತಕಗಳನ್ನು ಓದುವ ಪರಿಪಾಠ ಸತ್ತೇಹೋಗಬಹುದೆ ? ಪಠ್ಯಗಳಿಗಿಂತ ಗೈಡುಗಳ ಬೇಡಿಕೆ ಹೆಚ್ಚಾಗಬಹುದೆ ?

ಈಗ ಉದ್ಯಮವಾಗಿರುವ ಹೊಸ ಮಾದರಿಯ ಪ್ರಶ್ನೆಗಳ ಹಿನ್ನೆಲೆಯನ್ನು ತಿಳಿಯಬೇಕು. ವಿಶ್ವವಿದ್ಯಾಲಯದ ಒಂದು ಕಾಳಜಿಯೇನೆಂದರೆ ವಿದ್ಯಾರ್ಥಿಗಳಿಗೆ ತಮ್ಮ ಉನ್ನತ ಶಿಕ್ಷಣವನ್ನು ಮುಂದುವರಿಸಲು ಹಾಗೂ ಬೇರೆ ವಿಶ್ವವಿದ್ಯಾಲಯಗಳಲ್ಲಿ ಅಭ್ಯರ್ಥಿಗಳಾಗಲು ಸಮಯಕ್ಕೆ ಸರಿಯಾಗಿ ಪರೀಕ್ಷಾ ಫಲಿತಾಂಶವನ್ನು ಹೊರತರಲೇಬೇಕಾಗಿದೆ ಎಂಬುದು. ಆದರೆ ಅದಕ್ಕೆ ಬಹು ಆಯ್ಕೆ ಪ್ರಶ್ನೆಗಳು ಒಂದು ಸಮರ್ಪಕ ಉತ್ತರವಾಗಬಹುದೆ ?

ಸಮಾಜಶಾಸ್ತ್ರ ಉಪನ್ಯಾಸಕಿಯಾಗಿರುವುದರಿಂದ ಈ ಜ್ಞಾನಶಿಸ್ತನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಅದರ ಮೇಲೆ ಆಗಬಹುದಾದ ಪರಿಣಾಮಗಳನ್ನು ಗಮನಿಸುತ್ತೇನೆ : ಇದು ಜಾರಿಗೆ ಬಂದರೆ ಸಮಾಜಶಾಸ್ತ್ರ ಅಧ್ಯಾಪಕರಾಗಿ ನಾವು ಏನು ಪಾಠ ಮಾಡಬಹುದು ಎಂದು ಕಲ್ಪಿಸಿಕೊಂಡರೆ ಸ್ವಲ್ಪ ಹೆದರಿಕೆ ಹುಟ್ಟಿಸುವಂತಿದೆ. ಮಾನವಿಕಗಳಲ್ಲಿ ಸೇರ್ಪಡೆಯಾಗಿರುವ ಭಾಷಾ ವಿಷಯಗಳಿಗೆ ಇದು ಕಲ್ಪಿಸಲು ಸಾಧ್ಯವೇ ಆಗದಿರುವ ಸಂಗತಿಯಾದರೆ, ಬೇರೆ ಜ್ಞಾನಶಿಸ್ತುಗಳಾದ ಸಾಮಾಜಿಕ ವಿಜ್ಞಾನಗಳಿಗೂ ಇದು ಕಷ್ಟಸಾಧ್ಯ.

ಸಮಾಜಶಾಸ್ತ್ರ ಸುತ್ತಮುತ್ತಲಿನ ಸಮಾಜವನ್ನು ಅಧ್ಯಯನ ಮಾಡುತ್ತದೆ ಎಂದು ಅಂದುಕೊಂಡರೆ, ಅದರಲ್ಲಿ ಅತಿಮುಖ್ಯವಾಗಿ ಕಾಣಿಸುವುದು ಆ ಸಮಾಜದ ವಾಸ್ತವ ಸಂಗತಿಗಳನ್ನು ಹೇಗೆ ಗ್ರಹಿಸುತ್ತೇವೆ ಮತ್ತು ವಿವರಿಸುತ್ತೇವೆ ಎನ್ನುವುದು. ಸಮಾಜಶಾಸ್ತ್ರ ಮತ್ತು ಸಾಮಾಜಿಕ ಮಾನವಶಾಸ್ತ್ರ ಮಾರ್ಕ್ ಆಗೆ ಹೇಳುವಂತೆ 'ಇಲ್ಲಿ ಮತ್ತು ಇಂದು' ವಿಷಯಗಳಿಗೆ ಸಂಬಂಧಿಸಿದೆ. ಇದರ ಅರ್ಥ ಕಣ್ಣಿಗೆ ಕಾಣಿಸುವ ಅಥವಾ ಕಣ್ಣಿಗೆ ಹತ್ತಿರವಾಗುತ್ತಿರುವುದನ್ನು ಮಾತ್ರ ಅಧ್ಯಯನ ಮಾಡುತ್ತದೆ ಎಂದಲ್ಲ, ಬದಲಿಗೆ ಈ ವಿಜ್ಞಾನಗಳಲ್ಲಿ ಜ್ಞಾನದ ಉತ್ಪಾದನೆಯ ಪ್ರಕ್ರಿಯೆ ಆತ್ಮೀಯತೆ, ಸೂಕ್ಷ್ಮತೆ ಮತ್ತು ಸಲಿಗೆಯಿಂದ ಕೂಡಿದೆ ಎಂದಷ್ಟೆ. 'ಇಲ್ಲಿ' ಎಂದರೆ, ತಾನು ಅಧ್ಯಯನ ಮಾಡುತ್ತಿರುವ ಸಮಾಜ – ಎಲ್ಲಿ ತಾನು ನೆಲೆನಿಂತು ಬದುಕುತ್ತಿದ್ದಾನೋ, ಅದು. ಮತ್ತು 'ಇಂದು' ಎಂದರೆ, ಹಿಂದೆ ನಡೆದಿರುವ ಘಟನೆಗಳಿಗಿಂತ ಪ್ರಸ್ತುತ ಅಥವಾ ಇಂದು ಮುಖ್ಯ ಎಂದು ಅರ್ಥ. ವಿವರಣಾತ್ಮಕವಾಗಿ ಸಮಾಜದ 'ಒಳಹೊರಗುಗಳನ್ನು' ಪ್ರತಿಬಿಂಬಿಸುವ ಶಾಸ್ತ್ರವಾಗಿರುವುದರಿಂದ ಇದರಲ್ಲಿ ಹಲವು ಸೈದ್ಧಾಂತಿಕ ನಿಲುವುಗಳು, ದೃಷ್ಟಿಕೋನಗಳು, ಸೃಷ್ಟಿಯಾಗಿರುವುದು ಸಹಜ. ಹಾಗಾಗಿ ವ್ಯವಸ್ಥೆಯ ಬೇರೆ ಬೇರೆ ಸ್ಥಾನಗಳಲ್ಲಿ ಹಂಚಿಹೋಗಿರುವ ಜನರು ಒಂದೇ ವಿಷಯದ ಬಗೆಗೆ ಭಿನ್ನ ದೃಷ್ಟಿಕೋನಗಳನ್ನು ಹೊಂದಿರುವುದು ಸಹ ಸಹಜವೇ ಸರಿ. ಸಂಕೀರ್ಣತೆಯನ್ನು ಒಳಗೊಂಡಿರುವ ಈ ಪ್ರಕ್ರಿಯೆಯನ್ನು ಸರಳೀಕರಿಸುವುದು ಸರಿಯೆ ? ಅಥವಾ

ಅದನ್ನು ಒಂದೇ ಸಾಲಿಗೆ ಇಳಿಸಿ – 'ಸರಿಯೋ - ತಪ್ಪೋ', 'ಅದೋ - ಇದೋ' ಎಂದುಬಿಡುವುದು ಸಮರ್ಪಕವೆ ? 'ಎಂದರೇನು ?', 'ಎಲ್ಲಿ?', 'ಯಾವಾಗ ?' ಎಂಬ ಧಾಟಿಯಲ್ಲಿರುವ ಪ್ರಶ್ನೆಗಳು ಸಮಾಜ ಶಾಸ್ತ್ರೀಯವಾಗಿ ಅಗತ್ಯವಾಗಿರುವ ವಿವರಣೆಯನ್ನು ಹಿಡಿದಿಡುವುದು ಸಾಧ್ಯವೆ ? ಹಾಗೂ ಇದರಿಂದ ಜ್ಞಾಪಕಶಕ್ತಿಯನ್ನೇ ಬಂಡವಾಳವಾಗಿಸಿರುವ ಇಂದಿನ ಮಾದರಿಗಳಾದ ಪರೀಕ್ಷಾ ಮಾದರಿಗಳನ್ನು ದಾಟಲು ಸಾಧ್ಯವೆ ?

ಬಹು ಆಯ್ಕೆ ಮಾದರಿಯು ಸೃಷ್ಟಿಸಬಹುದಾದ ಪ್ರಶ್ನೆಗಳನ್ನು ಕಲ್ಪಿಸಿಕೊಂಡರೆ ನಿಜವಾದ ಸಮಸ್ಯೆ ಅರಿವಿಗೆ ಬರುತ್ತದೆ. ಅಂಥ ಕೆಲವು ಪ್ರಶ್ನೆಗಳು ಹೀಗಿರಬಹುದೆ ? 'Caste in Modern India' ಪುಸ್ತಕದ ಕರ್ತೃ ಯಾರು ? ಈ ಕೃತಿ ಹೊರಬಂದ ಕಾಲ ಯಾವುದು ? ಸಂಸ್ಕೃತಾನುಕರಣ ಪರಿಕಲ್ಪನೆಯನ್ನು ಪರಿಚಯಿಸಿದವರು ಯಾರು ? ಸಂಸ್ಕೃತಾನುಕರಣ ಪ್ರಕ್ರಿಯೆಯು ಮೇಲುಜಾತಿಯ ಅನುಕರಣೆಯಿಂದ ಆಗುವುದೆ ಅಥವಾ ಕೆಳಜಾತಿಯ ಅನುಕರಣೆಯನ್ನು ಸೂಚಿಸುತ್ತದೆಯೆ ? ಇಂತಹ ಮಾಹಿತಿ ಪೂರಕ ಅಧ್ಯಯನ ಮತ್ತು ಪರೀಕ್ಷಾ ಕ್ರಮಗಳಿಂದ ವಾಸ್ತವಿಕತೆಯ ಗ್ರಹಿಕೆ ಮತ್ತು ವಿವರಣೆ ಸಾಧ್ಯವೆ, ಸಾಧುವೆ ? ಇವೆಲ್ಲಾ ಸಾಧ್ಯವೆಂದೇ ಭಾವಿಸಿದರೂ, ಆ ಸಂದರ್ಭದಲ್ಲಿ ಹುಟ್ಟಬಹುದಾದ ಮತ್ತೊಂದು ಪ್ರಶ್ನೆಯೆಂದರೆ, ಸಂಕೀರ್ಣ ಮತ್ತು ಸೂಕ್ಷ್ಮವಾಗಿರುವ ವಿಷಯಗಳನ್ನು ಕುರಿತಂತೆ ಈ ಮಾದರಿಯಲ್ಲಿ ಯಾವ ರೀತಿಯ ಪ್ರಶ್ನೆಗಳನ್ನು ರೂಪಿಸಲು ಸಾಧ್ಯ ? ಉದಾಹರಣೆಗೆ, ಜಾತಿ ಮತ್ತು ಬುಡಕಟ್ಟಿನ ಬಗ್ಗೆ ಈಗ ಗುರುತಿಸುತ್ತಿರುವ ವ್ಯತ್ಯಾಸಗಳನ್ನು ಕುರಿತಂತೆ ಬಹು ಆಯ್ಕಾ ಮಾದರಿಯಲ್ಲಿ ಹಿಡಿದಿಡುವುದು ಸಾಧ್ಯವೆ ? ಜೊತೆಗೆ, ಸಂಸ್ಕೃತಿ, ಅಂತಃಕ್ರಿಯೆ, ಸಾಮುದಾಯಿಕ ಭಾವನೆ, ಸ್ವಕುಲಾಭಿಮಾನ, ಮುಂತಾದ ಅಮೂರ್ತ ವಿಷಯಗಳನ್ನು ಈ ಮಾದರಿಯಲ್ಲಿ ನಿರ್ವಹಿಸುವುದು ಹೇಗೆ ?

**ಸಮಾಜಶಾಸ್ತ್ರ ಮತ್ತು ಭಾಷೆ**

ಈ ವಿಧಾನದ ಹಿಂದೆ ಇರುವ ಮತ್ತೊಂದು ಗಂಭೀರವಾದ ಅನಿಸಿಕೆ ಸಾಮಾಜಿಕ ವಿಜ್ಞಾನಗಳಿಗೆ ಭಾಷೆಯ ಅಗತ್ಯವಿಲ್ಲ ಎನ್ನುವ ಒಂದು ಗ್ರಹಿಕೆ. ಸಾಮಾಜಿಕ ಮಾನವಶಾಸ್ತ್ರಜ್ಞರಿಗೆ ಯಾವುದೇ ಸಮಾಜವನ್ನು ಅಧ್ಯಯನ ಮಾಡುವಾಗ ಮುಖ್ಯವಾದ ಸಾಮರ್ಥ್ಯವೆಂದೇ ಪರಿಗಣಿಸಲಾಗಿರುವುದು ಅಧ್ಯಯನ ಮಾಡುತ್ತಿರುವ ಸಮಾಜದ ಭಾಷೆಯನ್ನು ಕಲಿಯುವುದೇ ಆಗಿದೆ. ಮೆಲಿನೋವ್‌ಸ್ಕಿ ಎಂಬ ಮಾನವಶಾಸ್ತ್ರಜ್ಞನ ಕಾಲದಿಂದಲೂ (೨೦ನೇ ಶತಮಾನದ ಪೂರ್ವಭಾಗ) ಅಕ್ಷರಪೂರ್ವ ಸಮಾಜಗಳಲ್ಲಿರುವ ಭಾಷೆ ಬಗ್ಗೆ ಅಧ್ಯಯನಕಾರರು ಆಸಕ್ತರಾಗಿರುವಂತೆ ತೋರುತ್ತದೆ. ಈ ಆಸಕ್ತಿಯ ಅಂಗವಾಗಿ ಭಾಷಾಸಂಬೋಧವಾದ ಮಾಹಿತಿಯ ಸಂಗ್ರಹಣೆ ಮಾಡಿ ಅದನ್ನು ಮಾನವಶಾಸ್ತ್ರೀಯ ಅಧ್ಯಯನಗಳಿಗೆ ಒಳಪಡಿಸುತ್ತಿದ್ದರು ಎಂದು ಹೇಳಬಹುದು. ಹೀಗಾಗಿ, ಗಾದೆಗಳು, ಬಂಧುತ್ವಕ್ಕೆ ಸಂಬಂಧಿಸಿದ ಪರಿಭಾಷೆ, ಮಾಂತ್ರಿಕ ಉಚ್ಚಾರಣೆ ಇತ್ಯಾದಿಗಳಿಗೆ ಹೆಚ್ಚಿನ ಮಹತ್ವ ಸಿಕ್ಕಿದಂತಾಯಿತು. ೧೯೫೦ರ ವೇಳೆಗೆ ಸಮಾಜಶಾಸ್ತ್ರ ಮತ್ತು ಮಾನವಶಾಸ್ತ್ರಗಳಲ್ಲಿ ಈ ಗ್ರಹಿಕೆ ಎಷ್ಟರಮಟ್ಟಿಗೆ ಬೇರೂರಿತ್ತೆಂದರೆ, ಸಾಮಾಜಿಕ ಮಾನವಶಾಸ್ತ್ರ ಎಂದರೆ, ಬೇರೆಯ ಸಮಾಜಗಳಿಗೆ ಸೇರಿರುವ ಜನರ ಬಗ್ಗೆ ಅಧ್ಯಯನ ಮಾಡುತ್ತಿರುವ ಸಮಾಜಶಾಸ್ತ್ರಜ್ಞರು ಹೇಗೆ ಚಿಂತಿಸುತ್ತಾರೆ ಎಂದು ಗ್ರಹಿಸಲಾಗಿತ್ತು. ಸಮಾಜಗಳ ಸಂಸ್ಕೃತಿಗಳನ್ನು ಸ್ಫುಟವಾಗಿ ಅಚ್ಚಿಳಿಸುವುದು ಈ ವಿಧಾನದಿಂದ ಸಾಧ್ಯವೆಂದು ಭಾವಿಸಲಾಗಿತ್ತು. ಇಲ್ಲಿ ಅಚ್ಚಿಳಿಸುವುದು ಎಂದರೆ, ಪದದ ಸಾಮಾನ್ಯ ಅರ್ಥದಲ್ಲದೆ ಇಡೀ ಸಂಸ್ಕೃತಿಯ ಮತ್ತು ಚಿಂತನೆಗಳ ಪಡಿಯಚ್ಚು ಎಂದೇ ಅರ್ಥೈಸಲಾಗಿತ್ತು. ಸಮಾಜಶಾಸ್ತ್ರಕ್ಕೂ ಭಾಷೆಗೂ ಇರುವ ಈ ಸಂಬಂಧ ಇಂದೂ ಪ್ರಸ್ತುತ ಎಂದೇ ಗ್ರಹಿಸಲಾಗುತ್ತದೆ. ಸಮಾಜ ವಿಜ್ಞಾನದ ಪರಿಕಲ್ಪನೆಗಳು ಮತ್ತು ಸಮಾಜವನ್ನು ಕುರಿತ ಪ್ರಶ್ನೆಗಳು; ವರ್ಗೀಕರಣ ಮತ್ತು ಸಾಮಾಜಿಕ ರಚನೆ; ನಿಯಮಾವಳಿಗಳು ಮತ್ತು ಸಾಮಾಜಿಕ ವರ್ತನೆ; ಎಲ್ಲವೂ ಸಾಮಾಜಿಕ ಮಾನವಶಾಸ್ತ್ರದ ಕಾಳಜಿಯ ಕ್ಷೇತ್ರಗಳಾಗಿವೆ. ಇತ್ತೀಚಿನ ದಿನಗಳಲ್ಲಿ ಭಾಷಾ ಅಧ್ಯಯನಗಳಲ್ಲಿ ಆಗಿರುವ ಬದಲಾವಣೆಗಳ ಪ್ರಭಾವದಿಂದ ಈ ವಿಷಯಗಳಿಗೆ ಹೆಚ್ಚು ಪುಷ್ಟಿ ಸಿಕ್ಕಿದಂತಾಗಿದೆ. ಭಾಷಾ ಅಧ್ಯಯನಗಳಿಂದ ಹೊರಹೊಮ್ಮುತ್ತಿರುವ ಈ 'ಹೊಸತನ' ನಿಜವಾಗಿಯೂ ಹೊಸದೇ ಎನ್ನುವುದರ ಬಗ್ಗೆ ಭಿನ್ನಾಭಿಪ್ರಾಯಗಳಿದ್ದರೂ, ೧೯೬೦ರ ನಂತರದ ದಶಕಗಳಲ್ಲಿ, ಭಾಷೆಯ ಪರಿಕಲ್ಪನೆಯೇ ವಿಸ್ತಾರವಾಗಿ, ಅಧ್ಯಯನ 'ಕ್ಷೇತ್ರ'ವು ಒಂದು 'ಪಠ್ಯ' ಎಂದು ಪರಿಗಣಿಸಲಾಗಿತ್ತು. ಹೀಗಾಗಿ ವ್ರತ ಆಚರಣೆಗಳಲ್ಲದೆ, ಸಂಕೇತಗಳು, ಸಾಮಾಜಿಕ ರಚನೆಗಳು, ತಂತ್ರಜ್ಞಾನ ಇವುಗಳ ಜೊತೆಗೆ, ವಾದವಿವಾದಗಳು, ಸಂಗೀತ ಸುಸ್ವರಗಳು, ಮಾಂತ್ರಿಕ ಸೂತ್ರಗಳು, ನಕ್ಷೆಗಳು, ಚಿತ್ರಗಳು ಇತ್ಯಾದಿ ಎಲ್ಲವನ್ನೂ 'ಪಠ್ಯ'ಗಳೆಂದೇ ಕರೆದು 'ಓದುವ' ಕ್ರಮ ಪರಿಚಯವಾಯಿತು. ಈ ಹೊತ್ತು ಸಮಾಜಶಾಸ್ತ್ರಜ್ಞರ ಮೇಲೆ ಒಂದು ಆಪಾದನೆ ಏನೆಂದರೆ (ಅದರಲ್ಲೂ ಬರೀ ಇಂಗ್ಲಿಷ್ ಮಾತನಾಡುವ ಸಮಾಜಶಾಸ್ತ್ರಜ್ಞರನ್ನು ಕುರಿತಂತೆ) ''ಇವರು ತಾತ್ವಿಕವಾಗಿ ಮಾತನಾಡಲು ಸಾಧ್ಯ ಅಷ್ಟೆ, ಏಕೆಂದರೆ ಯಾವುದೇ ಪ್ರಾಂತೀಯ ಭಾಷೆ ಇವರಿಗೆ ಗೊತ್ತಿಲ್ಲವಾದುದರಿಂದ ನಮ್ಮ ಸಮಾಜದಲ್ಲಿರುವ ವೈರುಧ್ಯಗಳನ್ನು ಗ್ರಹಿಸಲು ಇವರಿಗೆ ಹೇಗೆ ಸಾಧ್ಯ ? ಸಮಾಜ ಮತ್ತು ಸಂಸ್ಕೃತಿಯೊಂದಕ್ಕೆ ವಿಶೇಷವಾಗಿರುವ ಸೂಕ್ಷ್ಮಸಂಗತಿಗಳನ್ನು ಗಮನಿಸುವುದು ಹೇಗೆ ಸಾಧ್ಯ ?'' ಹಾಗಾಗಿ, ಭಾಷೆಗೂ, ಸಮಾಜಗಳನ್ನು ಅಧ್ಯಯನ ಮಾಡುವ ಸಮಾಜಶಾಸ್ತ್ರ ಮತ್ತು ಸಾಮಾಜಿಕ ಮಾನವಶಾಸ್ತ್ರಗಳಿಗೂ ನಿಕಟ ಸಂಬಂಧ ಇದೆ ಎಂಬ ಗ್ರಹಿಕೆ ಸಹಜವೆನ್ನುವಷ್ಟು ಸಂಗತ ವಿಷಯವಾಗಿಹೋಗಿದೆ. ಈ ಸಂದರ್ಭದಲ್ಲಿ ಭಾಷೆಗೂ ಮತ್ತು ಸಾಮಾಜಿಕ ವಿಜ್ಞಾನಗಳಿಗೂ ಯಾವುದೇ ಸಂಬಂಧವಿಲ್ಲವೆನ್ನುವ ರೀತಿಯಲ್ಲಿ ಯೋಜನೆಗಳನ್ನು ರೂಪಿಸುವುದು ಜಾಣ ಕುರುಡೇನೋ ಎಂದು ಸಂಶಯ ಬರುತ್ತದೆ.

ಹೀಗಿರುವಾಗ, ಈಗ ಸೃಷ್ಟಿಯಾಗಲಿರುವ 'ಸಮಸ್ಯೆಯಿಂದ' ಪಾರಾಗುವುದು ಹೇಗೆ ? ಬಹು ಆಯ್ಕಾ ಮಾದರಿಗೆ ಒಗ್ಗದ ವಿಷಯಗಳನ್ನು ಕೈಬಿಡಬಹುದೆ ಅಥವಾ ಈ ಮಾದರಿಗೆ ಅನುಗುಣವಾಗಿ ಪಠ್ಯಕ್ರಮವನ್ನು ತಿದ್ದುವುದೆ ? ಹಾಗಾದರೆ ಪಠ್ಯಕ್ರಮಗಳು ರೂಪ ತಳೆಯುವ ಪರಿ ಏನಿರಬಹುದು ? ಹಂತಹಂತವಾಗಿ ಸಮಾಜಶಾಸ್ತ್ರೀಯ ದೃಷ್ಟಿಕೋನಗಳನ್ನು ಬೆಳೆಸುವ ದೃಷ್ಟಿಯಿಂದ ಪಠ್ಯವನ್ನು ರೂಪಿಸುವುದೋ ಅಥವಾ ಪರೀಕ್ಷಾಮಾದರಿಗಳಿಗನುಗುಣವಾಗಿ ಪಠ್ಯಕ್ರಮಗಳನ್ನು ಮಾರ್ಪಡಿಸುವುದೋ ? ಸಮಾಜಶಾಸ್ತ್ರಕ್ಕೆ ಮೂಲದ್ರವ್ಯವೆನಿಸಿರುವ ಸಿದ್ಧಾಂತಗಳು, ಪರಿಕಲ್ಪನೆಗಳು, ವೈಧಾನಿಕತೆಗಳು ಸ್ಥಾನ ಕಳೆದುಕೊಳ್ಳಬೇಕಾಗುತ್ತದೆ.

ಮೇಲೆ ಚರ್ಚಿಸಿರುವ ವಿಷಯಗಳು ಮುಖ್ಯ ಎನ್ನಿಸಿದರೆ, ಬಹು ಆಯ್ಕೆ ಪ್ರಶ್ನೆಗಳ ಮಾದರಿಯನ್ನು ನಾವು ಸಾರಾಸಗಟಾಗಿ ವಿರೋಧಿಸಲೇಬೇಕಾಗುತ್ತದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಬಹು ಆಯ್ಕೆ ಪ್ರಶ್ನೆಗಳ ಮಾದರಿಯು ಮೂಲಭೂತವಾಗಿ ಅದರ ಹಿಂದೆ ಅಡಗಿರುವ ತತ್ವದೆಡೆಗೆ ಬೆಟ್ಟು ಮಾಡುತ್ತದೆ. ಇಡೀ ಉದ್ದೇಶವು ಅತಿ ವೇಗವಾಗಿ ಫಲಿತಾಂಶಗಳನ್ನು ಪ್ರಕಟಿಸುವುದೇ ಆಗಿದೆಯೆಂದೋ ಅಥವಾ ಮೌಲ್ಯಮಾಪಕರು ಸಿಗುತ್ತಿಲ್ಲ ಎನ್ನುವ ಕಾರಣದಿಂದಲೋ ಅಥವಾ ಸೆಮೆಸ್ಟರ್ ಸ್ಕೀಮ್‌ನಲ್ಲಿ ವರ್ಷಕ್ಕೆ ಎರಡು ಪರೀಕ್ಷೆಗಳು ಹಾಗೂ ಎರಡು ಮಾಪನಗಳು ಮಾಡಲೇಬೇಕು ಎನ್ನವು ಕಾರಣದಿಂದಲೋ ಪ್ರೇರಣೆ ಪಡೆದದ್ದೇ ಆದರೆ, ಶಿಕ್ಷಣ ಕ್ಷೇತ್ರದಲ್ಲಿ ಆಗಲೇಬೇಕಾದ ಬದಲಾವಣೆಗಳನ್ನು ತರಲು ಸಾಧ್ಯವೆ ? ಬದಲಾವಣೆಗಳು ಈಗ ಸೂಚಿಸಲಾಗುತ್ತಿರುವ ಪಾಠ ಮಾಡುವ ವಿಧಾನಗಳಿಗೆ ಸಂಬಂಧಪಟ್ಟಿರಬಹುದು, ಪಠ್ಯವನ್ನು 'ಓದುವ' ಕ್ರಮಕ್ಕೆ ಸಂಬಂಧಿಸಿರಬಹುದು, ಅಧ್ಯಾಪಕರನ್ನು ತರಗತಿಗಳಿಗೆ ಹೆಚ್ಚು ಸಿದ್ಧರನ್ನಾಗಿಸುವ ನಿಟ್ಟಿನಲ್ಲಿರಬಹುದು ಅಥವಾ ಜ್ಞಾನ ಶಿಸ್ತುಗಳನ್ನೇ ಹೆಚ್ಚು ಪ್ರಸ್ತುತ ಮಾಡುವ ನಿಟ್ಟಿನಲ್ಲಿರಬಹುದು. ಒಟ್ಟಾರೆಯಾಗಿ ಶಿಕ್ಷಣದ ಆದ್ಯ ನಿರೀಕ್ಷೆಗಳನ್ನು ಅವು ಹುಸಿಯನ್ನಾಗಿಸಬಾರದು. ಕ್ಲಿಷ್ಟವಾದ ಪ್ರಶ್ನೆಗಳನ್ನೆತ್ತಿ ವ್ಯವಸ್ಥೆಯ ಬದಲಾವಣೆಗೆ ಸಹ ಪ್ರೇರಣೆ ನೀಡಬೇಕಾದ ಕರ್ತವ್ಯವು ಸಮಾಜಶಾಸ್ತ್ರದ ಅಧ್ಯಯನದ ಪರಿಧಿಗೆ ಸೇರಿದೆ. ಇದನ್ನೆಲ್ಲಾ ಕೈಬಿಟ್ಟು ಬಹು ಆಯ್ಕೆ ಪ್ರಶ್ನೆಗಳ ಮಾದರಿಯು ಈಗಾಗಲೆ ಜಡವಾಗಿರುವ ಅಧ್ಯಯನ ಶಿಸ್ತನ್ನು ಇನ್ನೂ ಹೆಚ್ಚು ಚೈತನ್ಯರಹಿತವನ್ನಾಗಿಸುವ ಅಪಾಯವಿದೆ.

ಈ ಮಾದರಿಯು ವಿದ್ಯಾರ್ಥಿಗಳಲ್ಲಿ ಖಚಿತವಾದ ಮಾಹಿತಿಯ ಪ್ರಜ್ಞೆಯನ್ನು ಅಂಕುರಿಸುವಂತೆ ಮಾಡುವುದಿದ್ದರೆ ಅದನ್ನು ಸ್ವಾಗತಿಸಬಹುದು. ಅಧ್ಯಯನದ ಶಿಸ್ತಿನಲ್ಲಿ ಗುರುತಿಸುವಿಕೆ, ವಿಶ್ಲೇಷಣೆ, ಸಂಯೋಜನಾ ಕೌಶಲ್ಯ ಹಾಗೂ ಅನ್ವಯಿಸುವಿಕೆಯು ಅಂತರ್ಗತವಾಗಿರಬೇಕು. ಇದಕ್ಕಾಗಿ ಪಠ್ಯ ಮತ್ತು ಪಠ್ಯೇತರ ಗ್ರಂಥಗಳನ್ನು ಓದುವುದು ವಿದ್ಯಾರ್ಥಿಗಳಿಗೆ ಮತ್ತು ಅಧ್ಯಾಪಕರಿಗೆ ಅನಿವಾರ್ಯವಾಗುವಂತಿದ್ದರೆ ಅದನ್ನು ಸ್ವಾಗತಿಸಬಹುದು. ಇದಕ್ಕೆ ಬದಲಾಗಿ, ವಿದ್ಯಾರ್ಥಿಯು ಸ್ವಯಂ ಚಿಂತನೆಗೆ ವಿಮುಖನಾಗುವಂತೆ ಮಾಡಬಹುದಾದ ವಿಧಾನವಾದರೆ ಅದನ್ನು ದೂರವಿಡಬೇಕು.

**ಡಾ|| ಸುಧಾ ಸೀತಾರಾಮನ್**
ಸಮಾಜಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಕಲಾ ಕಾಲೇಜು, ಬೆಂಗಳೂರು - ೧

ಮೀಸಲಾತಿಯ ಪ್ರಶ್ನೆ ಬಂದಾಗಲೆಲ್ಲ ಪರಿಸ್ಥಿತಿ ಉದ್ವಿಗ್ನವಾಗುವ ದುರಂತ ನಮ್ಮ ದೇಶದ್ದು. ಉಳ್ಳವರಲ್ಲಿ ಚಾರಿತ್ರಿಕ ಮತ್ತು ಸಾಮಾಜಿಕ ಪ್ರಜ್ಞೆಯ ಅಭಾವವು ಒಂದು ಕಾರಣವಾದರೆ ದುರಹಂಕಾರ ಇನ್ನೊಂದು ಕಾರಣ. ತಮ್ಮ ಅರ್ಹತೆ ಎಲ್ಲೆಯಿಲ್ಲದ್ದೆಂಬ ಭ್ರಮೆಯಲ್ಲಿ ಮುಳುಗಿರುವ ವಿದ್ಯಾರ್ಥಿಗಳನ್ನು ಪ್ರಚೋದಿಸಿ ಮೀಸಲಾತಿಯನ್ನು ಒತ್ತಾಯಿಸುವವರ ಮೇಲೆ ದೌರ್ಜನ್ಯವೆಸಗಲು ಛೂ–ಬಿಡುವ 'ದೊಡ್ಡ ಮನುಷ್ಯರು' ನಮ್ಮಲ್ಲಿದ್ದಾರೆ. ಸಾರ್ವಜನಿಕರ ಹಣದಿಂದ ಸ್ಥಾಪಿಸಲಾದ ಅಖಿಲ ಭಾರತ ವೈದ್ಯಕೀಯ ಸಂಸ್ಥೆಯ ನಿರ್ದೇಶಕ ವೇಣುಗೋಪಾಲ್ ಅಂತಹ ಅಸಂಸ್ಕೃತ ವ್ಯಕ್ತಿಗಳ ಪೈಕಿಯವರು. ತಮ್ಮ ಅಧಿಕಾರವನ್ನು ದುರುಪಯೋಗ ಮಾಡಿಕೊಳ್ಳುವುದಲ್ಲದೆ ವಿದ್ಯಾರ್ಥಿಗಳ ಮಧ್ಯೆ ವಿಷಬೀಜ ಬಿತ್ತುವುದು ಅವರ ಸಂಪ್ರದಾಯ. 'ಅರ್ಹ' ವಿದ್ಯಾರ್ಥಿಗಳ ನಡತೆ ಮತ್ತು ಅವರು ಕೆಳ ಅಂತಸ್ತಿನ ವಿದ್ಯಾರ್ಥಿಗಳಿಗೆ ನೀಡುವ ಕಿರುಕುಳ ಹಾಗೂ ಹಿಂಸೆಯ ಒಂದು ಲಘುಚಿತ್ರಣವನ್ನು ಅಜಯ ಕುಮಾರ ಸಿಂಗ್ ನೀಡಿದ್ದಾರೆ. ಅವರದು ಕೇವಲ ವ್ಯಕ್ತಿಗತ ಅನುಭವವಲ್ಲ. ಅಂತಹ ಅನುಭವ ಪಡೆಯುತ್ತಿರುವವರು ದೇಶದ ಎಲ್ಲೆಡೆ ಇದ್ದಾರೆ. ಯಾವ ಕಾನೂನು, ಯಾವ ನ್ಯಾಯಾಧೀಶ, ಯಾವ ಸರ್ಕಾರ ಇದ್ದರೇನು, ಹಿಂದುಳಿದವರನ್ನು ತುಳಿಯುತ್ತಿರುವುದೇ ನಮ್ಮ ಪರಂಪರೆ, ಅದೇ 'ಅರ್ಹತೆ'ಯ ಮಹಾನ್ ಕೊಡುಗೆ. ದೇಶದ ಐಕ್ಯತೆ ಬಗ್ಗೆ ಮಾತನಾಡುವವರು ಇಂತಹ ವಿಚಾರಗಳನ್ನು ಸೂಕ್ಷ್ಮವಾಗಿ ಗಮನಿಸಬೇಕು. ಅಜಯ್ ಅವರ ಈ ಅನುಭವವನ್ನು ಇದೇ ಜೂನ್ ೨ರ 'ತೆಹೆಲ್ಕಾ' ಪತ್ರಿಕೆಯಿಂದ ಸಂಗ್ರಹಿಸಲಾಗಿದೆ.

# ನಾನು ವೈದ್ಯನಾಗದಿದ್ದರೆ ಅಷ್ಟೇ ಹೋಯಿತು...

**ಅಜಯ ಕುಮಾರ ಸಿಂಗ್**

ಅಖಿಲ ಭಾರತ ವೈದ್ಯಕೀಯ ಸಂಸ್ಥೆಯ ಹೆಸರನ್ನು ಮೊಟ್ಟಮೊದಲು ಕೇಳಿದಾಗ ನಾನು ಎಂಟನೆಯ ತರಗತಿಯಲ್ಲಿದ್ದೆ. ನನ್ನ ತಾಯಿ ಒಬ್ಬ ವೈದ್ಯರ ಬಳಿ ನರ್ಸ್ ಆಗಿ ಕೆಲಸಮಾಡುತ್ತಿದ್ದಳು. ಆ ವೈದ್ಯರ ಸಂಬಂಧಿಯೊಬ್ಬ ದೆಹಲಿಯ ವೈದ್ಯಕೀಯ ಸಂಸ್ಥೆಯಲ್ಲಿದ್ದ. ಅವನೊಮ್ಮೆ ನಮ್ಮೂರು ಏಟಾಕ್ಕೆ ಬಂದಿದ್ದಾಗ ಆತನನ್ನು ಸಂಧಿಸಲು ನನ್ನ ತಾಯಿ ಹೇಳಿದಳು. "ನೀನು ಆ ಸಂಸ್ಥೆಯಲ್ಲಿ ಪ್ರವೇಶ ಪಡೆಯಬೇಕಾದರೆ ಬಹಳ ಚೆನ್ನಾಗಿ ವ್ಯಾಸಂಗ ಮಾಡಬೇಕು" ಎಂಬ ಸಲಹೆಯನ್ನಾತ ನೀಡಿದ್ದ. ನನ್ನ ತಂದೆ ಒಂದು ಆಟೋರಿಕ್ಷಾ ಚಾಲಕ. ಅವನು ನನ್ನನ್ನು ದೆಹಲಿಗೆ ಕಳಿಸಲು ಸಾಧ್ಯವಾಗುತ್ತಿರಲಿಲ್ಲ. ನನ್ನ ಭೌತಶಾಸ್ತ್ರ ಉಪಾಧ್ಯಾಯರೊಬ್ಬರು ಸಹಾಯ ನೀಡಿದ್ದರಿಂದ ಆ ಸಂಸ್ಥೆಯಲ್ಲಿ ವ್ಯಾಸಂಗ ಮಾಡಲು ದಾಖಲಾದೆ. ಆ ವರ್ಷ ಸಾಮಾನ್ಯ ಅರ್ಹತೆಯ ಪಟ್ಟಿಯಲ್ಲಿದ್ದ ಕಡೆಯ ವಿದ್ಯಾರ್ಥಿ ಪಡೆದಿದ್ದ ಶೇ. ೬೬ರಷ್ಟು ಅಂಕಗಳನ್ನು ನಾನೂ ಪಡೆದಿದ್ದೆ. ನನ್ನ ತಂದೆ ನಿಪಾರ್ತ್ ಸಿಂಗ್ ಮತ್ತು ತಾಯಿ ಮುನ್ನಾದೇವಿ ಬಹಳ ಖುಷಿಪಟ್ಟಿದ್ದರು. ವೈದ್ಯಕೀಯ ಸಂಸ್ಥೆಯಲ್ಲಿ ನನ್ನನ್ನು ಬಿಟ್ಟು ಅವರು ತೆರಳಿದ ಮೇಲೆ ಒಬ್ಬ ಹಿರಿಯ ವಿದ್ಯಾರ್ಥಿ ನನ್ನನ್ನು ಬರಹೇಳಿದ, ನನ್ನ ಬಗ್ಗೆ ಎಲ್ಲಾ ಹೇಳಬೇಕೆಂದು ಬಯಸಿದ. ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ನಾನೇ ಮೊದಲಿಗನೆಂದು ಹೇಳಿದೆ. ತಕ್ಷಣವೇ ಕೊಠಡಿಯಿಂದ ಹೊರತಳ್ಳಿ ನನ್ನನ್ನವನು ಬೀಳಿಸಿದ. ಇದು ಮೊದಲ ದಿನದ ಸ್ವಾಗತ! ಮತ್ತೊಮ್ಮೆ ಅದೇ ರೀತಿ ನನ್ನನ್ನು ಅವಮಾನಗೊಳಿಸಲು ಯತ್ನಿಸಿದಾಗ ಅಧಿಕಾರಿಗಳಿಗೆ ದೂರು ನೀಡುವುದಾಗಿ ಅವನನ್ನು ಗದರಿಸಿದೆ. ನನ್ನ ಸುದ್ದಿಗೆ ಮತ್ತೆ ಅವನು ಬರಲಿಲ್ಲ; ಆದರೆ ಅವನ ಸ್ನೇಹಿತರೆಲ್ಲಾ ನನಗೆ ಬಹಿಷ್ಕಾರ ಹಾಕುವಂತೆ ಮಾಡಿದ.

ನನ್ನ 'ಕೆಳ' ಜಾತಿಯ ಅರಿವು ಸದಾ ಇರುವಂತೆ ಮಾಡಿದ ಪ್ರಸಂಗಗಳು ಹಲವು. ವಿದ್ಯಾರ್ಥಿನಿಲಯದ ನನ್ನ ಭಾಗದಲ್ಲಿ ನಾನೊಬ್ಬನೇ ಈ ಗುಂಪಿಗೆ ಸೇರಿದ್ದವನು. ಒಂದು ದಿನ ನನ್ನ ಕೊಠಡಿಯ ಬಾಗಿಲ ಮೇಲೆ ಬರೆದಿದ್ದ ಒಕ್ಕಣೆ ಇದು: "ನೀನು ಇಲ್ಲಿ ಯಾರಿಗೂ ಬೇಡವಾದವನು, ಎಲ್ಲಿಯಾದರೂ ಕೇ... ಕೊಂಡು ಹಾಳಾಗಿ ಹೋಗು." ಇನ್ನೊಮ್ಮೆ: "ಕೇರಂ ಬೋರ್ಡ್‌ನ್ನು ಎಲ್ಲರೂ ಬಳಸಬಹುದು, ೪೫ನೆಯ ಕೊಠಡಿಯವನನ್ನು ಬಿಟ್ಟು." ಅವೇಳೆಯಲ್ಲಿ ಕದ ಬಡಿಯುವುದು, ಒದೆಯುವುದು, ಕೂಗುವುದು ನಡೆದೇ ಇತ್ತು. ನಾನು ಬಾಗಿಲು ತೆಗೆಯುವ ವೇಳೆಗೆ ಕಂಬಿಕಿತ್ತುಬಿಡುತ್ತಿದ್ದರು. ಆ ಕೊಠಡಿಯಿಂದ ನನ್ನನ್ನು ಓಡಿಸುವುದು ಅವರ ಉದ್ದೇಶ. ಏನಾದರೂ ಸರಿ, ಅಲ್ಲಿಂದ ಹೋಗಕೂಡದೆಂದು ನನ್ನ ನಿರ್ಧಾರ. ಹೀಗಾಗಿ ನನ್ನವರು ಮಾತ್ರವೇ ನನಗೆ ಸ್ನೇಹಿತರಾಗಲು ಸಾಧ್ಯವಿತ್ತು. ನವೋದಯ ವಿದ್ಯಾಲಯದಲ್ಲಿ ಏಳು ವರ್ಷ ಇಂಥದೇ ಅನುಭವ ಹೊಂದಿದ್ದೆನಾದ್ದರಿಂದ ನಾನು ವಿಚಲಿತನಾಗಲಿಲ್ಲ. ಆದರೆ ಆ ಅನುಭವಕ್ಕಿಂತ ಹತ್ತುಪಟ್ಟು ಹೆಚ್ಚು ಇಲ್ಲಿ, ಅಷ್ಟೆ. ಅಲ್ಲಿ ಒಟ್ಟಿಗೆ ಊಟ ಮಾಡುವುದಾದರೂ ಇತ್ತು. ಇಲ್ಲಿ ಅದೂ ಇಲ್ಲ. ದೊಡ್ಡ ಸಂಸ್ಥೆಗೆ ಹೋದರೆ ಸನ್ನಿವೇಶ ಉತ್ತಮವಾಗಿರುತ್ತದೆಂಬ ನನ್ನ ನಿರೀಕ್ಷೆ ಹುಸಿಯಾಯಿತು.

ಸಾಮಾನ್ಯ ಅರ್ಹತೆಯ ವಿದ್ಯಾರ್ಥಿಗಳೆಲ್ಲಾ ಜಾತಿವಾದಿಗಳಲ್ಲವೆಂಬುದು ನಿಜ; ಆದರೆ ಈ ವೈದ್ಯಕೀಯ ಸಂಸ್ಥೆಯಲ್ಲಿ ಜಾತಿಯ ಪಿಡುಗು ಇಲ್ಲದಿರುವ ವಿಭಾಗವೇ ಇಲ್ಲ. ವಿದ್ಯಾರ್ಥಿ ಸಂಘದಲ್ಲಿ ಸಹ ನಮಗೆ ಪ್ರಾತಿನಿಧ್ಯವಿರುವುದಿಲ್ಲ. ನಾವು ಕ್ರಿಕೆಟ್ ಆಡಕೂಡದು. ಬಾಸ್ಕೆಟ್‌ಬಾಲ್ ಆಡಹೋದರೆ ಆಟಗಾರರು ನಮ್ಮತ್ತ ಚೆಂಡನ್ನು


ಬಾಡಿಗದಾರರೋ...?

ಏಸೆಯುವುದೇ ಇಲ್ಲ. ೨೦೦೩ರಲ್ಲಿ ವಿದ್ಯಾರ್ಥಿಗಳ ಒಂದು ಸಮಾರಂಭ. ದ್ವೇಷದ ವಾತಾವರಣ ಬಿಗಡಾಯಿಸಿತ್ತು. ಒಬ್ಬ ದಲಿತ ವಿದ್ಯಾರ್ಥಿಯನ್ನು ಚೆನ್ನಾಗಿ ಚಚ್ಚಿದರು; ಅವನ ಪ್ರಾಣ ಉಳಿದಿದ್ದೇ ಹೆಚ್ಚು ಅಧಿಕಾರಿಗಳಿಗೆ ದೂರು ನೀಡಿದೆವು. ಎರಡು ಗುಂಪುಗಳವರನ್ನೂ ಸಂಸ್ಥೆಯಿಂದ ಹೊರಹಾಕಲು ಸಿದ್ಧವೆಂಬ ಉತ್ತರ ದೊರೆಯಿತು. ಚಚ್ಚಿದವರು ಹಾಗೂ ಚಚ್ಚಿಸಿಕೊಂಡವರನ್ನು ಸಮಾನವಾಗಿ ಕಾಣುವ ಔದಾರ್ಯ ಅವರದು!




೨೦೦೬ರ ಮೀಸಲಾತಿ ವಿರೋಧಿ ಪ್ರತಿಭಟನೆಗಳ ಸಂದರ್ಭದಲ್ಲಿ ನಮ್ಮ ಮೇಲಿನ ಉಪಟಳವು ಹದ್ದು ಮೀರಿತು. ಒಂದು ಸಾವಿರಕ್ಕೂ ಹೆಚ್ಚು ಮಂದಿ ಹೊರಗಿನವರು ಸಂಸ್ಥೆಯ ಆವರಣದಲ್ಲಿ ವಾಸ ಮಾಡುತ್ತಿದ್ದರು. ನಮ್ಮ ವಿದ್ಯಾರ್ಥಿನಿಲಯಗಳಲ್ಲಿ ಅವರಿಗೆ ಊಟ-ವಸತಿ ವ್ಯವಸ್ಥೆ ಕಲ್ಪಿಸಲಾಗಿತ್ತು. ''ಈ ಚಮ್ಮಾರರು ಏನು ಮಾಡುತ್ತಾರೆ ನೋಡುತ್ತೇವೆ'' ಎಂಬ ಹೀಯಾಳಿಕೆ ಸದಾ ಕೇಳಿಬರುತ್ತಿತ್ತು. ಕಾಲುಕೆರೆದು ಜಗಳಕ್ಕೆ ಬರಲು ಅವರದು ಯಾವಾಗಲೂ ಕಾತುರ. ತರಬೇತಿ ಪಡೆಯುತ್ತಿದ್ದ ನಮ್ಮವರಾದ ಕೆಲವು ವೈದ್ಯರನ್ನು ಹೊಡೆಯಲು ಹೊಂಚುಹಾಕುತ್ತಿದ್ದರು. ದೂರು ಕೊಡುವುದರಲ್ಲಿ ಅರ್ಥವಿರಲಿಲ್ಲ. ನಮ್ಮ ದೂರು ಕೇಳುವವರು ಯಾರು! ವೈದ್ಯಕೀಯ ಸಂಸ್ಥೆಯಲ್ಲಿದ್ದ ನಾವೆಲ್ಲಾ (ಅಂದರೆ, ಪರಿಶಿಷ್ಟ ಜಾತಿ, ಬುಡಕಟ್ಟು ಜನಾಂಗದವರು ಹಾಗೂ ಇತರ ಹಿಂದುಳಿದ ಜಾತಿಗಳವರು) ಮೀಸಲಾತಿಯ ವಿರೋಧಿಗಳೆಂಬಂತೆ ಮಾಧ್ಯಮಗಳು ಬಿತ್ತರಿಸಿದವು. ನಮ್ಮ ಎಷ್ಟೋ ಕಿರಿಯ ವಿದ್ಯಾರ್ಥಿಗಳನ್ನು ಪ್ರತಿಭಟನೆಗಳಲ್ಲಿ ಭಾಗವಹಿಸಲು ಬಲವಂತವಾಗಿ ಎಳೆದೊಯ್ದರು. ಪೊಲೀಸರ ಏಟುಗಳನ್ನು ತಿಂದವರೂ ಇವರೇ. ನಾನು ಮುಂದೆ ನಿಂತು ನಿರ್ದೇಶಕರ ಗಮನಕ್ಕೆ ಇದನ್ನೆಲ್ಲಾ ತಂದೆ. ಆದರೆ ಅದು ನಿಷ್ಫಲವಾಯಿತು. ವ್ಯಾಯಾಮಶಾಲೆಯ ಕಾರ್ಯದರ್ಶಿ ನಮ್ಮವನು; ಅವನನ್ನು ಹಿಡಿದು ಹೊಡೆದರು. ಇನ್ನೆಷ್ಟು ಸಹಿಸುವುದೆಂದು ಕಡೆಗೆ ನಿರ್ದೇಶಕ ಡಾ|| ಪಿ. ವೇಣುಗೋಪಾಲ್‌ಗೆ ಮನವಿಪತ್ರ ಸಲ್ಲಿಸಿದೆವು. ಇಪ್ಪತ್ತನಾಲ್ಕು ಗಂಟೆಗಳಲ್ಲಿ ಪರಿಹಾರ ನೀಡುವುದಾಗಿ ತಿಳಿಸಿದ ಈ ಮಹಾತ್ಮ ನಾವು ಯಾರ ವಿರುದ್ಧ ದೂರು ಕೊಟ್ಟಿದ್ದೆವೆಂಬುದನ್ನು ಆ ಪುಂಡರಿಗೆ ಹೇಳಿದ! ಅವರೆಲ್ಲಾ ಒಟ್ಟಾಗಿ ನಮ್ಮನ್ನು ಒಬ್ಬೊಬ್ಬರನ್ನೇ ಕಂಡು ದೂರು ಹಿಂತೆಗೆದುಕೊಳ್ಳದಿದ್ದರೆ ಚರ್ಮ ಸುಲಿಯುವುದಾಗಿ ಬೆದರಿಸಿದರು. ನಾವು ಅದಕ್ಕೆ ಅಂಜಲಿಲ್ಲ. ಬದಲಾಗಿ, ಈ ಬಾರಿ ಸಂಸ್ಥೆಯ ಅಧ್ಯಕ್ಷರಿಗೆ ಮನವಿ ಸಲ್ಲಿಸಿದೆವು. ಮತ್ತೆ ನಿರಾಶೆ. ಆಮೇಲೆ ನಾವು ಮಾಧ್ಯಮಗಳ ಆಸರೆ ಪಡೆಯಲು ಹೊರಟೆವು. ಸದ್ಯದಲ್ಲೇ ಜರುಗಲಿದ್ದ ವಿದ್ಯಾರ್ಥಿ ಸಂಘದ ಸಮಾರಂಭಕ್ಕೆ ನಾವು ಅಡ್ಡಿಯುಂಟು ಮಾಡುತ್ತಿದ್ದೇವೆಂಬ ಆರೋಪ ಹೊರಿಸಲಾಯಿತು. ವಿದ್ಯಾರ್ಥಿಗಳನ್ನು ರೊಚ್ಚಿಗೇಳಿಸುವ ಉದ್ದೇಶ ಇದರ ಹಿಂದಿತ್ತು. ನಮ್ಮ ನಿಲುವನ್ನು ಸ್ಪಷ್ಟಪಡಿಸುವ ಭಿತ್ತಿಪತ್ರಗಳನ್ನು ಹೊರತಂದು ನಾವು ಸಮಾರಂಭವನ್ನು ವಿರೋಧಿಸುತ್ತಿಲ್ಲವೆಂದು ತಿಳಿಸಿದ್ದಾಯಿತು. ಸಮಾರಂಭ ನಡೆದಾಗ ಒಂದು ಸಿ.ಡಿ.ಯನ್ನು ಹಂಚಲಾಯಿತು: ಡಾ|| ಅಂಬೇಡ್ಕರ್ ಅವರ ಪುಸ್ತಕಗಳನ್ನು ಸುಡುತ್ತಿದ್ದ ಚಿತ್ರಗಳದ್ದು. ಇದರ ವಿರುದ್ಧ ನಾನೊಂದು ಪತ್ರಿಕಾ ಸಂದರ್ಶನ ನೀಡಿದೆನಾದರೂ ನಮಗೆ ಬೆಂಬಲ ದೊರಕಲಿಲ್ಲ. ಒಂದು ವಿಚಾರಣಾ ಸಮಿತಿಯನ್ನು ನೇಮಿಸಿ ನನ್ನನ್ನು ವಿಚಾರಣೆಗೆ ಒಳಪಡಿಸಿದರು: ಸಂಸ್ಥೆಯ ಘನತೆಗೆ ನಾನೇಕೆ ಮಸಿಬಳಿಯುತ್ತಿದ್ದೇನೆಂಬುದು ಆಪಾದನೆ! ಮಾಧ್ಯಮಗಳಿಗೆ ಹೋಗಬೇಕಾಗಿ ಬಂದ ಅನಿವಾರ್ಯತೆಯನ್ನು ನಾನು ವಿವರಿಸಿ ಹೇಳಿದೆ.

ಮೀಸಲಾತಿ ಗುಂಪಿನವರಾರೂ ಇಂತಹ ಪ್ರತಿರೋಧವನ್ನು ಅವರೆಗೆ ಒಡ್ಡಿರಲಿಲ್ಲ. ನನಗೆ ಬುದ್ಧಿ ಕಲಿಸಿ, ಅದನ್ನು ಇತರರಿಗೆ ಎಚ್ಚರವೆಂಬ ರೀತಿಯಲ್ಲಿ ಹುನ್ನಾರ ನಡೆಯಿತು. ಡಿಸೆಂಬರ್‌ನಲ್ಲಿ ನನ್ನ ಪರೀಕ್ಷೆ. ಅದಾದನಂತರ ಉದ್ಯೋಗದಲ್ಲಿ ತೊಡಗಬಹುದಿತ್ತು. ಆದರೆ ನನ್ನನ್ನು ಅನುತ್ತೀರ್ಣನನ್ನಾಗಿಸಿದರು. ಮೂರು ಬಾರಿ ನಾನು ನಪಾಸಾದರೆ ನನಗೆ ಎಂದೆಂದಿಗೂ ಅನರ್ಹತೆಯ ಪಟ್ಟ ಬಂದುಬಿಡುತ್ತದೆ. ಮರುಪರೀಕ್ಷೆಯ ಸಂದರ್ಭ. ಎಂದೂ ಇಲ್ಲದ ಒಂದು ಮಾದರಿಯಲ್ಲಿ ನನ್ನ ಪರೀಕ್ಷೆಯನ್ನು ವೀಡಿಯೊ ಚಿತ್ರೀಕರಣ ಮಾಡಲಾಯಿತು. ಅದನ್ನು ನನಗೆ ಮೊದಲೇ ತಿಳಿಸಿರಲಿಲ್ಲ. ಆದ್ದರಿಂದ ಈ ಕಾನೂನುಬಾಹಿರ ಕ್ರಮದ್ವ ವಿರುದ್ಧ ನಿರ್ದೇಶಕರಿಗೆ ದೂರನ್ನಿತ್ತೆ. ನನ್ನ ಫಲಿತಾಂಶ ಹೊರಬೀಳುವ ಮುನ್ನಾದಿನ ಸಂಸ್ಥೆಯ ಆವರಣದಲ್ಲಿ ಭಿತ್ತಿಪತ್ರಗಳು ತುಂಬಿಕೊಂಡಿದ್ದವು: ದೂರು ಕೊಟ್ಟಿದ್ದ ಹಾಗೂ ಪತ್ರಿಕಾ ಸಂದರ್ಶನ ನೀಡಿದ್ದ ವಿದ್ಯಾರ್ಥಿ ತೇರ್ಗಡೆಯಾಗಿರಲಿಲ್ಲ, ಎಂದು ನಾನು ಪೊಲೀಸರಿಗೆ ಒಂದು ದೂರು ಕೊಟ್ಟೆ. ನಾವೂ ಹಲವು ಪ್ರತಿಭಟನೆಗಳನ್ನು ಮಾಡಿದೆವು. ತತ್ಫಲವಾಗಿ ಕೇಂದ್ರ ಸರ್ಕಾರವು ಒಂದು ಸಮಿತಿಯನ್ನು ನೇಮಿಸಿ ತನಿಖೆ ನಡೆಸಲು ಆದೇಶಿಸಿತು. ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಅಧ್ಯಕ್ಷ ಸುಖದೇವ್ ಥೋರಟ್ ಅದರ ಅಧ್ಯಕ್ಷರು. ವೈದ್ಯಕೀಯ ಸಂಸ್ಥೆಯ ನಿರ್ದೇಶಕರು ಆ ಸಮಿತಿಗೆ ಒಂದು ಕೊಠಡಿಯನ್ನು ಸಹ ಬಿಟ್ಟುಕೊಡಲಿಲ್ಲ. ಸಂಸ್ಥೆಯ ಆವರಣದಾಚೆ ತನಿಖೆ ನಡೆಯಿತು. ನಾವು ಸಮಿತಿಯ ಮುಂದೆ ಗುಂಪುಗುಂಪಾಗಿ ಹಾಜರಾಗಿ ಸಾಕ್ಷ್ಯ ನೀಡಿದೆವು.

ನನ್ನ ಮೌಖಿಕ ಪರೀಕ್ಷೆ. ವೈದ್ಯಕೀಯದ ಬಗ್ಗೆ ಯಾವ ಪ್ರಶ್ನೆಯನ್ನೂ ಕೇಳಲಿಲ್ಲ. ಕೇಳಿದ ಒಂದೇ ಪ್ರಶ್ನೆ: ''ಥೋರಟ್ ವರದಿಯೊಡನೆ ನಿನ್ನ ಸಂಬಂಧ ಎಂಥದು?'' ಆಂತರಿಕ ಮೌಲ್ಯಮಾಪನದಲ್ಲಿ ನನಗಿಂತಲೂ ಕಡಿಮೆ ಅಂಕ ಪಡೆದಿದ್ದ ಐದಾರು ಮಂದಿ ತೇರ್ಗಡೆಯಾದರು; ನಾನು ಮಾತ್ರ ಅನುತ್ತೀರ್ಣ. ಔಷಧಿ ವಿಭಾಗದ ಪರೀಕ್ಷೆಯಲ್ಲಿ ಒಂದೂವರೆ ಅಂಕಗಳಿಂದ ನಾನು ಫೇಲಾಗಿದ್ದೆ! ಈ ಮೌಖಿಕ ಪರೀಕ್ಷೆಯ ಹಿಂದಿನ ದಿನ ಅಧ್ಯಾಪಕರ ಸಭೆಯೊಂದು ನಡೆದಿತ್ತು; ನಾನು ಅನುತ್ತೀರ್ಣನಾದರೆ ನನಗೆ ಮರುಪರೀಕ್ಷೆ ಮಾಡಲು ಯಾರೂ ಒಪ್ಪಬಾರದೆಂದು ಅಲ್ಲಿ ನಿರ್ಣಯಿಸಲಾಗಿತ್ತು. ನಮಗೆ ಇದು ನಂತರದ ಕಾಲದಲ್ಲಿ ತಿಳಿದುಬಂದ ವಿಷಯ. ಸಂಸ್ಥೆಯ ಆಡಳಿತ ಮಂಡಲಿಯು ನನ್ನ ಮರುಪರೀಕ್ಷೆ ನಡೆಸುವಂತೆ ನಿರ್ದೇಶಕರಿಗೆ ಆಜ್ಞಾಪಿಸಿದೆ. ಅದನ್ನು ನಿರ್ದೇಶಕರು ಇನ್ನೂ ಮಾನ್ಯ ಮಾಡಿಲ್ಲ.

ಇದನ್ನೆಲ್ಲಾ ಮಾಡುತ್ತಿರುವುದು ನನಗಿಂತಲೂ ಕಿರಿಯರಾದವರನ್ನು ಹೆದರಿಸಲು ಎಂಬುದು ಎಲ್ಲರಿಗೂ ಗೊತ್ತು. ಅಂತಿಮ ತರಗತಿಯ ನನಗೆ ಹೀಗಾದರೆ ಅವರ ಗತಿಯೇನು ಎಂಬ ಎಚ್ಚರಿಕೆ ನೀಡುವ ಉದ್ದೇಶ ಸ್ಪಷ್ಟವಾಗಿದೆ.

ಇತ್ತೀಚೆಗೆ ಪೆನ್ಸಿಲ್ವೇನಿಯ ವಿಶ್ವವಿದ್ಯಾನಿಲಯದಲ್ಲಿ ತರಬೇತಿ ಪಡೆಯಲು ನನಗೆ ಅವಕಾಶ ಒದಗಿಬಂದಿತ್ತು. ನಮ್ಮ ಸಂಸ್ಥೆಗೆ ಅದು ಹಿಡಿಸಲಿಲ್ಲ. ಅವರ ಕೀಳುಮಟ್ಟದ ತಂತ್ರ ಎಲ್ಲಿಗೆ ಮುಟ್ಟಿತೆಂದರೆ, ಸಂಸ್ಥೆಯ ಹಿರಿಯ ವಿದ್ಯಾರ್ಥಿಗಳು ಕೆಲವರು ಅಮೆರಿಕಾದ ಆ ವಿಶ್ವವಿದ್ಯಾಲಯದಲ್ಲಿದ್ದಾರೆ; ಅವರಿಗೆ ತಾಕೀತು ಮಾಡಿ ನನ್ನ ಬಾಲ ಕತ್ತರಿಸಬೇಕೆಂದು ವಿನಂತಿಸಿಕೊಂಡಿದ್ದಾರೆ!

ನಾನು ವೈದ್ಯನಾಗದೆ ಹೋದರೆ ಅಷ್ಟೇ ಹೋಯಿತು... ಆದರೆ ನಾನು ಹೋರಾಟದಿಂದ ಹಿಂದೆಗೆಯುವುದಿಲ್ಲ. ನಾನೆಂದೂ ವೈದ್ಯನಾಗದೆಯೇ ಉಳಿದುಬಿಟ್ಟರೆ ಅಂಜಿಕೆಯಿಲ್ಲ. ನನಗೆ ಈಗಾಗಲೇ ತೃಪ್ತಿ ಇದೆ: ಹಿಂದೆಂದೂ ನಮ್ಮ ಧ್ವನಿ ಈ ಸಂಸ್ಥೆಯಲ್ಲಿ ಕೇಳಿಸಿರಲಿಲ್ಲ; ನಾನು ಕೇಳಿಸಿದ್ದೇನೆ. ನಮ್ಮವರೀಗ ಪ್ರತಿಭಟನೆಗಳಲ್ಲಿ ಭಾಗವಹಿಸಲು ಮುಂದಾಗುತ್ತಿದ್ದಾರೆ. ನಾವು ೪೫ ವಿದ್ಯಾರ್ಥಿಗಳಿದ್ದೇವೆ. ಆ ಪೈಕಿ ೪೦ ಮಂದಿಯಾದರೂ ಪ್ರತಿಭಟನೆಗಳಿಗೆ ಬರುತ್ತಿದ್ದಾರೆ.

ನನ್ನ ತಂದೆ ನನ್ನೂರಿನಲ್ಲಿ ಒಬ್ಬ ಆಟೋಚಾಲಕ. ಆದರೆ ಆತನಿಗೆ ಅಪಾರ ಗೌರವವಿದೆ. ನನ್ನ ಸ್ವಾಭಿಮಾನವನ್ನು ಕಾಪಾಡಿಕೊಳ್ಳುವುದನ್ನು ನನಗೆ ನನ್ನ ತಂದೆ-ತಾಯಿಯರು ಕಲಿಸಿದ್ದಾರೆ. ನಾನದನ್ನು ಅನುಷ್ಠಾನಕ್ಕೆ ತರಲು ಯತ್ನಿಸುತ್ತಿದ್ದೇನೆ. ಅದೇನೂ ಸುಲಭಸಾಧ್ಯವಾಗಿಲ್ಲ; ಆದರೆ ಅಷ್ಟು ಕಠಿಣವೂ ಅಲ್ಲವೆಂದು ಮನಗಾಣುತ್ತಿದ್ದೇನೆ. ●

# ಅನುಭವಗ್ರಹಣ ಹಾಗೂ ಸಹೃದಯತೆ

ಅನುಭವಗ್ರಹಣಕ್ಕೆ ಯಾರ ದಯೆಯೂ ಬೇಕಿಲ್ಲ, ಹೃದಯವೊಂದಿದ್ದರೆ ಸಾಕು. ಹೃದಯಕ್ಕೆ ಹತ್ತಿರವಾದುದು ಸತ್ಯಕ್ಕೆ, ಶಿವನಿಗೆ, ಸೌಂದರ್ಯಕ್ಕೆ ಹತ್ತಿರವಾಗಿರುತ್ತದೆ. ಹೃದಯವಂತಿಕೆಯ ಒಂದು ಕ್ರಿಯೆ ದುರ್ಗಮ ಪ್ರಯಾಣವನ್ನೂ ಸುಗಮಗೊಳಿಸುತ್ತದೆ. ಆದ್ದರಿಂದ ಅನುಭವಗ್ರಹಣಕ್ಕೆ ಸಹೃದಯತೆಯ ಅಗತ್ಯವಿದೆ ಎನ್ನುವುದರಲ್ಲಿ ಎರಡು ಮಾತಿಲ್ಲ.

ಪ್ರತಿಯೊಬ್ಬ ವ್ಯಕ್ತಿಯಲ್ಲೂ ಒಬ್ಬ ಸಹೃದಯಿ ಓದುಗ, ಪ್ರೇಕ್ಷಕ ಹಾಗೂ ವಿಮರ್ಶಕ ಇದ್ದೇ ಇರುತ್ತಾನೆ, ಕಾಲಕಾಲಕ್ಕೆ ತನಗರಿವಿಲ್ಲದೇ ಪ್ರಕಟಗೊಳ್ಳುತ್ತಾನೆ. ಪ್ರೇಮವೇ ಬೆಂಕಿ, ದಾರ್ಶನಿಕ ಅನುಭವವೇ ಬೆಳಕು. ಇದೂ ಒಂದು ಗ್ರಹಿಕೆ. ಇದರಲ್ಲಿ ಸತ್ಯ ಎಷ್ಟು, ಸುಳ್ಳು ಎಷ್ಟು, ಎಂಬುದರ ಬಗೆಗಿನ ಜಿಜ್ಞಾಸೆಯೇ ವಿಮರ್ಶೆ. ಸೃಷ್ಟಿಕ್ರಿಯೆಗೆ ಹೇಗೊ ಹಾಗೆ ವಿಮರ್ಶೆಗೂ ಹೃದಯಸ್ಪಂದನದ ಅಗತ್ಯವಿದೆ. ಅನನ್ಯ ಪ್ರೇಮದ ಅಗತ್ಯವಿದೆ. ಅನನ್ಯ ಪ್ರೇಮದ ಆಳದಲ್ಲೇ ಕಟುವಿರಹವೂ ಇರುತ್ತದೆಯೆಂದು ಗ್ರಹಿಸುವ ಹಂತವನ್ನು ಏನೆಂದು ಕರೆಯಬೇಕು? ಮೋಕ್ಷವೇ, ಐಕ್ಯವೇ, ಮರಣವೇ? ಮರಣದಿಂದ ಮೇಲೆದ್ದು ಬರುವುದೇ ಜನನ. ಈ ಜನನ ಅಲೌಕಿಕ, ಅನುಪಮ ಹಾಗೂ ಅದ್ವಿತೀಯ. ಇಲ್ಲಿ ಬರಿ ಹೃದಯವಿಲ್ಲ, ಹುಡುಕಾಟವಿದೆ, ಸ್ವೀಕರಣವಿದೆ, ನಿರಾಕರಣವೂ ಇದೆ. ಇಂಥ ನಿರಾಕರಣವನ್ನೂ ಸ್ವೀಕರಿಸುವುದೇ ಶ್ರೇಷ್ಠತೆಯ ಮಾನದಂಡ.

ನಾವು ಗ್ರಹಿಸುವ ಎಲ್ಲವನ್ನೂ, ನಾವು ಗ್ರಹಿಸಿದ ರೀತಿಯಲ್ಲೇ ಸ್ವೀಕರಿಸಬೇಕು ಎಂಬುದು ಅಹಂಕಾರ. ಅಹಂಕಾರ ಆರ್ಯತ್ವದ ಅರಿ. ಅರಿವಿನಿಂದಲೇ ಅರಿಯ ಮೃತ್ಯು. ಇದು ಮೃತ್ಯು ಮೂಲದ ಆನಂದ. ಇದನ್ನೇ ತುರೀಯಾವಸ್ಥೆಯೆಂದೂ ಕರೆಯಲಾಗುತ್ತದೆ. ಗ್ರಹಿಕೆ ಈ ಹಂತ ತಲುಪಿದಾಗಲೇ ಸಾರ್ಥಕತೆ ಸಾಧ್ಯವಾಗುವುದು. ಇಂಥ ಹುಡುಕಾಟದ ಮಾದರಿ ಅಲ್ಲಮ, ಮಹಾದೇವಿಯಕ್ಕ, ತೋಂಟದ ಸಿದ್ಧಲಿಂಗಯತಿ ಹಾಗೂ ಜಲಾಲುದ್ದೀನ್ ರೂಮಿಯಂಥವರು. ಅಲ್ಲಮನ ಈ ವಚನವನ್ನು ನೋಡಿ :

*ಅಂಬರದೊಳಗೊಂದು ಅಡವಿ ಹುಟ್ಟಿತ್ತು.*  
*ಆ ಅಡವಿಯೊಳಗೊಬ್ಬ ವ್ಯಾಧನೈದಾನೆ.*  
*ಆ ವ್ಯಾಧನ ಕೈಯಲ್ಲಿ ಸಿಕ್ಕಿತ್ತು ಒಂದು ಮೃಗವು.*  
*ಆ ಮೃಗವ ಕೊಂದಲ್ಲದೆ ವ್ಯಾಧ ಸಾಯನು !*  
*ಅರಿವು ಬರಿದುಂಟೆ ಗುಹೇಶ್ವರಾ ?* (ಅ.ವ. ಸಂ. ೩೧೯)

ತನ್ನೊಳಗಿನ ಪರಕೀಯನನ್ನು ಹುಡುಕಿ ಹೊರಹಾಕುವ ಈ ಪ್ರಕ್ರಿಯೆ ಅನನ್ಯವಾದುದು. ರೂಮಿ ಕೂಡ ಇಂಥದೇ ಹುಡುಕಾಟದಲ್ಲಿ ತನ್ನನ್ನು ತಾ ಕಳಕೊಂಡವ.

*ನನ್ನನ್ನು ನೋಡಿಕೊಂಡೆ. ನಾನು ಇರಲೇ ಇಲ್ಲ*  
*ಚಂದ್ರನ ಬೆಳಕಿನಲ್ಲಿ ನನ್ನ ದೇಹ ಆತ್ಮವೇ ಆಗಿಬಿಟ್ಟಿತ್ತು.*  
*ಆತ್ಮದೊಳಗೆ ನಾನು ಪ್ರಯಾಣ ಮಾಡಿದೆ.*  
*ಬರಿ ಚಂದ್ರನೇ ಕಂಡ, ಎಲ್ಲೆಲ್ಲೂ ಬರಿ ಚಂದ್ರನೇ.*  
*ಶೂನ್ಯದ ಗುಟ್ಟೆಲ್ಲ ಬಿಚ್ಚಿಟ್ಟ ಹಾಗೆ.*

ಶೂನ್ಯ ಎಂದರೆ ಸೊನ್ನೆ, ಸೊನ್ನೆ ಎಂದರೆ 'ಏನಿಲ್ಲ' ಎಂದರ್ಥ. ಸೊನ್ನೆಯ ಸಂಪಾದನೆ ಅಪಾರ ಎನ್ನುವುದು ಅದರ ಹಿಂದೆ ಒಂದು ಸಂಖ್ಯೆ ಬಂದಾಗ ಅರಿವಾಗುತ್ತದೆ. ಆ ಒಂದು ನಾನು. ನಾನಲ್ಲದ ನಾನು, ನಾನಿಲ್ಲದ ನಾನು. ಇದು ಗ್ರಹಿಕೆ ಹಾಗೂ ಅನುಭವದ ಪರಾಕಾಷ್ಠೆ. ಅಕ್ಷರದ ಅರಿವು ಹಾಗೂ ಹೃದಯದೊಳಗಿನ ತಲ್ಲಣಗಳ ಸಂಯೋಗದಿಂದಲೇ ಸಾಧ್ಯ ಈ ಶೂನ್ಯ ಸಂಪಾದನೆ. ಇದು ಮಾತು ಮತ್ತು ಬರಹಗಳೆರಡನ್ನೂ ಮೀರಿದ್ದು.

ಅರಿವಿಗೇಕೆ ಅಕ್ಷರದ ಮೈಲಿಗೆ! ಬೇಕಾಗಿಲ್ಲ. ಅಪರಾಳ ತಮ್ಮಣ್ಣ ಬರೆದ ಭಾಗವತದ ಒಂದು ಎಳೆ. ಒಂದು ಪಾರಾಯಣ ಕೃತಿಯನ್ನು ಶ್ರೀಕೃಷ್ಣ ಪಾರಿಜಾತವೆಂಬ ಸ್ವತಂತ್ರ ರಾಗಪ್ರಕಾರವನ್ನಾಗಿಸಿದ್ದು, ಇದನ್ನು ಒಂದು ಶಾಸ್ತ್ರವನ್ನಾಗಿಸಿದ್ದು ಅಕ್ಷರಬಲ್ಲ ಪಂಡಿತರಲ್ಲ, ಹಳ್ಳಿಯ ನಿರಕ್ಷರಿ ಪ್ರೇಕ್ಷಕರು. ಅಟ್ಟದ ಮೇಲಿನ ಪಾತ್ರಧಾರಿಗಳೊಂದಿಗೆ ಅಟ್ಟದ ಮುಂದೆ ಕುಳಿತ ನಾಲಿಗೆ ಮೇಲೆಯೇ ಸಾಲಿ ಬೇಡುವ ಜಿಜ್ಞಾಸುಗಳು ನಿರಂತರ ಸಂವಾದ ನಡೆಸಿ ಅದಕ್ಕೊಂದು ಹೊಸ ಮೌಲ್ಯ ತಂದುಕೊಟ್ಟಿರುವುದು ಇದಕ್ಕೊಂದು ಜೀವಂತ ಉದಾಹರಣೆ. ಬರಹಕ್ಕೆ ಓದುಗ ಬೇಕು, ವಿಮರ್ಶಕ ಬೇಕು. ಆಟಕ್ಕೆ ನೋಡುಗ ಹಾಗೂ ವಿಮರ್ಶಕ ಬೇಕು. ಇವರು ನಿರಂತರ ಸಂವಾದದಲ್ಲಿ ತೊಡಗಿ ತಮ್ಮ ತಮ್ಮ ಜವಾಬ್ದಾರಿಯನ್ನು ನಿರ್ವಹಿಸಿದಾಗಲೇ ಅನುಭವದ ಅಡಿಗೆ ರುಚಿಯಾಗುತ್ತದೆ. ಜೀವನಯಾತ್ರೆ ಅರ್ಥಪೂರ್ಣವಾಗುತ್ತದೆ. 'ನನ್ನ ಜಾತ್ರೆ' ಎಂಬ ಲಾವಣಿಯ ಒಂದೆರಡು ನುಡಿಗಳನ್ನು ಅವಲೋಕಿಸಿ :

*ಜಾತ ಮುತ್ತಿನಂತಾ ಜನಾ ಕೇಳರಿ ಜಾತರ್‍ಯಾಂಗ ಮಾಡಬೇಕೋ-*  
*ಹಳಿಬಟ್ಟಿ ಹರಿದು ಹೊಸ ಕೌದಿ ಹೊಲದಂಗ*  
*ಬಾಳೇ ಮಾಡಬೇಕೊ*  
*ಹೊತಗೊಂಡು ಹೊರದಂಗಿರಬೇಕೋ-*  
*ಜಾತರೆಂದರ ಜಾತರೆಲ್ಲ ಇದು*  
*ಮೂರು ದಿನದ ಸಂತ್ಯೊ –*  
*ಮನಸಂಬು ಮಿಕದ ಹೊಟ್ಟಿ ತುಂಬಸಾಕ್ಹೋಗಿ*  
*ಹೊಟ್ಟಿ ಹರಕೊಂಡ ಕುಂತ್ಯೊ.*

ಹೀಗೆಯೆ – ಬದುಕು ಅನುಭವವೂ ಹೌದು, ಅನುಭಾವವೂ ಹೌದು, ಬೆಡಗು-ಬಿನ್ನಾಣವೂ ಹೌದು ಎಂದು ಅರಿಯಲು ಸಾಧನೆ ಹಾಗೂ ಸಹೃದಯತೆ ಎರಡೂ ಬೇಕು.

**ಬಿ. ಆರ್. ಪೋಲೀಸ್ ಪಾಟೀಲ**
ಪ್ರಾಂಶುಪಾಲರು, ಎಸ್.ಆರ್.ಎ. ಪದವಿಪೂರ್ವ ಕಾಲೇಜು, ಬನಹಟ್ಟಿ - ೫೮೭ ೩೧೧

---

*೫೨ನೇ ಪುಟದಿಂದ (ಗ್ರಾಮೀಣ ಸಮುದಾಯ...)*

ಕುಟುಂಬದ ಸಮಸ್ಯೆಗಳಿಗೆ ಸ್ಪಂದಿಸಲು ಲೇವಾದೇವಿದಾರರ ಸಾಲಕ್ಕೆ ಬಲಿಪಶುಗಳಾಗುತ್ತಿದ್ದಾರೆ.

* ಗ್ರಾಮೀಣ ಪ್ರದೇಶದಲ್ಲಿ ಕಾರ್ಯನಿರ್ವಹಿಸುವ ಕಾರ್ಯಕರ್ತೆಯರಲ್ಲಿ ಶೇ. ೪೫ ದೂರದ ಪ್ರದೇಶಗಳಿಂದ ಬರುತ್ತಿದ್ದು (೨೦ರಿಂದ ೩೦ ಕಿ.ಮೀ.) ಸಾರಿಗೆ ಸೌಲಭ್ಯ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಸಕಾಲಕ್ಕೆ ಸಾರಿಗೆ ಸೌಲಭ್ಯ ಸಿಗದೆ ಮತ್ತೆ ಗೈರುಹಾಜರಾಗುವ ಸಂಭವ ಹೆಚ್ಚುತ್ತದೆ.

* ಅನೇಕ ಕಡೆಗಳಲ್ಲಿ ಅಂಗನವಾಡಿ ಕೇಂದ್ರಗಳನ್ನು ತೆರೆದ ಕಟ್ಟಡಗಳಲ್ಲಿ ನಿರ್ವಹಿಸುತ್ತಿದ್ದು, ಬಾಡಿಗೆ ಜಾಗ, ದೇವಸ್ಥಾನ, ಹಾಗೂ ಸಮುದಾಯ ಭವನಗಳಲ್ಲಿ ಯಾವುದೇ ಮೂಲಭೂತ ಸೌಕರ್ಯಗಳೂ ಇಲ್ಲದೆ ಸೊರಗಿಹೋಗುತ್ತಿವೆ.

ಸಮುದಾಯದವರ ಅಸಹಕಾರ, ಸ್ಥಳೀಯ ಸಂಸ್ಥೆಗಳ ಕೊರತೆ ಇವೇ ಮೊದಲಾದ ಸಮಸ್ಯೆಗಳನ್ನು ಎದುರಿಸುತ್ತಿರುವ ಗ್ರಾಮೀಣ ಪ್ರದೇಶದ ಅಂಗನವಾಡಿ ಕಾರ್ಯಕರ್ತೆಯರು ವ್ಯವಸ್ಥಿತವಾಗಿ ತಮ್ಮ ಕಾರ್ಯವನ್ನು ನಿರ್ವಹಿಸಬೇಕಾದರೆ ಅವರಿಗೆ ವಿಶೇಷ ಸ್ಥಾನಮಾನಗಳನ್ನು ಕಲ್ಪಿಸುವುದರ ಮೂಲಕ ಗ್ರಾಮೀಣ ಸಮಾಜದ ಉದ್ಧಾರಕ ಪ್ರೇರಕಗಳಾಗಿ ಬಳಸಲು ಅವರಿಗೆ ಸೂಕ್ತ ಭದ್ರತೆ ಹಾಗೂ ವ್ಯವಸ್ಥೆಗಳನ್ನು ಒದಗಿಸುವ ಕ್ರಮಗಳನ್ನು ಜರುಗಿಸುವುದರ ಮೂಲಕ ಅಭಿವೃದ್ಧಿ ಯೋಜನೆಗಳನ್ನು ಕೈಗೆತ್ತಿಕೊಳ್ಳಲು ಸಹಕಾರ ಹಾಗೂ ಪ್ರೋತ್ಸಾಹಗಳನ್ನು ಸರ್ಕಾರ, ಸರ್ಕಾರೇತರ ಸಂಸ್ಥೆಗಳು, ಸಮುದಾಯ ಹಾಗೂ ಪ್ರಜ್ಞಾವಂತ ನಾಗರಿಕರು ಈ ನಿಟ್ಟಿನಲ್ಲಿ ಗಮನ ಹರಿಸಬೇಕಾಗಿದೆ.

ಮಹದೇವಸ್ವಾಮಿ ಕೆ.
ಹಿರಿಯ ಸಂಶೋಧಕರು, ಸಮಾಜಶಾಸ್ತ್ರ ವಿಭಾಗ, ಮಾನಸಗಂಗೋತ್ರಿ, ಮೈಸೂರು - ೬

# 'ಕರ್ನಾಟಕ 50ರ ಸಂಭ್ರಮ'ಕ್ಕೆ ನವಕರ್ನಾಟಕದ ಕೊಡುಗೆ






















ಕನ್ನಡದ ಚಿಣ್ಣರಿಗೆ ಬಣ್ಣದ ಚಿತ್ರಪಟಗಳು !

ಪುಟಾಣಿಗಳಿಗೆ ನೀಡಲು ಚೆಂದದ ಉಡುಗೊರೆ !!

ಪ್ರತಿಯೊಂದು ಪಟದ ಹಿಂಬದಿಯಲ್ಲಿ ಪುಟಾಣಿಗಳಿಗಾಗಿ
ಸಚಿತ್ರ ಕಥೆ ಹಾಗೂ ಚಿತ್ರ ಮಾಹಿತಿಗಳಿವೆ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು - 1. ✆ : 22203580, 30578022, ಫ್ಯಾಕ್ಸ್: 30578023
e-mail : navakarnataka@vsnl.com web : www.navakarnatakabooks.com






























**ಎಲ್ಲ ಚಿತ್ರಪಟಗಳು ಇಂಗ್ಲಿಷಿನಲ್ಲಿಯೂ ಲಭ್ಯವಿವೆ ! ಬೆಲೆ ರೂ. 30 ಮಾತ್ರ**

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna

**HOSATHU** Kannada Monthly / July 2007 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every mon
WPP No. 14. Licenced to post without prepayment. RNI Regn. No. KARKAN/1999/614.